

ಸಪ್ತಗಿರಿಗಳ ಒಡೆಯ
ಶ್ರೀ ಶ್ರೀನಿವಾಸನ ಚರಣಕಮಲಗಳಿಗೆ
ಭಕ್ತಿಯಿಂದ ಸಮರ್ಪಿಸಿದ್ದೇನೆ.

"ಕಂಡಕ್ಟರ್ ಮಗ ಕಲೆಕ್ಟರ್ ಆಗ್ತಾನಾ?" ರಾಜಶೇಖರ್ ಗಹಗಹಿಸಿ ನಕ್ಕರು. ಕೋಪದಿಂದ ತಲೆಯೆತ್ತಿ ಅವರ ಕಡೆ ನೋಡಿದಳು ಮಧುಮತಿ.

ಕಂಡಕ್ಟರ್ ಎಷ್ಟು ಹೀನವಾಗಿ ಕಾಣಿಸ್ತಿದ್ದಾನೆ ಈ ದಿನ. ಒಂದು ದಿನ ಇವನನ್ನು ಗದರಿಸಿ ವಿದ್ಯೆ ಹೇಳಿಕೊಟ್ಟ ಗುರು ಆ ಕಂಡಕ್ಟರ್ ಅಲ್ವಾ? ಇವನು ಮಾಡುತ್ತಿದ್ದ ಚೇಷ್ಟೆಗಳನ್ನು ಮುಚ್ಚಿಟ್ಟು ತಂದೆಯ ಕಣ್ಣಿಗೆ ಅವು ಬೀಳದಂತೆ ಮಾಡಿದ್ದುದು ಆ ಕಂಡಕ್ಟರ್ ಅಲ್ವಾ? ಅವಳ ಹಲ್ಲುಗಳು ಕರಕರ ಎಂದಿತು. ತಂದೆಯವರು ಓದಿಸುವುದಿಲ್ಲ ಹೋಗು ಎಂದಾಗ, "ರಾಜ, ನಾ ಓದಿಸ್ತೀನಿ ಬಿಡು" ಎಂದು ಅಭಯವಿತ್ತು ಓದಿಸಿದ ಅವರನ್ನು ಇಂದು 'ಕಂಡಕ್ಟರ್' ಎಂದು ಎಷ್ಟು ಹೀನಾಯ ಮಾಡ್ತಿದ್ದಾನೆ!

ಅವಳ ರೋಷಯುಕ್ತವಾದ ಕಣ್ಣುಗಳಲ್ಲಿ ನೀರು ತುಂಬಿತು. ಕೋಪದಿಂದ ಎದ್ದು ರಾಜಶೇಖರನನ್ನೊಮ್ಮೆ ದುರುದುರನೆ ನೋಡಿ ತನ್ನ ಕೊಠಡಿಗೆ ಹೊರಟುಹೋದಳು.

ರಾತ್ರಿ ಹತ್ತು ಗಂಟೆಯ ಮೇಲಾಗಿತ್ತು. ಮನೆಯೆಲ್ಲಾ ನಿಶ್ಶಬ್ದವಾಗಿತ್ತು. ಕಾಲೇಜಿನಲ್ಲಿ ಓದಬೇಕೆಂಬ ತನ್ನ ಕೋರಿಕೆ, ಆಸೆ ಕುಸಿದುಹೋಗಿದ್ದರಿಂದ ನಿಸ್ಸಹಾಯನಾಗಿ, ದೀನನಾಗಿ ತನ್ನಲ್ಲಿ ತಾನೇ ನಿರಾಸೆಗೊಂಡ ವಾಸು ಥಟಕ್ಕನೆ ಏನೋ ಜ್ಞಾಪಕ ಬಂದಂತೆ ಎದ್ದು ಮಧುಮತಿ ಮಲಗಿದ್ದ ಮಂಚದೆಡೆಗೆ ನಡೆದ.

"ಅಮ್ಮಾ! ನಿದ್ದೆ ಮಾಡ್ತಿದ್ದೀಯಾ?" ತಟ್ಟಿ ಕರೆದ ವಾಸು.

ಪಕ್ಕಕ್ಕೆ ತಿರುಗಿ, ಊದಿದ್ದ ಕಣ್ಣುಗಳನ್ನು ತೆರೆದು ಮಗನನ್ನು ಕರುಣೆಯಿಂದ ನೋಡುತ್ತಾ "ಯಾಕಪ್ಪಾ ವಾಸು, ಇನ್ನೂ ನಿದ್ದೆಮಾಡಲಿಲ್ವಾ ?" ಎಂದು ಮರು ಪ್ರಶ್ನಿಸಿದಳು ಮಧುಮತಿ.

ಸಾವಧಾನದಿಂದ ಅವಳ ಪಕ್ಕದಲ್ಲಿ ಕೂಡುತ್ತಾ, "ನಿದ್ದೆ ಬರ್ಲಿಲ್ಲಮ್ಮ" ಎಂದು ಹೇಳಿ ಏನೋ ಸಂಕೋಚಪಡುತ್ತಾ ಎರಡು ಕ್ಷಣಗಳ ನಂತರ, "ಅಮ್ಮಾ ! ಅಪ್ಪ ಬಸ್ ಕಂಡಕ್ಟರ್ ಕೆಲಸ ಮಾಡ್ತಿದ್ದರಾ ?" ಎಂದ.

ಮಧುಮತಿ ಬೆಚ್ಚಿ ವಾಸುವಿನ ಕಡೆ ಒಂದು ಸಲ ನೋಡಿ ತಲೆ ಬಗ್ಗಿಸಿದಳು.

"ಏನಮ್ಮಾ ! ಹೇಳೋದಿಲ್ವಾ ?" ಅವನ ಧ್ವನಿ ದೀನವಾಗಿತ್ತು.

ದೀರ್ಘವಾಗಿ ನಿಟ್ಟುಸಿರು ಬಿಟ್ಟು, "ಇದರಲ್ಲಿ ಹೇಳವೇ ಇರೋದು, ಮರೆಮಾಚೋ ಅಂಥಾದ್ದು ಏನಿದೆ ವಾಸು ? ಹೌದು !" ಎಂದಳು ನಿರ್ಲಿಪ್ತ ನಗೆ ನಗುತ್ತಾ.

"ಎಲ್ಲಿದ್ದಾರಮ್ಮಾ ಈಗ ?" ಕಾತುರದಿಂದ ಕೇಳಿದ ವಾಸು.

"ನನಗೆ ಗೊತ್ತಿಲ್ಲ, ವಾಸು !" ಅವಳ ಧ್ವನಿ ನಡುಗಿತು.

ಕೆಲಕ್ಷಣಗಳು ಇಬ್ಬರ ಮಧ್ಯೆ ಮೌನವಾವರಿಸಿತು.

"ಗೌರ್ನಮೆಂಟ್ ಕೆಲಸಕ್ಕೆ ವಯಸ್ಸು ಸಾಲದು. ನನಗೇನೋ ಓದ್ಬೇಕು ಅಂತ ಮನಸ್ಸು, ದುಡ್ಡಿಲ್ಲ. ಓದಿಸೋವ್ರು ಇಲ್ಲ. ಏನ್ಮಾಡೋದಮ್ಮಾ?" ದುಃಖದಿಂದ ವಾಸುವಿನ ಗಂಟಲು ಹೂತುಹೋದಂತಿತ್ತು.

ಎರಡು ಕೈಗಳಿಂದಲೂ ಗಟ್ಟಿಯಾಗಿ ಕಣ್ಣು ಮುಚ್ಚಿಕೊಂಡಳು ಮಧುಮತಿ, ಐದು ನಿಮಿಷಗಳ ನಂತರ ಏನೋ ನಿಶ್ಚಯಿಸಿದಂತೆ ಎದ್ದು ಕೂತು "ಛೆ ! ಛೆ ! ಅಳ್ತಾ ಇದ್ದಿಯಾ ? ಎಲ್ಲಿ ನನ್ನನ್ನು ನೋಡು" ಎನ್ನುತ್ತಾ ಅವನ ಮುಖವನ್ನು ತನ್ನಡೆಗೆ ತಿರುಗಿಸಿಕೊಂಡು ಸೀರೆಯ ಸೆರಗಿನಿಂದ ಅವನ ಕಣ್ಣೀರನ್ನು ಒರೆಸುತ್ತಾ "ಚಾರ್ಜಿಗೆ ದುಡ್ಡು ಕೊಡ್ತೀನಿ. ಚಿಕ್ಕ ಮಾವನ ಊರಿಗೆ ಹೋಗು, ಏನು ಮಾಡುವುದು ಅಂತ ಕೇಳು." ಮಧುಮತಿ ಕರುಣಾಪೂರಿತ ಧ್ವನಿಯಲ್ಲಿ ಎಂದಳು.

* * * *

"ಏನೋ ಬಂದೆ ? ಪಾಸ್ ಮಾಡ್ಬಿಟ್ಟಿಯಂತೆ ? ಎಷ್ಟು ನಂಬರ್ ತೆಗೆದಿದ್ದೀ ? ಎಲ್ಲಾ ಚೆನ್ನಾಗಿದ್ದಾರಾ?" ಆದರದಿಂದ ವಾಸುವಿನ ಭುಜ ತಟ್ಟುತ್ತಾ ಕೇಳಿದರು ಗೋಪಾಲರಾವ್.

"ಐನೂರು ನಂಬರ್ ಮೇಲೆ ಬಂದಿದೆ. ಅಮ್ಮ ನಿನ್ನ ಸಲಹೆ ಕೇಳು ಅಂದ್ಲು" ಬರುತ್ತಿದ್ದ ದುಃಖವನ್ನು ನುಂಗುತ್ತಾ, ಅಡ್ಡಬರುತ್ತಿದ್ದ ಅಭಿಮಾನವನ್ನು ತಡೆಯುತ್ತಾ ಹೇಳಿದ ವಾಸು.

"ವೆರಿಗುಡ್ ! ಇನ್ನೇನು ಬುದ್ಧಿವಂತ ನೀನು !"

"ಸ್ಕಾಲರ್‌ಷಿಪ್ ಕೊಡ್ತಾರಂತೆ" ಆಸೆಯಿಂದ ಅವರ ಕಡೆ ನೋಡುತ್ತಾ ಹೇಳಿದ ವಾಸು.

"ಸರಿ ಬಿಡು, ಆಮೇಲೆ ಯೋಚನೆ ಮಾಡೋಣ. ಸ್ನಾನಮಾಡಿ ಊಟ ಮಾಡು. ಲಕ್ಷ್ಮಿ, ವಾಸು ಬಂದಿದ್ದಾನೆ, ನೋಡಿದ್ಯಾ ?" ಎಂದು ಹೆಂಡತಿಯನ್ನು ಕೂಗಿದರು ಗೋಪಾಲರಾವ್.

ಹೊರಗೆ ಬಂದ ಲಕ್ಷ್ಮಿ ವಾತ್ಸಲ್ಯದಿಂದ ಕುಶಲಪ್ರಶ್ನೆಗಳನ್ನು ಕೇಳಿದಳು.

ಅನ್ಯಮನಸ್ಕತೆಯಿಂದ ಸ್ನಾನ, ಊಟ ಆಯಿತೆನ್ನಿಸಿದ ವಾಸು. ಮುಂದೇನು ಎಂದು ತೋಚದ ಆ ಎಳೆಯ ಮನಸ್ಸು ಬಿರುಗಾಳಿಗೆ ಆಡುವ ಲತೆಯಂತೆ ಅಲ್ಲಾಡುತ್ತಿತ್ತು. ಕಾಲೇಜಿಗೆ ಸೇರಲಿದ್ದ ಅವನ ಸ್ನೇಹಿತರನೇಕರ ಜ್ಞಾಪಕ ಬಂತು. ಅವರೆಲ್ಲಾ ಅದೃಷ್ಟವಂತರು, ತಾನೋ ? ತಂದೆ ಹಣ ಇಲ್ಲದೆ ಇತರರ ಹಂಗಿನಲ್ಲಿ ಕಾಲ ಕಳೆಯುವ ನಿರ್ಭಾಗ್ಯ. ಅವನ ಹೃದಯ ಹಿಂಡಿದಂತಾಯಿತು. ಕಣ್ಣುಗಳಲ್ಲಿ ನೀರು ತುಂಬಿತು.

"ಯಾರನ್ಮಾ ಆ ಹುಡುಗ ?" ಸಣ್ಣ ಧ್ವನಿ ಆ ಪಕ್ಕದ ಕೊಠಡಿಯಿಂದ ಕೇಳಿಸಿ, ಸರಸರನೆ ಕಣ್ಣೊರಸಿಕೊಂಡು ಆ ಪ್ರಶ್ನೆಗೆ ಬರುವ ಉತ್ತರವನ್ನು ಕೇಳಬೇಕೆಂದು ಕಿವಿಗಳನ್ನು ನಿಮಿರಿಸಿದ ವಾಸು.

"ಮರ್‍ತುಹೋಗಿದ್ದೀಯಾ ? ಅತ್ತೆ ಮಗ ವಾಸು," ಲಕ್ಷ್ಮಿಯ ಜವಾಬು.

"ಇಲ್ಲಿಗೆ ಯಾಕ್ಬಂದಿದ್ದಾನೆ ?" ಪುನಃ ಅದೇ ಸಣ್ಣ ಮೃದುವಾದ ಧ್ವನಿ.

"ತಪ್ಪು, ಹಾಗೆ ಕೇಳಬಾರ್‍ದು. ಅವನಿಗೆ ಕೇಳಿಸುತ್ತೆ. ಯಾಕೆ, ಬರಬಾರ್‍ದಾ ? ಅವರ ಮಾವನ ಮನೆಗೆ ಬಂದಿದ್ದಾನೆ" ಎಂದಳು ಲಕ್ಷ್ಮಿ.

ಸಮಾಧಾನದಿಂದ ನಿಟ್ಟುಸಿರು ಬಿಟ್ಟ ವಾಸು.

* * * *

ರಾತ್ರಿ ಮಕ್ಕಳೆಲ್ಲಾ ಮಲಗಿದ ನಂತರ ವಾಸುವನ್ನು ತನ್ನ ಕೊಠಡಿಗೆ ಕರೆದು ಪಕ್ಕದಲ್ಲಿ ಕೂಡಿಸಿಕೊಂಡು "ನಿನ್ನ ರಿಸಲ್ಟ್ ಬಂದಮೇಲೆ ಅಮ್ಮ, ಅಜ್ಜಿ ಏನಂದ್ರು ? ದೊಡ್ಡ ಮಾವ ಏನ್ ಹೇಳಿದ್ರು ?" ಎಂದು ಕೇಳಿದರು ಗೋಪಾಲರಾವ್.

ನಗು ಬರುತ್ತಿದ್ದ ಮುಖದಲ್ಲಿ ತಕ್ಷಣವೇ ವಿಷಾದದ ರೇಖೆಗಳು ಮುತ್ತಿ ವಾಸು ತಲೆ ತಗ್ಗಿಸಿದ.

ತನ್ನ ಪಕ್ಕದಲ್ಲಿದ್ದ ವಾಸುವಿನ ಭುಜ ನೇವರಿಸುತ್ತಾ ಹಾಸ್ಯದಿಂದ "ಏನೋ, ದೊಡ್ಡ ಮಾವ ಮಗಳನ್ನ ನಿನಗೆ ಕೊಟ್ಟು ಮದುವೆ ಮಾಡ್ತಾ ನೇನೋ–ಓದಿಸ್ತೀನಿ ಅಂತ ಹೇಳ್ಲಿಲ್ವಾ ?" ಎಂದರು ಕಿರುನಗೆ ಸೂಸುತ್ತಾ.

"ಚೆನ್ನಾಗಿದೆ ಹಾಸ್ಯ, ಆ ಹುಡುಗ ಎಷ್ಟು ಖಿನ್ನನಾದನೋ, ಗಮನಿ ಸಿದಿರಾ ? ಓದಿಸ್ಬೇಕೇ ವಿನಃ ಯಾರಿಗಿಲ್ಲ ಹೆಣ್ಣುಮಕ್ಳು ?" ಗದರಿಸುಸಂತೆ ಅಂದಳು ಲಕ್ಷ್ಮಿ. "ಅಮ್ಮ ಏನೂ ಹೇಳ್ಲಿಲ್ಲ. ಅಜ್ಜಿ ನನ್ನನ್ನು ಕಾಲೇಜಿಗೆ ಸೇರ್ಸು ಅಂತ ದೊಡ್ಡ ಮಾವನಿಗೆ ಹೇಳಿದ್ರು. 'ಕಂಡಕ್ಟರ್ ಮಗ ಕಲೆಕ್ಟರ್ ಆಗ್ತಾನಾ' ಎನ್ನುತ್ತಾ ಅವಹೇಳನ ಮಾಡಿದ್ರು. ಕಾಲೇಜಿನಲ್ಲಿ ಓದೋದಕ್ಕೆ ಕಂಡಕ್ಟರ್ ಮಗನಿಗೆ ಅರ್ಹತೆ ಇಲ್ಲಾಂತ ಕಾಣುತ್ತೆ ಅವರ ದೃಷ್ಟೀಲಿ, ಅಂಥ ವರು ಒಬ್ಬ ಆಫೀಸರಿಗೆ ತಮ್ಮ ಮಗಳನ್ನ ಕೊಡದೆ.... ನನಗೆ ಅದೆಲ್ಲಾ ಯಾಕೆ? ಅಂತಹ ಷರತ್ತುಗಳಿಗೆ ನಾನೇ ಒಪ್ಪೋದಿಲ್ಲ. ನನ್ನನ್ನ ನಾನು ಹಾಗೆ ಮಾರಿ ಕೊಳ್ಳೋದಿಲ್ಲ ಮಾವ ! ಹಾಗೆ ಓದೋದೂ ನನಗೆ ಇಷ್ಟವಿಲ್ಲ." ಅವನ ಧ್ವನಿ ರೋಷದಿಂದ ನಡುಗಿತು.

"ಅಬ್ಬಾ ! ಪರವಾಗಿಲ್ವಲ್ಲಾ ! ಇನ್ನೂ ಚಿಕ್ಕ ಹುಡುಗ ಅಂದ್ಕೊಂಡೆ. ಕಾಲೇಜ್ ಹುಡುಗನಿಗೆ ಇರಬೇಕಾದ ಲಕ್ಷಣಗಳೆಲ್ಲಾ ಆಗ್ಲೇ ಬಂದ್ಬಿಟ್ಟಿದೆ ಯಲ್ಲಾ ನಿನಗೆ ?" ಎನ್ನುತ್ತಾ ವಾತ್ಸಲ್ಯಪೂರಿತ ನಗೆ ನಕ್ಕು, ಕರುಣೆಯಿಂದ ವಾಸುವಿನ ಕಡೆ ನೋಡಿದರು ಗೋಪಾಲರಾವ್.

ಅವರ ನಗು, ಹಾಸ್ಯ ವಾಸುವಿನ ಕೋಮಲ ಹೃದಯವನ್ನು ಗಾಯ ಪಡಿಸಿತೇನೋ. ಥಟಕ್ಕನೆ ಎದ್ದು ನಿಂತ.

"ಬಾ, ಕೂತ್ಕೋ. ನಿನ್ನ ಮಾವ ಅಲ್ವಾ ! ಅಷ್ಟು ಮಾತ್ರ ಹಾಸ್ಯ ಮಾಡದೆ ಹೇಗೆ ಮಾತಾಡ್ಬೇಕು ಹೇಳು ?" ಎನ್ನುತ್ತಾ ವಾಸುವಿನ ಕೈ ಹಿಡಿದು ಪುನಃ ತನ್ನ ಪಕ್ಕದಲ್ಲಿ ಕೂಡಿಸಿಕೊಂಡರು.

ಎರಡು ಕ್ಷಣ ಮೌನ ಸಾಮ್ರಾಜ್ಯವಾಳಿದ ಮೇಲೆ "ನಾನೂ ಒಬ್ಬ ಆಫೀಸರೇ, ಆದ್ರೆ ಈ ದೊಡ್ಡ ಪಟ್ಟಣದಲ್ಲಿ ಸಂಸಾರ ಮಾಡೋದೇ ಕಷ್ಟ. ನಿನ್ನಂಥ ಚುರುಕು ಹುಡುಗ ಹಣ ಕಾಸಿಲ್ಲದೆ ಈ ಸ್ಕೂಲ್ ಫೈನಲ್‌ಗೆ ಓದು ನಿಲ್ಲಿಸಿ ಎಲ್ಲೋ ಗುಮಾಸ್ತೆಯಾಗೋ, ಎಲ್ಲೋ ಪ್ರೈಮರಿ ಶಾಲೆ ಉಪಾಧ್ಯಾಯನಾಗೋ ಜೀವನ ನಡೆಸೋದೂಂದ್ರೆ ನೋಡ್ತಾ ಸುಮ್ಮನೆ ಇರೋದಕ್ಕೆ ಸಾಧ್ಯವಿಲ್ಲ. ವಸತಿ ಊಟ ತಿಂಡಿ ವಗೈರೆ ನಾನು ನೋಡ್ಕೋತೀನಿ, ಸ್ಕೂಲ್ ಫೀಸ್ ಮಾತ್ರ ದೊಡ್ಡ ಮಾವ ಕೊಡ್ತಾನೇನೋ ಅಮ್ಮನನ್ನು ಕೇಳು ಅನ್ನು. ಏನು ? ಏನಂತಿ" ಎಂದರು ನಿಧಾನವಾಗಿ ಯೋಚಿಸಿ ಒಂದು ತೀರ್ಮಾನಕ್ಕೆ ಬಂದಿದ್ದ ಗೋಪಾಲರಾವ್.

ಎರಡು ಮೂರು ಬಾರಿ ಏನೋ ಮಾತನಾಡಲು ಹೋದಂತೆ ವಾಸುವಿನ ತುಟಿಗಳು ಅಲ್ಲಾಡಿದವು. ಆದರೆ ಮಾತು ಹೊರಬರದೆ ಮೌನವಾಗಿದ್ದುಬಿಟ್ಟ.

"ಏನು ? ಹಾಗ್ಮಾಡು—ನಾಳೇನೇ ಹೋಗಿ ವಿಚಾರಿಸ್ಕೊಂಡು ಬಾ. ಆಮೇಲೆ ಸೀಟು ಸಿಗೋದು ಕಷ್ಟ. ಹಾಗೆ ಅವರು ಒಪ್ಕೊಂಡ್ರೆ ಕಾಲೇಜಿನಲ್ಲಿ ಸೀಟಿಗೆ ಅಪ್ಲೈ ಮಾಡೋಣ" ಎಂದರು ಗೋಪಾಲರಾವ್ ವಾಸುವನ್ನು ಪರಿಶೀಲಿಸಿ ನೋಡುತ್ತಾ.

"ನಮ್ಮ ತಂದೆ ಎಲ್ಲಿದ್ದಾರೋ ಗೊತ್ತ ಮಾವ, ನಿನಗೆ?" ಎಂದು ಕೇಳಿದ.

ಒಂದು ಕ್ಷಣ ದಿಗ್ಭ್ರಾಂತರಾಗಿ ಪುನಃ ಕಿರುನಗೆ ನಕ್ಕು, "ಬಹಳ ದಿನಗಳ ಕೆಳಗೆ ಒಂದು ಸಲ ವಿಶಾಖಪಟ್ಟಣದಲ್ಲಿ ಮಿಲಾಪ್ ಹೋಟೆಲ್ ಹತ್ರ ಸಿಕ್ಕಿ ಅವರೆ ನನ್ನನ್ನು ಗುರುತು ಹಿಡಿದರು ಅವರ ಗುರ್ತು ನನಗೆ ಸಿಗಲಿಲ್ಲ ಅದಕ್ಕೆ ಮೊದಲು ಬಸ್‌ನಲ್ಲಿ ಕಂಡಕ್ಟರ್ ಕೆಲ್ಸ ಮಾಡ್ತಿದ್ರಂತೆ, ಅದು ಬಿಟ್ಟು ಯಾರೊಂದಿಗೋ ಸೇರಿ ಬಿಸಿನೆಸ್ ಪ್ರಾರಂಭ ಮಾಡಿದ್ದೀನಿ ಅಂತ ಹೇಳಿದ್ರು. ಲಕ್ಷ್ಮಿ ನನ್ನ ಲೆದರ್ ಬ್ಯಾಗ್ ತಗೊಂಡ್ಬಾ. ನಾನು ಕೇಳದೇ ಇದ್ರೂ ಅವರೇ ಅಡ್ರೆಸ್ ಕೊಟ್ರು'' ಎನ್ನುತ್ತಾ ಎದ್ದು ಕೂತರು ಗೋಪಾಲರಾವ್.

ಬ್ಯಾಗ್ ತೆಗೆದು ಅದರಲ್ಲಿ ಕಾಗದಗಳಲ್ಲಿ ಒಂದೊಂದನ್ನೇ ನೋಡುತ್ತಾ, "ಅಲ್ಲಾ ನಿನಗೆ ಈಗ್ಯಾಕೋ ನಿಮ್ಮ ತಂದೆ ಅಡ್ರೆಸ್ ?" ಎಂದರು ಗೋಪಾಲರಾವ್ ನಗ ತ್ತಾ.

"ಬೇಡ, ಹುಡುಕ್ಬೇಡ, ಮಾವ. ಇಂದಿನವರೆಗೂ ನಮ್ಮಪ್ಪ ಅನ್ನೋವ್ನು

ಒಬ್ರು ಇದ್ದಾರೆ ಅಂತ್ಲೇ ನೀವ್ಯಾರೂ ನನಗೆ ಹೇಳಿರಲಿಲ್ಲ. ಯಾವಾಗ್ಲೋ ಅಪ್ಪ ಸತ್ತುಹೋದ್ರಲ್ಲಾ, ಹಣೆಗೆ ಕುಂಕುಮ ಯಾಕಿಟ್ಕೊಂಡೆ ಅಂತ ಒಂದು ದಿನ ನಮ್ಮಮ್ಮನ್ನ ಕೇಳಿದ್ರೆ ಸಾಯೋಹಾಗೆ ಹೊಡೆದ್ಲು. ಹೋಗ್ಲಿ ಇಂಥ ಜಾಗವಲ್ಲಿದ್ದಾರೆ ಅಂತ ಹೇಳಿದ್ರಾ? ಅಪ್ಪ ಅನ್ನೋ ಪದ ಉಚ್ಚರಿಸಬೇಡ ಅಂತ ಹೊಡೆದ್ಲು. ಮುಗೀತು, ಪುನಃ ಈವತ್ತೇ ತಿಳ್ಕೋಬೇಕು ಅಂತ ಅನಿಸಿದ್ದು."

ಅವನ ಗಂಟಲಿನಿಂದ ಮುಂದೆ ಮಾತು ಹೊರಡದೆ ಮೌನದಿಂದ ತಲೆ ತಗ್ಗಿಸಿದ.

"ಇದೋ, ಅಡ್ರೆಸ್ ಇಲ್ಲಿದೆ ನೋಡು."

ಗೋಪಾಲರಾವ್ ಕೈಯಲ್ಲಿದ್ದ ಚೀಟಿಯನ್ನು ಆತುರದಿಂದ ಕಸಿದು ಕೊಂಡ. "ಮಹಾ ದೊಡ್ಡ ಮನುಷ್ಯ ನಿಮ್ಮಪ್ಪ. ನಾವು ಯಾವತ್ತೋ ಮರೆತುಬಿಟ್ಟಿದ್ದೀವಿ. ಆ ಮನುಷ್ಯ ಒಬ್ಬ ಹೃದಯವಿಹೀನ. ಈಗ ಆ ಮಾತೇಕೆ? ಬೆಳಿಗ್ಗೆ ಟ್ರೈನಿನಲ್ಲಿ ಹೋಗಿ ದೊಡ್ಡ ಮಾವ ಸಹಾಯ ಮಾಡ್ತಾನಾ ಅಂತ ವಿಚಾರಿಸ್ಕೊಂಡು ಬೇಗ ಬಂದ್ಬಿಡು" ಎಂದರು ಗೋಪಾಲ ರಾವ್.

ಅಡ್ರೆಸ್ ಚೀಟಿಯನ್ನ ಜೋಬಿನಲ್ಲಿಟ್ಟುಕೊಂಡು ತನಗಾಗಿ ಸಿದ್ಧಪಡಿಸಿದ ಹಾಸಿಗೆಯ ಮೇಲೆ ಮಲಗಿದ ವಾಸು.

ಏನೋ ಮಾಡಬೇಕೆಂದು ಮನಸ್ಸಿಗೆ ತೋಚಿತು. ಹೃದಯ ಡವ ಡವ ಹೊಡೆದುಕೊಂಡಿತು. ಮೈ ಕಂಪಿಸಿತು. ಕಣ್ಣುಗಳಲ್ಲಿ ನೀರೂರಿತು. ಬಹಳ ದಿನಗಳ ನಂತರ ನಿದ್ರೆಯಲ್ಲಿ ಒಳ್ಳೆಯ ಕನಸುಗಳನ್ನು ಕಂಡ. ಕನಸಿನಲ್ಲಿ ಕಾಲೇಜು, ಪುಸ್ತಕಗಳು, ಹಣ, ಮನೆ ಇತ್ಯಾದಿ.

* * * *

ಸಂಜೆ ನಾಲ್ಕು ಗಂಟೆಯಾಗಿದ್ದರೂ ಬಿಸಿಲಿನ ಝಳ ಕಡಿಮೆಯಾಗಿರಲಿಲ್ಲ. ರಸ್ತೆಯಲ್ಲಿ ಓಡಾಡುವ ಜನ, ಕಾರುಗಳು, ರಿಕ್ಷಾಗಳು ಇವುಗಳಿಂದ ತುಂಬಿತ್ತು ಮೆಯಿನ್ ರೋಡ್.

ಸುಸ್ತಾಗಿದ್ದರೂ ಆತುರದಿಂದ, ಆಸೆಯಿಂದ ಪ್ರತಿ ಅಂಗಡಿಯ ಮುಂದೂ

ನಿಂತು, ಆ ಬೋರ್ಡನ್ನು ಓದಿ ಮುಂದಕ್ಕೆ ಹೋಗುತ್ತಿದ್ದ ಹದಿನಾರರ ಹರೆಯದ ಸುಂದರಾಂಗ ವಾಸು.

'ವಿಜಯ ಪ್ಯಾಲೆಸ್' ಬೋರ್ಡ್ ನೋಡಿದ ವಾಸುವಿನ ಕಣ್ಣುಗಳು ಮೆರೆದವು. ಆಶ್ಚರ್ಯದಿಂದ, ಹಿಂದೆ ಮುಂದೆ ನೋಡುತ್ತಾ ಅಂಗಡಿ ಹೊಕ್ಕ ವಾಸುವಿನ ಕಣ್ಣುಗಳು ಚೆದುರಿದವು. ಅಂಗಡಿಯಲ್ಲಿದ್ದ ಎಲ್ಲ ವ್ಯಕ್ತಿಗಳನ್ನು ನೋಡುತ್ತಿದ್ದ.

ಯಾರನ್ನು ಏನೆಂದು ಕೇಳೋದು ? ಇದರಲ್ಲಿ ನನ್ನ ತಂದೆ ಯಾರು ? ಆಕಸ್ಮಾತ್ ಅವರೇ ಇಲ್ಲಿದ್ದರೂ ನನ್ನನ್ನು ಹೇಗೆ ಗುರ್ತಿಸ್ತಾರೆ ? ಅವರು ಹೇಗಿದ್ದಾರೋ ;ನನಗೇನ್ ಗೊತ್ತು ? ಹೀಗೆಲ್ಲಾ ಯೋಚಿಸಿದ ವಾಸುವಿನ ಎದೆ ಬಡಿದುಕೊಳ್ಳಲು ಪ್ರಾರಂಭವಾಯಿತು. ಭಯದಿಂದ ಪುನಃ ಊರಿಗೆ ವಾಪಸ್ ಹೋಗಲು ಛಾರ್ಜಿಗೆ ದುಡ್ಡಿದೆಯೇ ಎಂದು ಜೇಬನ್ನು ಮುಟ್ಟಿ ನೋಡಿಕೊಂಡ, ಕಪ್ ಕಾಫಿಗೆ ಮಾತ್ರ ಸಾಕಾಗುವಷ್ಟು ಹಣ ಇತ್ತು. ಅವನ ಕಾಲ ಕೆಳಗಿನ ಭೂಮಿ ನಡುಗಿದಂತಾಯಿತು ಈಗ ತಾನೇನು ಮಾಡಬೇಕು ?

"ಏನ್ಬೇಕು ನಿನಗೆ ?" ಯಾರೋ ತಟ್ಟಿ ಎಬ್ಬಿಸಿದಂತೆ ಕೇಳಿದರು.

"ಅವರು....ಅವರು....ಈ ಅಂಗಡೀಲಿ....ಅಂದ್ರೆ ಪ್ರಸಾದರಾವ್" ಎಂದು ತಡವರಿಸಿದ.

"ಓ ! ಈವತ್ತು ಅವರು ಪುನಃ ಅಂಗಡಿಗೆ ಬರೋದಿಲ್ಲ. ನೋಡಿ ಆ ರಸ್ತೆ ಕೊನೆವರೆಗೂ ಹೋಗಿ ಬಲಗಡೆ ತಿರುಗಿ ಒಂದು ಫರ್ಲಾಂಗ್ ಹೋದ್ಮೇಲೆ ಒಂದು ಆಲದ ಮರ ಇದೆ. ಅಲ್ಲಿ ನಿಂತು ನೋಡಿದರೆ ಎದುರಿಗೆ ಕಾಣುತ್ತೆ. ೪೪ನೇ ನಂಬರ್ ಮನೆ. ಅವರ ಹೆಸರಿನ ಬೋರ್ಡ್ ಇದೆ." ಸರಸರನೆ ಹೇಳಿದ ಸೇಲ್ಸ್‌ಮನ್.

ಸೇಲ್ಸ್‌ಮನ್ ಹೇಳಿದ ಗುರುತಿನ ಮೇಲೆ ಮನೆ ಹುಡುಕಿಕೊಂಡು ಬಂದ ವಾಸು. ಚಿಕ್ಕ ಗೇಟನ್ನು ತಳ್ಳಿಕೊಂಡು ಒಳಗೆ ಹೋದ. ಎರಡೂ ಕಡೆಯೂ ಕ್ರೋಟನ್ಸ್, ಹೂವಿನ ಗಿಡಗಳೂ ನಾಲ್ಕು ಮೆಟ್ಟಲುಗಳನ್ನೂ ಹತ್ತಿ ಬೀದಿಯ ವರಾಂಡದಲ್ಲಿ ನಿಂತ ವಾಸುವಿನ ಎದೆ ಡವ ಡವ ಎಂದಿತು.

ಮುಂದೆ ಮಾಡಿದ್ದ ಬಾಗಿಲನ್ನು ನಿಧಾನವಾಗಿ ತಳ್ಳಿ ಒಳಗೆ ನೋಡಿದ.

ಕೇರಮ್ ಆಡುತ್ತಿದ್ದ ನಾಲ್ವರು ವ್ಯಕ್ತಿಗಳು ಒಂದೇ ಸಲ ವಾಸುವಿನ ಕಡೆ ನೋಡಿದರು,

"ವಿಜಯ ಪ್ಯಾಲೆಸ್ - ಪ್ರಸಾದರಾವ್ ಮನೆ ಇದೇನಾ ? ಅವರಿದ್ದಾರಾ ?" ನಡುಗುತ್ತಿದ್ದ ಧ್ವನಿಯಲ್ಲಿ ತಡವರಿಸುತ್ತಾ ಕೇಳಿದ ವಾಸು.

ಅಂದವಾಗಿ, ಧೃಡಕಾಯನಾಗಿ ಗುಂಗುರು ಗುಂಗುರು ಕ್ರಾಪಿದ್ದ ಮಧ್ಯ ವಯಸ್ಸಿನ ವ್ಯಕ್ತಿಯ ಕಡೆ ನೋಡಿದರು ಮಿಕ್ಕ ಮೂರು ಜನ.

"ಆಂ, ನಾನೆಪ್ಪ ಪ್ರಸಾದರಾವ್..... ಬಾ, ಕೂತ್ಕೋ. ಏನ್ಬೇಕು ? ಯಾರು ನೀನು ?" ಎಂದರು ಆತ ಕಿರುನಗೆ ಸೂಸುತ್ತಾ.

"ನಾನಾ ?......ನಾನಾರಿ !" ಎಂದ ವಾಸು ಅವರ ಕಡೆ ಸಂಭ್ರಮದಿಂದ, ಹೆದರಿಕೆಯಿಂದ ನೋಡುತ್ತಾ.

"ಆಂ......ನೀನೇ ! !" ಎಂದರಾತ ಫಕ್ಕನೆ ನಕ್ಕು, ಬೋರ್ಡಿನ ಮೇಲಿದ್ದ ಕಾಯಿನ್ಸ್ ನೋಡುತ್ತಾ.

"ಚಂದಾ ಕೇಳೋದಕ್ಕೇನಪ್ಪಾ ?"

"ಇವರು ಒಬ್ಬಂಟಿಗರು ಅಂತ ನಿನಗ್ಯಾರು ಹೇಳಿದ್ರು ?"

"ಅವನಿಗೆ ಸ್ಕೂಲು ಫೀಸ್ ಬೇಕೂಂತ ಕಾಣುತ್ತೆ ಅಷ್ಟೆ. ಪಾಪ, ಇನ್ನೇನೂ ಕೇಳಲಾರ" ಎನ್ನುತ್ತಾ ತನ್ನ ಹಾಸ್ಯಕ್ಕೆ ತಾನೇ ಗೊಳ್ಳೆಂದು ನಕ್ಕ ಒಬ್ಬಾತ. ಆತ ಹೇಳುತ್ತಿರುವುದು ಸರಿ ಎಂಬಂತೆ ಇನ್ನಿಬ್ಬರೂ ನಕ್ಕರು.

"ಪುನಃ ಬರ್ತೀನಿ ಸಾರ್, ನಿಮ್ಹತ್ರ ಮಾತಾಡ್ಬೇಕು" ರಭಸದಿಂದ, ರೋಷದಿಂದ ಬಂದವು ಆ ಮಾತು ವಾಸುವಿನ ಬಾಯಿಂದ.

ಪುನಃ ಎಲ್ಲರೂ ಪಕಪಕನೆ ನಕ್ಕರು.

"ಹಾಗೇ ಮಾಡು, ಸಂಜೆ ಆರು ಗಂಟೆ ಮೇಲೆ ಬಾ" ಎಂದರು ಪ್ರಸಾದ ರಾವ್ ಸರಿಯಾಗಿ ಕೂಡುತ್ತಾ.

"ಬರ್ತೀನಿ ಸಾರ್" ಎನ್ನುತ್ತಾ ಎಲ್ಲರಿಗೂ ನಮಸ್ಕರಿಸಿ ರಸ್ತೆಗಿಳಿದ ವಾಸು. ಆಲದ ಮರದ ನೆರಳು ಅವನಿಗೆ ಆಶ್ರಯ ಕೊಟ್ಟಿತು.

* * * *

"ನಿಮ್ಮಣ್ಣ ಫೀಸ್ ಕಟ್ಟೋದಕ್ಕೆ ಒಪ್ತಾರೆ ಅಂತೀರಾ ?" ಆಫೀಸಿನಿಂದ ಬಂದ ಗೋಪಾಲರಾಯರ ಕೈಗೆ ಕಾಫಿ ಲೋಟ ಕೊಡುತ್ತಾ ಕೇಳಿದಳು ಲಕ್ಷ್ಮಿ.

"ಏನೋ ನೋಡೋಣ" ಎಂದರು.

"ಪಾಪ, ನನಗೆ ಆ ಹುಡುಗನ್ನ ನೋಡಿದರೆ ಅಯ್ಯೋ ಅನ್ನಿಸುತ್ತೆ" ಎಂದಳು ಲಕ್ಷ್ಮಿ.

"ಏನ್ಮಾಡೋಣ ! ನೀನೇ ನೋಡ್ತಿದೀಯಲ್ಲಾ, ನಾ ತರೋ ಐನೂರು ರೂಪಾಯಿ ಇಪ್ಪತ್ತು ತಾರೀಖು ಆಗೋ ವೇಳೆಗೆ ಹೇಗೆ ಕರಗಿಹೋಗುತ್ತೆ ಅಂತ. ನಿನಗೆ ನಿಮ್ಮ ಅಪ್ಪ ಕೊಟ್ಟಿರೊ ಹಣ ಏನಾದ್ರೂ ಜೊತೆ ಮಾಡಿ ಓದಿಸ್ತೀನಿ ಅಂದ್ರೆ ನಂದೇನೂ ಅಭ್ಯಂತರ ಇಲ್ಲ" ಎಂದರು ಗೋಪಾಲರಾವ್ ಹೆಂಡತಿಯನ್ನು ಛೇಡಿಸುತ್ತಾ.

"ಏನು ? ನಾನು ಭಯಪಡ್ತೀನೀ ಅಂತ಼್ಾ ಈ ಮಾತು ? ಮಹಾ, ಈವತ್ತೆಲ್ಲಾ ನಾಲ್ಕೈದು ಸಾವಿರ ರೂಪಾಯಿ ಆದ್ರೆ ಸಾಕು ಅವನ ಗ್ರ್ಯಾಜು ಯೇಷನ್ ಮುಗಿಯೋದಕ್ಕೆ. ನಿಮ್ಮಣ್ಣ ಸಹಾಯ ಮಾಡೋದಿಲ್ಲಾಂದ್ರೆ ನಾನು ಓದಿಸ್ತೀನಿ" ಎಂದಳು ಲಕ್ಷ್ಮಿ ಸವಾಲ್ ಮಾಡುವಂತೆ.

"ಗಾಳ ಹಾಕ್ತಿದೀಯೇನೋ, ನಿನ್ನ ಮುದ್ದು ಮಗಳಿಗೋಸ್ಕರ. ಅವನು ಹೇಳಿದ ಮಾತು ಜ್ಞಾಪಕ ಇದೆ ತಾನೆ ?" ನಕ್ಕರು ಗೋಪಾಲರಾವ್.

"ಊಂ, ಮಹಾ ನಿಮ್ಮ ಸೋದರಳಿಯನಂಥಾವನು ಸಿಗ್ತಾನಾ ನನ್ನ ಮಗಳಿಗೆ ! ಎಲ್ಲಾ ಅಪಾರ್ಥವೇ ಮಾಡ್ಕೊಳ್ಳೋದು" ಎಂದು ಕೋಪಿಸಿ ಕೊಂಡು ಉದಾಸೀನವಾಗಿ ಏಳಲು ಹೋದಳು.

"ಲಕ್ಷ್ಮಿ, ಕೋಪ ಮಾಡ್ಕೋಬೇಡ, ಪ್ಲೀಸ್ ! ಅವನು ನಮ್ಮ ಮನೆಗೆ ಬಂದ ಕೂಡ್ಲೆ ಅವನನ್ನ ಹೇಗಾದ್ರೂ ಗ್ರ್ಯಾಜುಯೇಟ್ ಮಾಡ್ಬೇಕು ಅಂತ ತೀರ್ಮಾನ ಮಾಡಿದ್ದೀನಿ" ಎಂದರು ಗೋಪಾಲರಾವ್.

"ಮತ್ತೆ ಇನ್ನೇನು !" ತೃಪ್ತಿಯಿಂದ ನಕ್ಕಳು ಲಕ್ಷ್ಮಿ.

* * * *

ಸಂಜೆಗತ್ತಲಾವರಿಸಿತ್ತು. ಪಕ್ಷಿಗಳು ಆಲದ ಮರವನ್ನಾಶ್ರಯಿಸಿ ಚಿಲಿ ಪಿಲಿ, ಚಿಲಿಪಿಲಿ ಎನ್ನುತ್ತಿತ್ತು.

ಚಿಕ್ಕ ಗೇಟಿನ ಕಡೆ ನಡೆದುಹೋಗುತ್ತಿದ್ದ ಹದಿನಾರು ವರ್ಷದ ಹುಡುಗನ ಹೃದಯ ಡವ್‌ಡವ್ ಎಂದು ಬಡಿದುಕೊಳ್ಳಲಾರಂಭಿಸಿತು. ಬಾಗಿಲುಗಳನ್ನು ನಿಧಾನವಾಗಿ ತಳ್ಳಿದ. ಅದೇ ಸಮಯಕ್ಕೆ ಕೊಠಡಿಯಲ್ಲಿನ ಎಲೆಕ್ಟ್ರಿಕ್ ದೀಪ ಹತ್ತಿಕೊಂಡು ಕೊಠಡಿಯನ್ನು ಪ್ರಕಾಶಮಾನವಾಗುವಂತೆ ಮಾಡಿತು.

ಕೊಠಡಿಯಲ್ಲಿ ಅಡಿಯಿಟ್ಟ ಹುಡುಗ, "ಸಾರ್, ಇದ್ದೀರಾ ?" ಎಂದು ದೀನನಾಗಿ ಕೇಳಿದ,

"ಓ ! ನೀನಾ !" ಸುಂದರವಾದ ಮುಖದ ತುಂಬ ನಗೆ ತಂದುಕೊಂಡು ಕೇಳಿದರು ಪ್ರಸಾದರಾವ್.

ಕ್ಷಣಕಾಲ ಮೌನವಾಗಿದ್ದು ಅದೇ ನಗೆಯೊಂದಿಗೆ, ತಲೆ ಬಾಗಿ ನಿಂತಿದ್ದ ವಾಸುವಿನ ಕಡೆ ನೋಡುತ್ತಾ, "ನನ್ನೊಂದಿಗೆ ಮಾತಾಡ್ಬೇಕು ಅಂದ್ಯಲ್ಲಾ?" ಎಂದರು ಪ್ರಸಾದರಾವ್.

"ಆಂ....ಹೌದು ಸಾರ್.....ನಾನು ಸ್ಕೂಲ್ ಫೈನಲ್ ಪಾಸ್ ಮಾಡಿದ್ದೀನಿ" ಎಂದು ವಾಸು ಗೊಣಗಿದ.

"ಕೆಲಸ ಏನಾದ್ರೂ ಕೊಡಿಸ್ಬೇಕಾ ?" ನಕ್ಕರು ಪ್ರಸಾದರಾವ್, ತನಗಾಗಿದ್ದ ಆಶ್ಚರ್ಯವನ್ನು ವ್ಯಕ್ತಪಡಿಸದೆ.

"ಅಲ್ಲಾ ಸಾರ್" ಪುನಃ ತಲೆ ತಗ್ಗಿಸಿದ ವಾಸು.

"ಓದೋದಕ್ಕೇನಾದ್ರೂ ಸಹಾಯ ಬೇಕೂಂತ್ಲಾ ?"

ಒಂದು ಸಲ ಪ್ರಸಾದರಾವ್ ಕಡೆ ನೋಡಿ ಪುನಃ ತಲೆ ತಗ್ಗಿಸಿದ ವಾಸು.

"ಹತ್ತು ಮನೇಲಿ ಬೇಡಿ ಓದು ಸಾಗಿಸಬೇಕಾದ ಹುಡುಗ ಹೀಗೆ ನಾಚಿಕೆ ಪಟ್ರೆ ಹೇಗಪ್ಪಾ ! ಇದೋ, ತೆಗೆದುಕೊಂಡು ಹೋಗು" ಎನ್ನುತ್ತಾ ಐದು ರೂಪಾಯಿನ ನೋಟನ್ನು ವಾಸುವಿನ ಪಕ್ಕದಲ್ಲಿನ ಟೇಬಲ್ ಮೇಲಿಟ್ಟರು ಪ್ರಸಾದರಾವ್.

"ಬೇಡ, ತಗೊಳ್ಳಿ" ಎಂದು ವಾಸುವಿನ ಧ್ವನಿ ನಡುಗಿತು ದುಃಖದಿಂದ.

"ಆದ್ರೆ ಯಾಕೆ ಬಂದದ್ದು ? ಹೊರಡು !" ಬೇಸರದಿಂದ ನುಡಿದರು ಪ್ರಸಾದರಾವ್.

"ಇದೇ ನಿಮ್ಮ ಮಗನಾಗಿದ್ದರೆ ಐದು ರೂಪಾಯಿ ಕೊಟ್ಟು ಹೀಗೆ ಹೋಗು ಅಂತ ಹೇಳ್ತಿದ್ರಾ ಸಾರ್ !" ಆ ಧ್ವನಿಯಲ್ಲಿ ನೋವು, ಸಿಟ್ಟು ಇತ್ತು.

"ಮಗನಾದ್ರೆ ನಿನ್ನ ಹಾಗೆ ಸಂಕೋಚಪಡ್ತಾನೇನೋ ! ತಲೆ ಮೇಲೆ ಕೂತ್ಕೋತಾನೆ ! ನಕ್ಕುಬಿಟ್ಟರು ಪ್ರಸಾದರಾವ್.

ಇಬ್ಬರ ಮಧ್ಯೆ ಐದು ನಿಮಿಷ ನಿಶ್ಶಬ್ದ ಆವರಿಸಿತು. ಕೈ ಕಟ್ಟಿಕೊಂಡು ಶತಪಥ ತಿರುಗುತ್ತಿದ್ದ ಪ್ರಸಾದರಾವ್, "ನೋಡು ಮಗು, ದೊಡ್ಡ ದೊಡ್ಡ ಮಾತಾಡ್ದೆ ದುಡ್ಡು ತಗೊಂಡು ಹೋಗು" ಎನ್ನುತ್ತಾ ತಲೆ ಎತ್ತಿ ವಾಸುವಿನ ಕಡೆ ನೋಡಿ ಕಳವಳಗೊಂಡರು

ತಲೆ ಬಗ್ಗಿಸಿ ನಿಂತಿದ್ದ ವಾಸುವಿನ ಕೆನ್ನೆಯ ಮೇಲಿಂದ ಬೊಟ್ಟು ಬೊಟ್ಟಾಗಿ ಕಣ್ಣೀರು ಸುರಿಯುತ್ತಿತ್ತು.

"ಇದೇನೋ ? ಯಾರು ನೀನು ? ಬೇಕಾದ್ರೆ ಇನ್ನೂ ೫ ರೂಪಾಯಿ ಕೊಡ್ತೀನಿ, ತಗೊಂಡ್ಹೋಗು. ಅದು ಬಿಟ್ಟು ಹೆಣ್ಣು ಮಕ್ಕಳ ಹಾಗೆ ಅಳ್ತೀರಾ !" ಎನ್ನುತ್ತಾ ಇನ್ನೊಂದು ಐದು ರೂಪಾಯಿ ನೋಟನ್ನು ಟೇಬಲ್ ಮೇಲಿಟ್ಟರು ಪ್ರಸಾದರಾವ್.

"ಬೇಡ, ಬೇಡ ಸಾರ್. ಹೋಗ್ತೀನಿ" ಎನ್ನುತ್ತಾ ಹೊಸಲು ದಾಟಲು ಹೋದ ವಾಸುವಿನ ಕೈಯ್ಯನ್ನು ಥಟಕ್ಕನೆ ಹಿಡಿದುಕೊಂಡರು ಪ್ರಸಾದರಾವ್.

ಆ ಸ್ಪರ್ಶದಲ್ಲಿ ಯಾವುದೋ ಮಾಧುರ್ಯ, ವ್ಯಕ್ತವಾಗದ ಏನೋ ಮಮತೆ, ಸುಸ್ತಾದ ಆ ಎಳೆಯ ಮುಖವನ್ನು ನೋಡಿ ಕರುಣೆ. "ಪಾಪ, ಬಹಳ ಸುಸ್ತಾಗಿ ಕಾಣ್ತಿದ್ದಿ. ಊಟ ಮಾಡ್ಕೊಂಡು ಹೋಗು" ಎನ್ನುತ್ತಾ ಬಲವಂತ ದಿಂದ ಕೂಡಿಸಿದರು ವಾಸುವನ್ನು ಪ್ರಸಾದರಾವ್.

ವಾಸುವನ್ನು ಪರಿಶೀಲಿಸಿ ನೋಡಿದ ಪ್ರಸಾದರಾವ್ ಮನಸ್ಸು ಏನೋ ಜ್ಞಾಪಕ ಬಂದು ಕಳಕ್ ಎಂದಿತು. 'ಬಹುಶಃ ನನ್ನ ಮಗನಿಗೂ ಇದೇ ವಯ ಸ್ಸಾಗಿರಬಹುದು ಅವನಿಗೇನು ? ಏನೂ ತೊಂದರೆ ಇಲ್ದೆ ಹಾಯಾಗಿರಬೇಕು. ಹಣಸಂತ್ರರ ಮೊಮ್ಮಗ' ಎಂದುಕೊಂಡು ನೀಳವಾದ ಉಸಿರು ಬಿಟ್ಟು, ನಿಶ್ಶಬ್ದ ವನ್ನು ಭೇದಿಸುತ್ತಾ, "ನಿನಗೆ ತಂದೆ ತಾಯಿ ಇದ್ದಾರಾ ಮಗು ?" ಎಂದು ಕೇಳಿದರು ಪ್ರಸಾದರಾವ್.

ಇದ್ದಾರೆಂಬಂತೆ ತಲೆ ಆಡಿಸಿದ ವಾಸು.

"ಅಂದ್ರೆ ಬಡವರಾ ?" ಆ ಪ್ರಶ್ನೆಯಲ್ಲಿ ಸಹಾನುಭೂತಿ ಇತ್ತು. ಅಲ್ಲ ವೆಂಬಂತೆ ವಾಸು ತಲೆ ಆಡಿಸಿದಾಗ ಆಶ್ಚರ್ಯದಿಂದ ನೋಡುತ್ತಾ "ಅಂದ್ರೆ ಜಗಳ ಆಡ್ಕೊಂಡು ಮನೆಯಿಂದ ಓಡಿ ಬಂದಿದ್ದೀಯಾ ?" ಎಂದರು ಪ್ರಸಾದ ರಾವ್.

"ಅಯ್ಯಯ್ಯೋ, ಅಂತಹವನಲ್ಲ ನಾನು" ಎಂದ ನಗುತ್ತಾ.

"ನನ್ನ ಹತ್ರ ಹೋಗಿ ಕೇಳೂಂತ ಯಾರು ಹೇಳಿದರು ? ಇಷ್ಟಕ್ಕೂ ನೀನು ಎಲ್ಲಿಂದ ಬಂದೆ ?" ಖಂಡಿಸಿ ಕೇಳಿದರು ಪ್ರಸಾದರಾವ್.

"ನಿಮ್ಮ ಹತ್ರ ಹೋಗೂಂತ ಯಾರೂ ಕಳಿಸಲಿಲ್ಲ. ನಾನೇ ಬಂದೆ" ಎಂದು ಥಟನೆಯೇ ಜವಾಬು ಕೊಟ್ಟ ವಾಸು.

ಅರ್ಥವಾಗದಂತೆ ನಕ್ಕು, 'ಅದೇ ಯಾತಕ್ಕೋಸ್ಕರ ಬಂದೆ ?" ಎಂದು ಗಟ್ಟಿಯಾಗಿ ಕೇಳಿದರು ಪ್ರಸಾದರಾವ್.

ಏನು ಹೇಳಲೂ ತೋಚದೆ ಕುರ್ಚಿಯಿಂದ ಎದ್ದು ಪುನಃ ಕೂತ ವಾಸು ವಿನೆಡೆ ಬೇಸರದಿಂದ ನೋಡುತ್ತಾ "ಇಷ್ಟಕ್ಕೆ ನೀನು ಯಾರು ?" ಎಂದರು ಪ್ರಸಾದರಾವ್.

"ನಾನಾ.....ನಾನಾ" ಎನ್ನುತ್ತಾ ಅವರ ಮುಖ ನೋಡಿ, "ನೀವು ನನ್ನನ್ನ ಕಾಲೇಜಿಗೆ ಸೇರಿಸಿ ಓದಿಸ್ತೀರಿ ಅಂತ....ಕನಿಷ್ಟಪಕ್ಷ ಫೀಸ್‌ಗೆ ಬೇಕಾದ ಹಣ ವನ್ನಾದರೂ ಕೊಡ್ತೀರೇನೋಂತ....ಕೇಳೋದಕ್ಕೆ ಬಂದೆ......" ಎಂದು ಒಂದೊಂದು ಪದವನ್ನೂ ಪ್ರಯತ್ನಪೂರ್ವಕವಾಗಿ ಒತ್ತಿ ಹೇಳಿದ ವಾಸು.

ಈ ಬಾರಿ ಪ್ರಸಾದರಾವ್ ದಿಗ್ಭ್ರಾಂತರಾದರು. ಕೆಲ ಕ್ಷಣ ಕಳೆದ ಮೇಲೆ"ಚೆನ್ನಾಗಿದೆ... ಓದಿಸಬೇಕೂಂದ್ರೆ ದೇಶದಲ್ಲಿ ಬಹಳ ಜನ ಬಡವರಿದ್ದಾರೆ. ಏನೋ ಚಂದಾ ಕೇಳಿದವರಿಗೆ ಹತ್ತೋ ಇಪ್ಪತ್ತೊ ಕೊಡ್ತಾ ಬಂದಿದ್ದೀನಿ. ಅಲ್ಲಾ ಇದೇನು ? ನನ್ನ ಅಡ್ರೆಸ್ ನಿನಗ್ಯಾರು ಹೇಳಿದರು ?" ಎಂದ ಪ್ರಸಾದ ರಾವ್ ಅಸಹನೆಯಿಂದ.

"ನನ್ನ ಚಿಕ್ಕಮಾವ."

ಷಾಕ್ ಹೊಡೆದಂತೆ ನೋಡಿದರು ವಾಸುವಿನೆಡೆ ಕೆಲಕ್ಷಣಗಳು. ನಂತರ ಸಾವರಿಸಿಕೊಂಡು "ಅವರ ಹೆಸರು ?" ಎಂದು ಕೇಳಿದರು ಸಾವಧಾನದಿಂದ.

"ಕೆ. ಗೋಪಾಲರಾವ್. ನಮ್ಮ ತಾತ ವೆಂಕಟರಾಮಯ್ಯ ತಹಶೀಲ ದಾರ್ ಆಗಿದ್ದರಂತೆ."

ಈ ಬಾರಿ ಸಂಪೂರ್ಣವಾಗಿ ಚಲಿಸಿಹೋದರು ಪ್ರಸಾದರಾವ್. ವಾಸು ವಿನ ಕೈಯ್ಯನ್ನು ಆತುರದಿಂದ ನೋಡಿದ ಅವರ ಕಣ್ಣುಗಳು ಒಲಗೈ ಮೇಲಿದ್ದ ಚಿಕ್ಕ ಹುಟ್ಟು ಮಚ್ಚೆಯನ್ನು ದಿಟ್ಟಿಸಿದವು. ಕಣ್ಣುಗಳನ್ನು ಅಗಲವಾಗಿ ಬಿಟ್ಟು ಅವನಲ್ಲಿ ಯಾವುದೋ ಹೋಲಿಕೆಗಳನ್ನು ಹುಡುಕುತ್ತಾ ಪರಿಶೀಲಿಸಿ ಅಪಾ ಯತೆಯಿಂದ ಮನುಸ್ಸು ಭಾರವಾಗಿ, ಹೃದಯ ಕರಗಿದಾಗ ತೃಪ್ತಿಯಿಂದ ನೋಡಿ, "ನೀನು ನೀನು ಮಧು ಮಗನಾ ?" ಎಂದು ಪ್ರಶ್ನಿಸಿದರು ಆಳವಾದ ಭಾವಿಯಿಂದ ಬಂದಂತಿತ್ತು ಆ ಧ್ವನಿ.

ರೋಷದಿಂದ ತಲೆ ಎತ್ತಿ "ಅಲ್ಲಾ ಸಾಬ್, ಬಸ್ ಕಂಡಕ್ಟರ್ ಪ್ರಸಾದ ರಾವ್ ಮಗ ನಾನು' ಎಂದ ವಾಸು, ಅವನ ಧ್ವನಿ ತೀಕ್ಷ್ಣವಾಗಿತ್ತು.

ಹಿಡಿಸಲಾರದ ವಾತ್ಸಲ್ಯದಿಂದ ಅವರ ಮನಸ್ಸು ಉಕ್ಕಿ ಹರಿಯಿತು. ರೋಷದಿಂದ ಕೆಂಪಾದ ವಾಸುವಿನ ಮುಖ ಅವರನ್ನು ಕದಲಿಸಿತು. ಧೃಢ ಕಾಯಕನಾಗಿ, ಬೆಳ್ಳಗೆ ಸುಂದರನಾಗಿರುವ ಹದಿನಾರು ವರ್ಷದ ಹುಡುಗ ತನ್ನ ಮಗ. ಅವನ ಎರಡು ಕೈಗಳನ್ನೂ ಹತ್ತಿರಕ್ಕೆ ತೆಗೆದುಕೊಂಡು, ಹೃದಯಕ್ಕೆ ಒತ್ತಿಕೊಳ್ಳಬೇಕೆನ್ನಿಸಿತು. ಅವನ ಕೆನ್ನೆ, ಅಂದವಾದ ಕ್ರಾಪ್, ಅಗಲವಾದ ಮುಖ ಇವುಗಳ ಮೇಲೆ ಮುದ್ದಿನ ಮಳೆಗರೆಯಬೇಕೆನ್ನಿಸಿತು..... ಆದರೆ, ಒಂದನ್ನೂ ಮಾಡಲಾಗದ ಪ್ರಸಾದರಾವ್ ತುಟಿಗಳು ಸಣ್ಣದಾಗಿ ನಕ್ಕವು. ಕಾರಣ ? ಇಂತಹ ಅನುಭೂತಿಯನ್ನು ಅವನಿಂದ ಪಡೆಯುವ ವಯಸ್ಸು ದಾಟಿ ಹೋಗಿದೆ. ಬಾಲ್ಯದಿಂದ ಯೌವ್ವನ ದೆಸೆಗೆ, ಹುಡುಗತನ ಕಳೆದು ಊಹಾ ಪ್ರಪಂಚಕ್ಕೆ ಕಾಲಿಡುತ್ತಿದ್ದಾನೆ ತನ್ನ ಮಗ, ಅಪ್ರಯತ್ನವಾಗಿ ಅವರ ಕಣ್ಣು ಗಳು ಮಂಜಾದವು.

"ನಿಮ್ಮ ತಂದೆ ಬಸ್ ಕಂಡಕ್ಟರ್ ಎಂದು ಯಾರು ಹೇಳಿದರು ಮಗು ?" ಮುಖ ಪಕ್ಕಕ್ಕೆ ತಿರುಗಿಸಿಕೊಂಡು ಕಣ್ಣೊರಸಿಕೊಳ್ಳುತ್ತ ಕೇಳಿದರು ಪ್ರಸಾದ ರಾವ್.

"ನಮ್ಮಜ್ಜಿ ನನ್ನನ್ನ ಕಾಲೇಜಿಗೆ ಸೇರಿಸು ಅಂತ ನಮ್ಮ ದೊಡ್ಡ ಮಾವ ನಿಗೆ ಹೇಳಿದ್ದಕ್ಕೆ, 'ಕಂಡಕ್ಟರ್ ಮಗ ಕಲೆಕ್ಟರ್ ಆಗ್ತಾನಾ ?' ಎಂದು ಹಾಸ್ಯ ಮಾಡಿದರು. ಅದನ್ನ ಕೇಳಿ ನಮ್ಮ ತಂದೆ ಕಂಡಕ್ಟರ್ ಆಗಿರಬಹುದೇನೋ ಅಂದ್ಕೊಂಡೆ."

"ಅದೃಷ್ಟ ಇದ್ರೆ ಆಗ್ತಾನೆ ಅಂತ ಹೇಳು ನಿಮ್ಮಮ್ಮ ಏನಂದ್ರು ?" ಅವರಿಗರಿವಿಲ್ಲದೆಯೇ ಬಾಯಲ್ಲಿ ಬಂದವು ಆ ಮಾತುಗಳು.

"ಅಮ್ಮ ಸಹ ನಮ್ಮ ತಂದೆ ಕಂಡಕ್ಟರಾಗಿದ್ದಾರೆ ಅಂತ ಹೇಳಿದ್ಳು. ಇನ್ನೇನಂತಾರೆ ? ಅವರ ಹತ್ರ ಹಣ ಇಲ್ವಲ್ಲಾ ? ಅತ್ತರು.... ಇನ್ನೇನ್ ಮಾಡೋಕ್ಕಾಗುತ್ತೆ !" ಎಂದ ವಿಷಾದ ನಗೆ ನಗುತ್ತಾ.

ತಾನು ಊಹಿಸದಿದ್ದ ಈ ಪರಿಣಾಮವನ್ನು ತಡೆಯಲಾರದಾದರು ಪ್ರಸಾದರಾವ್. ಅವರ ಹೃದಯ ಚಲಿಸಿಹೋಯಿತು. ಕನಸೋ, ನನಸೋ! ಏನು ನಡೆಯುತ್ತದೋ ! ಏಕೆ ಇಂತಹ ಕ್ಷಣ ಎದುರಾಯಿತೋ ! ನಿಲ್ಲಲಾಗ ದಿದ್ದ ಪ್ರಸಾದರಾವ್ ಕೈಗಳನ್ನು ಕಟ್ಟಿಕೊಂಡು ಶತಪಥ ತಿರುಗುತ್ತಾ ಕ್ಷಣ ಕ್ಷಣಕ್ಕೂ ವಾಸುವನ್ನು ನೋಡುತ್ತಿದ್ದರು. ತನ್ನ ಹೋಲಿಕೆಗಳೂ, ಹೆಂಡ

ತಿಯ ಹೋಲಿಕೆಗಳೂ ಬೆರಕೆಯಾಗಿದ್ದ ಅವನ ರೂ, ಹೃದಯದ ತುಂಬಾ ಏನೋ ತೃಪ್ತಿ ಆವರಿಸಿ ಆರಿಹೋಗುತ್ತಿದ್ದ ದೀಪ ಪುನಃ ಪ್ರಕಾಶಮಾನವಾಗು ತ್ತಿರುವಂತೆ, ಆರಿಹೋಗಲು ಸಿದ್ಧವಾಗಿದ್ದ ಜ್ಯೋತಿಗೆ ಪುನಃ ತೈಲ ಎರೆದಂತೆ ಥಟ್ಟಕ್ಕನೆ ಪ್ರಸಾದರಾವ್ ಕಣ್ಣುಗಳು ವಿಚಿತ್ರ ಕಾಂತಿಯಿಂದ ಮಿನುಗಿದವು. ಭವಿಷ್ಯತ್ತಿನಲ್ಲಿ ತನ್ನ ಬಲವಾದ ಕೋರಿಕೆಗಳು ನೆರವೇರುವುವೆಂದು ಏಕೋ ಥಟ ಕ್ಕನೆ ಅವರು ಕಣ್ಣುಗಳನ್ನು ಕಿರಿದು ಮಾಡಿ ಹಾಗೆಯೇ ನಿಂತರು.

ತಲೆಬಾಗಿ ಮೌನವಾಗಿ ನಿಂತಿದ್ದ ವಾಸುವಿನ ಕಡೆ ಪರಿಶೀಲನಾ ದೃಷ್ಟಿ ಯಿಂದ ನೋಡುತ್ತಾ "ನಿನಗೆ..... ನಿನಗೆ ನಿಜವಾಗಿ ನನ್ನನ್ನು ಹೋಗಿ ನೋಡೂಂತ ಯಾರೂ ಹೇಳಲಿಲ್ವಾ ?" ಎಂದು ಪ್ರಶ್ನಿಸಿದರು ಪ್ರಸಾದರಾವ್, ಆ ಧ್ವನಿ ಎಂದಿನಂತಿರಲಿಲ್ಲ.

"ಇಲ್ಲ ಸಾರ್. ನಿಮ್ಮನ್ನು ನೋಡೋದಕ್ಕೆ ಹೋಗ್ತೀನಿ ಅಂತ ಹೇಳಿದೆ, ಹೊಸಲು ದಾಟೋದಕ್ಕೆ ನನಗೆ ಅವಕಾಶ ಕೊಡ್ತಿದ್ರಾ ?" ಎನ್ನುತ್ತಾ ನಕ್ಕ ವಾಸು.

ಅಷ್ಟರಲ್ಲಿ ಒಬ್ಬ ಆಳು ಬಂದದ್ದರಿಂದ ಇಬ್ಬರ ಸಂಭಾಷಣೆಯೂ ನಿಂತು ಹೋಯಿತು.

"ಎರಡು ಊಟ ತಗೊಂಡ್ಬಾ" ಎನ್ನುತ್ತಿದ್ದ ಪ್ರಸಾದರಾವ್ ಮಾತಿಗೆ ಅಡ್ಡಿಬರುತ್ತಾ, "ಬೇಡ, ನಾ ಊಟ ಮಾಡೋದಿಲ್ಲ" ಎಂದ ವಾಸು. ಅವನು ಮಾಡಿದ್ದ ಕೆಲಸಕ್ಕೆ ಅವನಿಗೆ ಭಯವಾಯಿತೇನೋ...... ಸಣ್ಣದಾಗಿ ಮೈ ನಡು ಗುತ್ತಿದ್ದರೆ ಬೆದರು ಕಣ್ಣುಗಳಿಂದ ನೋಡುತ್ತಿದ್ದ ವಾಸು.

"ಯಾಕೆ, ಹಸಿವಿಲ್ವಾ ? ಯಾಕೆ ಭಯಪಡ್ತಿರೋ ಹಾಗಿದ್ದೀಯಲ್ಲಾ, ನಾನು ಫೀಸ್ ಕೊಟ್ಟು ಓದಿಸ್ತೀನಲ್ಲಾ !" ಆ ಧ್ವನಿಯಲ್ಲಿ ಏನೋ ನೋವು, ಕರುಣೆ.

ಕೃತಜ್ಞತೆಯಿಂದ, ನೀರು ತುಂಬಿದ ಕಣ್ಣುಗಳಿಂದ ಪ್ರಸಾದರಾವ್ ಕಡೆ ನೋಡಿದ ವಾಸು.

"ಬೇಡ, ಬೇಡ" ಎನ್ನುತ್ತಾ ಸಂಕೋಚಪಡುತ್ತಿದ್ದ ವಾಸುವಿಗೆ ಬಲ ವಂತ ಮಾಡಿ ತಿನ್ನಿಸಿದರು ಪ್ರಸಾದರಾವ್.

ಊಟ ಮುಗಿಸಿ ಏಳುತ್ತಾ, "ಆದರೆ ನೀವು ಫೀಸ್‌ಗೆ ಹಣ ಕೊಡ್ತೀ ರೀಂತ ಮಾವನಿಗೆ ಹೇಳ್ತೀನಿ" ಎಂದ ವಾಸು

"ಸರಿ, ನಾನೂ ಕಾಗದ ಬರೀತೀನಿ, ಗೋಪಾಲನ ಅಡ್ರೆಸ್ ಗೊತ್ತಾ?" ಎಂದರು ಪ್ರಸಾದರಾವ್.

"ಊಂ ಬರೆದುಕೊಡ್ತೀನಿ, ಹತ್ತು ಗಂಟೆಗೆ ಟ್ರೈನ್ ಇದೆ. ಹೊರಡ್ತೀನಿ" ಎಂದು ಹೇಳಿದ ವಾಸುವಿನ ಕಡೆ ನಿರ್ನಿಮೇಷರಾಗಿ ನೋಡಿದರು ಪ್ರಸಾದರಾವ್. 'ವಯಸ್ಸಿಗೆ ಬಂದ ಮಗ......ಹಣಕ್ಕಾಗಿ ತಾಯಿ ಕಳುಹಿಸಿರಬೇಕು' ಎಂದು ಮನಸ್ಸಿಗೆ ಬಂದೊಡನೆ ಪ್ರಸಾದರಾವ್ ಮುಖ ಕೆಂಪಾಗಿ ಕರುಣೆ ಬತ್ತಿಹೋಯಿತು.

"ಆದರೆ ಇಷ್ಟು ವರ್ಷಗಳಾದ ಮೇಲೆ ನಿಮ್ಮಮ್ಮ ನಿಮ್ಮ ಅಮ್ಮ ನಿಮ್ಮ ತಂದೇನ ನೋಡ್ಕೊಂಡು ಬಾ ಹೋಗು ಅಂದಿದ್ದಕ್ಕೆ ಬಂದೇ ಅಲ್ವಾ?" ಆ ಧ್ವನಿಯಲ್ಲಿ ಅಸಹನೆ ಇತ್ತು.

"ಇಲ್ಲ, ಪಾಪ! ನೀವೆಲ್ಲಿದ್ದೀರಿ ಅನ್ನೋ ವಿಷಯ ಸಹ ನಮ್ಮಮ್ಮನಿಗೆ ಗೊತ್ತಿಲ್ಲ, ನನ್ನ ಮಾತು ನೀವು ನಂಬದೇ ಇದ್ರೇ ನಾನೇನೂ ಮಾಡೋದಕ್ಕೆ ಸಾಧ್ಯವಿಲ್ಲ. ನಾನು ನನ್ನ ಮನೇಲಿಟ್ಕೊಂಡು ಊಟ ಹಾಕ್ತೀನಿ, ದೊಡ್ಡ ಮಾವ ಫೀಸ್‌ಗೆ ಸಹಾಯ ಮಾಡ್ತಾರೇನೊ ಕೇಳ್ಕೊಂಡು ಬಾ ಅಂದ್ರು ಗೋಪಾಲಮಾವ......ನೀವು ಇರೋವಾಗ ಹೀಗೆ ಎಲ್ಲರನ್ನೂ ಬೇಡೋ ಅಗತ್ಯ ನನಗಿಲ್ಲ ಅನ್ನಿಸಿ ಯಾರಿಗೂ ಹೇಳದೆ......ಎಲ್ಲವನ್ನೂ ತ್ಯಜಿಸಿ... ನೀವು ಯಾರೋ ಗೊತ್ತಿಲ್ಲದಿದ್ರೂ ನಿಮ್ಮನ್ನೆಂದೂ ನಾನು ನೋಡದೇ ಇದ್ರೂ ನಾನಾಗಿ ನಾನು ನಿಮ್ಮನ್ನ ಹುಡುಕ್ಕೊಂಡು ಬಂದು ನಿಮ್ಮನ್ನ ಕೇಳ್ದೆ." ಮುಂದೆ ಮಾತು ಹೊರಡದೆ ಗಂಟಲು ಬಿಗಿಯಿತು ವಾಸುವಿಗೆ.

ಸಂತೋಷದಿಂದ ಮೈನವಿರೇಳುತ್ತಿದ್ದಂತೆ, "ವೆರಿಗುಡ್! ಒಳ್ಳೆ ಕೆಲ್ಸ ಮಾಡ್ದೆ. ನಾನು ಬಹಳ ಅದೃಷ್ಟವಂತ!" ಎನ್ನುತ್ತಾ ವಾಸುವಿನ ಬೆನ್ನು ನೇವರಿಸಿದರು ಪ್ರಸಾದರಾವ್.

"ಏನ್ರೀ" ಎನ್ನುತ್ತಾ ಸಂಶಯದಿಂದ ಮಾತು ನಿಲ್ಲಿಸಿದ ವಾಸುವನ್ನು ಪ್ರಶ್ನಾರ್ಥಕವಾಗಿ ನೋಡಿ ಮುಗುಳ್ನಕ್ಕರು.

"ನೀವು......ನೀವು...... ಅಂದ್ರೆ, ಬಸ್ ಕಂಡಕ್ಟರ್ ಪ್ರಸಾದರಾವ್ ಅಂದ್ರೆ...... 'ಹೌದು, ನಿನ್ನ ತಂದೆ ನಿಜವಾಗ್ಲೂ ನಿನ್ನ ತಂದೆ ಹತ್ತಿರಕ್ಕೆ ನೀ ಬಂದಿದ್ದೀ. ಈ ಸತ್ಯಾಂಶವನ್ನು ನೀನೂ ನಾನೂ ನಿಜ ಅಂದ್ಕೊಳ್ಳೋದಕ್ಕೆ ಆಗ್ಲಿಲ್ಲ ಅಲ್ವಾ? ಎಂದು ಫಕ್ಕನೆ ನಕ್ಕು, "ಐದು ವರ್ಷ ಒಬ್ಬ ಕಂಡಕ್ಟರ್

ಆಗಿ ಜೀವನ ನಡೆಸಿದಾಪ್ಪ ನಿನ್ನ ತಂಪೆ" ಎಂದರು ಪ್ರಸಾದರಾವ್, ಅವರ ಧ್ವನಿಯಲ್ಲಿ ಆವೇಶ, ವೇದನೆ ಮಿಳಿತವಾಗಿದ್ದವು.

ಹಾಗೆ ಹೇಳುತ್ತಿದ್ದ ಪ್ರಸಾದರಾವ್ ಎದೆಯಲ್ಲಿ ಹುದುಗಿ ಗೋಳೋ ಎಂದು ಅಳಬೇಕೆನ್ನಿಸಿತು ವಾಸುವಿಗೆ. ಅವರು ತನ್ನನ್ನು ಹತ್ತಿರಕ್ಕೆ ಕರೆದು ಕೊಂಡು ಮೈದಡವಿ ಸಮಾಧಾನೋಕ್ತಿಗಳನ್ನು ಹೇಳಿದರೆ ಚೆನ್ನಾಗಿರುತ್ತದೆ ಎನ್ನಿಸಿತು. "ಅಪ್ಪಾ !" ಎಂದು ಗಟ್ಟಿಯಾಗಿ ಅರಚಬೇಕೆನ್ನಿಸಿತು. ಯಾಕೆ ನನ್ನನ್ನ, ಅಮ್ಮನ್ನ ತೊರೆದುಬಿಟ್ಟಿದ್ದೀರಿ ? ನಾನೇನು ತಪ್ಪು ಮಾಡ್ದೆ ? ನನ್ನನ್ಯಾಕೆ ಇಷ್ಟು ಬೋರ್ ಮಾಡಿದ್ದೀರಿ ? ಎಂದು ಕೇಳಬೇಕೆನ್ನಿಸಿತು. ಹಾಗೆ ನೀರು ತುಂಬಿದ ವಿಶಾಲವಾದ ಕಣ್ಣುಗಳಿಂದ ತನ್ನನ್ನೇ ನೋಡುತ್ತಿದ್ದ ವಾಸು ವಿನ ಕಡೆ ನೋಡಿದ ಪ್ರಸಾದ್‌ರಾವ್, 'ನಾಳೆ ಬೆಳಿಗ್ಗೆ ಹೋದ್ರೆ ಸರಿ, ಈಗ ಪ್ರಯಾಣ ಮಾಡೋದು ಬೇಡ, ಹಾಯಾಗಿ ಮಲಗಿ ನಿದ್ದೆ ಮಾಡ್ತೀಯಂತೆ ....ಏನು ಮಗು !" ಎಂದರು ಕರುಣೆಯಿಂದ.

"ಈಗಾಗಲೇ ಬಹಳ ಲೇಟಾಗಿದೆ. ಸೀಟಿಗೆ ಅಪ್ಲೈ ಮಾಡಬೇಕು" ಗೊಣಗಿದ ವಾಸು.

"ಹದಿನಾರು ವರ್ಷ ನಿಮ್ಮ ಅಮ್ಮನ ಹತ್ರ ಹಾಯಾಗಿದ್ದಿ. ನಿನ್ನ ಆಟ ಪಾಠಗಳನ್ನು ನಿಮ್ಮಮ್ಮ ನೋಡಿದ್ದಾಳೆ. ಆದರೆ ಈ ನಿರ್ಭಾಗ್ಯನ ಜೊತೇಲಿ ಒಂದು ರಾತ್ರಿ ಕಳೆಯಲಾರೆಯಾ ಮಗು ? ನಿನ್ನನ್ನ ಏನಂತ ಕರೀತಾರೆ ?" ಆ ಧ್ವನಿಯಲ್ಲಿ ವ್ಯಥೆ, ನಿಷ್ಠುರ.

'ಸಾರ್' ಅರ್ಥವಾಗದಂತೆ ನೋಡಿದ ವಾಸು.

ಈ ಹುಡುಗ ತನ್ನ ಮಗನೆಂದು ತಿಳಿದ ಮೇಲೆ ವಾಸು 'ಸಾರ್' ಎಂದಾಗ ಛಟೀರನೆ ಕೊರಡಾ ಏಟು ಬಿದ್ದಂತೆ ಅನ್ನಿಸಿತು ಪ್ರಸಾದ್‌ರಾವ್‌ಗೆ.

"'ಸಾರ್' ಎನ್ನುತ್ತಾ ವಿಷಾದ ನಗೆ ನಕ್ಕು, ಇಷ್ಟು ದಿನಗಳಾದ ಮೇಲೆ ಉದುರಿಬಿದ್ದ ತಂದೆಯನ್ನು ಒಂದೇ ಬಾರಿಗೆ 'ಅಪ್ಪಾ' ಅಂತ ಹೇಗೆ ಸಂಬೋ ದಿಸಬಲ್ಲೆ ? ನಿನ್ನ ಹೆಸರೇನು.....? ಅಂದ್ರೆ ನಿನ್ನನ್ನ ಏನಂತ ಕರೀತಾರೆ ?" ಎಂದರು ಪ್ರಸಾದರಾವ್.

"ವಾಸು......ವಾಸು ಅಂತ್ಲೇ ಕರೀತಾರೆ. ನಾಳೆ ಬೆಳಿಗ್ಗೆ ಹೊರಡ್ತೀನಿ" ಎಂದ ವಾಸು, ಮನೆಯಲ್ಲಿದ್ದ ಒಂದು ಮಂಚದ ಕಡೆ ಸಂಕೋಚದಿಂದ ನೋಡುತ್ತಾ,

"ಅಲ್ಲಿ ಮಲಕ್ಕೋ," ಮಂಚ ತೋರಿಸಿದರು ಪ್ರಸಾದರಾವ್.

"ಊಹುಂ, ನೀವು ಮಲಕ್ಕೊಳ್ರಿ. ಒಂದು ದಿಂಬು ಕೊಟ್ರೆ ಕೆಳಗೆ ಮಲಕ್ಕೋತೀನಿ" ಎಂದ ವಾಸು.

"ಮಂಚ ದೊಡ್ಡದಾಗೇ ಇದೆ. ಈವತ್ತು ಇಬ್ಬರೂ ಅದರ ಮೇಲೆ ಮಲಗೋಣ. ಇನ್ನೊಂದು ಸಲ ನೀ ಬರೋ ವೇಳೆಗೆ ನಿನಗೆ ಬೇರೆ ಮಂಚ ರೆಡಿ ಮಾಡಿಟ್ಟಿರುತ್ತೀನಿ" ಎನ್ನುತ್ತಾ ಪ್ರೀತಿಯಿಂದ ವಾಸುವಿನ ಕೈಹಿಡಿದು ಮಂಚದ ಮೇಲೆ ನೂಕಿದರು.

೦ ೦ ೦ ೦

ಗಾಢ ನಿದ್ರೆಯಲ್ಲಿದ್ದ ವಾಸುವಿನ ಮುಖವನ್ನು ಕರುಣೆಯಿಂದ ನೋಡುತ್ತಾ ಅವನ ತಲೆಯನ್ನು ಪ್ರೀತಿಯಿಂದ ನೇವರಿಸಿ ಸ್ಪರ್ಶಿಸಿದ ಪ್ರಸಾದರಾವ್‌ಗೆ ರಾಜಶೇಖರ್ ಅಂದ ಮಾತು ಜ್ಞಾಪಕ ಬಂದು ಸಣ್ಣ ನಗೆ ನಕ್ಕರು.

೦ ೦ ೦ ೦

ಆ ದಿನ ಬಸ್ಸು ಅನ್ನವರ ದಾಟಿ ವೇಗವಾಗಿ ಓಡುತ್ತಿತ್ತು. ಕಂಡಕ್ಟರ್ ಪ್ರಸಾದರಾವ್, 'ಟಿಕಟ್, ಟಿಕೆಟ್' ಎನ್ನುತ್ತಾ ಕೈ ಚಾಚಿದ.

ಮಡಿಲಲ್ಲಿ ಕೂತಿದ್ದ ಐದು ವರ್ಷದ ಹುಡುಗನನ್ನು ಎಬ್ಬಿಸಿ ಬ್ಯಾಗ್ ತೆರೆದು ಹತ್ತು ರೂಪಾಯಿಯ ನೋಟನ್ನು ಕೊಡುತ್ತಿದ್ದ ಸ್ತ್ರೀಯ ಕಡೆ ನೋಡಿದ ಪ್ರಸಾದರಾವ್ ಅಪ್ರತಿಭನಾದ.

ಟಿಕೆಟ್ಟು, ಚಿಲ್ಲರೆ ಕೊಡುತ್ತಿದ್ದ ಕಂಡಕ್ಟರ್ ಕಡೆ ನೋಡಿದ ಆಕೆ ಬೆದರಿ ನೋವಿನಿಂದ ನಿಟ್ಟುಸಿರು ಬಿಟ್ಟು 'ನೀವಾ ?' ಎಂಬಂತೆ ನೋಡಿದಳು.

ತಕ್ಷಣ ನೀರು ತುಂಬಿದ ಕಣ್ಣುಗಳನ್ನು ನೋಡಿದ ಅವನು ಕರಗಿಹೋದ.

ಆಕೆಯ ಅನುಮತಿ ಇಲ್ಲದೆಯೇ ಅವಳ ಮಗನನ್ನು ತನ್ನ ಸೀಟಿಗೆ ಕರೆದೊಯ್ದು ಮಡಿಲಲ್ಲಿ ಕೂರಿಸಿಕೊಂಡ ಕಂಡಕ್ಟರ್ ಎದೆಗೊತ್ತಿಕೊಂಡು ತಲೆ, ಕೆನ್ನೆಗಳ ಮೇಲೆ ಮುದ್ದಿನ ಮಳೆಗರೆಯುತ್ತಿದ್ದ ಆತನೆಡೆ ಆಶ್ಚರ್ಯದಿಂದ ನೋಡಿದ ಆ ಹುಡುಗ.

"ತಾತ ಚೆನ್ನಾಗಿದ್ದಾರಾ ? ಮಗೂ !" ಕೇಳಿದ ಕಂಡಕ್ಟರ್.

''ಸತ್ತು ಹೋದ್ರು'' ಜವಾಬು.

"ಯಾವಾಗ ?'' ಆ ಧ್ವನಿ ಕಂಪಿಸಿತು. ಅವನ ಕಣ್ಣುಗಳಲ್ಲಿ ಅಪ್ರಯತ್ನ ವಾಗಿ ನೀರಿನ ಪೊರೆ.

"ಬಹಳ ದಿವಸ ಆಯ್ತು.'' ಭೀತಿಯಿಲ್ಲದ ಹುಡುಗನ ಜವಾಬು.

ಒಂದು ಸಲ ಅವಳ ಕಡೆ ನೋಡಿದ ಕಂಡಕ್ಟರ್, ಹಿಂದಿರುಗಿ ಕೂತಿದ್ದ ಅವಳ ಕೂದಲಲ್ಲಿ ಕರಿ, ಬಿಳಿ ಕೂದಲುಗಳು ಕಷ್ಟ, ಸುಖದಿಂದ ಕೂಡಿದ ಅವಳ ಜೀವನದಂತೆ ತೋರುತ್ತಿತ್ತು.

ಒಂದೊಂದು ಸಲ ಪ್ರಸಾದರಾವ್ ಕಡೆ ನೋಡುತ್ತಾ, ಅವನು ನೋಡಿ ದೊಡನೆ ನೋಟ ಬೇರೆಡೆ ತಿರುಗಿಸುತ್ತಿದ್ದಳು ಆಕೆ.

"ಆದ್ರೆ ಬೇರೆಯವರೆಲ್ಲಾ ಚೆನ್ನಾಗಿದ್ದಾರಾ ?'' ಪುನಃ ಪ್ರಶ್ನಿಸಿದ ಕಂಡಕ್ಟರ್ ಹುಡುಗನನ್ನು ಹತ್ತಿರಕ್ಕೆಳೆದುಕೊಳ್ಳುತ್ತಾ.

''ಚೆನ್ನಾಗಿರೋದು ಅಂದ್ರೆ, ಸತ್ತುಹೋಗ್ದೆ ಇರೋದು ಅಂತ್ಲಾ ?" ಎಂದು ಎದುರು ಪ್ರಶ್ನಿಸಿದ ಹುಡುಗ.

ಮಗುವಿನ ಮುದ್ದು ಮಾತುಗಳಿಗೆ ತಂದೆ ನಗುವಂತೆ ನಕ್ಕ ಕಂಡಕ್ಟರ್.

''ಕಂಡಕ್ಟರ್ ಯಾವುದೋ ಪ್ರಪಂಚದಲ್ಲಿದ್ದಾನೇಂತ ಕಾಣುತ್ತೆ ಟಿಕೆಟ್ ಕೊಡ್ತಾ ಇಲ್ವಲ್ಲಾ ?" ಎಂದ ಒಬ್ಬ ಪ್ರಯಾಣಿಕ ನಗುತ್ತಾ.

"ಮಗೂ, ಹೀಗ್ಬಾ !" ಎಂದು ಆಕೆ ಕೂಗಿದಳು. ತಾಯಿಯ ಬಳಿಗೆ ಹೊರಟುಹೋದ ಆ ಹುಡುಗ. ವಾಪಸ್ ಬಂದ ಹುಡುಗ ಬಿಸ್ಕೆಟ್ ಪ್ಯಾಕೆಟ್ ನೊಂದಿಗೆ ಅವಳ ಮಡಿಲಲ್ಲಿ ಕುಳಿತ. ಹುಡುಗನ ತಲೆ ನೇವರಿಸುತ್ತಿದ್ದ ಅವಳ ಕಣ್ಣುಗಳ ತುಂಬಾ ನೀರು.

''ಕಾಫಿ ಬೇಕಾ ?" ಕಂಡಕ್ಟರ್ ಆಕೆಯನ್ನು ಕೇಳಿದ. ಆ ಧ್ವನಿಯಲ್ಲಿ ಕರುಣೆ, ಹೃದಯದಲ್ಲಿ ಅಡಗಿದ್ದ ಮಮತೆ ಇತ್ತು.

ಅವಳು ತಲೆ ಅಲ್ಲಾಡಿಸಿದಳು ಬೇಡವೆಂಬಂತೆ.

"ತಗೊಳ್ಳೀಮ್ಮಾ" ಹೋಟೆಲ್ ಹುಡುಗ ಅವಳಿಗೆ ಕಾಫಿ ಲೋಟ ಕೊಟ್ಟು.

''ನಾನು ಬೇಕು ಅಂತ ಕೇಳಲಿಲ್ಲವಲ್ಲಾ !" ಹೆದರುತ್ತಾ ಹೇಳಿದಳು.

''ಅವರು ನಿಮಗೆ ಕೊಡು ಅಂತ ಹೇಳಿದ್ರು" ಕಂಡಕ್ಟರನ್ನ ತೋರಿಸಿದ

ಆ ಹುಡುಗ. ಅವಳು ಮರುಮಾತನಾಡದೆ ತೆಗೆದುಕೊಂಡಳು. ಬಸ್ಸು ಹೊರಟಿತು. ಟಿಕೆಟ್ ಕೊಡುವುದು, ಪ್ರಯಾಣಿಕರನ್ನು ಸೀಟುಗಳಲ್ಲಿ ಕೂಡಿಸುವುದರಲ್ಲಿ ಮಗ್ನನಾದ ಕಂಡಕ್ಟರ್.

"ಮಾವ !" ಕರೆದ ಆ ಹುಡುಗ.

"ಛೀ, ತಪ್ಪು ಮಾವ ಅಲ್ಲ ...'' ಅವಳ ಗದರಿಕೆ ಕೇಳಿದ ಅವಳ ಒಣಗಿಹೋಗಿದ್ದ ತುಟಿಗಳ ಮೇಲೆ ಮಂದಹಾಸ ಮೂಡಿತು.

ಧೂಳಿ ದೂಸರಿತವಾದ ಕಾಕಿಬಟ್ಟೆಗಳೂ, ಕೆದರಿಹೋದ ಕೂದಲು, ಬತ್ತಿಹೋದ ಕೆನ್ನೆಗಳೂ, ಗುಳಿ ಬಿದ್ದ ಕಣ್ಣುಗಳೂ ಆ ಕಣ್ಣುಗಳ ಕೆಳಗೆ ಕಪ್ಪುಗೆರೆಗಳೂ ... ಅವನ ಮುಖದಲ್ಲಿ ನಿರಾಸೆ ಎದ್ದು ಕಾಣುತಿದ್ದವು.

ಕರುಣೆಯಿಂದ ಅವನೆಡೆ ನೋಡಿದಳು. ಹತ್ತು ವರ್ಷಗಳ ಕೆಳಗೆ ಮದುಮಗನಾಗಿ ಠೀವಿಯಿಂದ ಉಲ್ಲನ್ ಸೂಟಿನಲ್ಲಿ ಅವನ ಸ್ನೇಹಿತರ ಮಧ್ಯೆ ಕೂತು ಮಾತನಾಡುತ್ತಿದ್ದರೆ, ಅವನನ್ನು ಪರಿಶೀಲಿಸಿದ ಒಬ್ಬ ವಯಸ್ಸಾದಾಕೆ ಅವನ ಕೆನ್ನೆಗಳನ್ನು ನೇವರಿಸಿ, 'ಮನ್ಮಥನಂತಿದ್ದಾನೆ ಮಧು ನಿನ್ನ ಗಂಡ, ಎಷ್ಟು ಅದೃಷ್ಟವಂತೆಯೇ ನೀನು !' ಎಂದು ಹಾಸ್ಯ ಮಾಡಿದ್ದ ದೃಶ್ಯ ಅವಳ ಕಣ್ಣೆದುರು ಸುಳಿದು ಪುನಃ ಅವನ ಕಡೆ ನೋಡಿ ಸಂಕಟದಿಂದ ನಿಟ್ಟುಸಿರು ಬಿಟ್ಟಳು ಮಧುಮತಿ.

ಬಸ್ಸು ನಿಂತದ್ದರಿಂದ "ನೀವು ಇಳಿಯಬೇಕಾಗಿರೋ ಊರು ಇದೇ" ಎಂದು ಹೇಳಿದ ಕಂಡಕ್ಟರ್.

ಸೂಟ್‌ಕೇಸ್, ಬ್ಯಾಗ್ ತೆಗೆದುಕೊಂಡು ಬಸ್ಸಿನಿಂದ ಇಳಿದಳು. ಆ ಹುಡುಗನನ್ನೆತ್ತಿಕೊಂಡು ಎರಡು ಕೆನ್ನೆಗಳಿಗೂ ಮುತ್ತುಕೊಟ್ಟ. ''ಬರ್ತೀಯಾ ಟಾಟಾ ಹೇಳೋದಿಲ್ವಾ ?" ಎಂದು ಗದ್ಗದಿತನಾಗಿ ಕೇಳಿದ ಕಂಡಕ್ಟರ್.

ಅವಳ ಬಳಿ ನಿಂತಿದ್ದ ಹುಡುಗಾ "ಟಾಟಾ" ಎಂದ.

ಅವನ ಜೀವನದಲ್ಲಿ ಬಿಸಿಲು ಕುದುರೆಯಾಗಿದ್ದ ಅನೇಕ ಕೋರಿಕೆಗಳಲ್ಲಿ ಒಂದು ನೆರವೇರಿತು. ತನ್ನ ಮಗನ ಮುದ್ದು ಮಾತುಗಳನ್ನು ಕೆಲ ಕ್ಷಣಗಳು ಕೇಳಿದ್ದ.

ಕರವಸ್ತ್ರದಿಂದ ಗಬಗಬನೆ ಕಣ್ಣು ಮುಖ ಒರೆಸಿಕೊಳ್ಳುತ್ತಿದ್ದ ಕಂಡಕ್ಟರನ್ನ ''ಏನ್ರೀ ! ಅವರು ನಿಮ್ಮ ಬಂಧುಗಳಾ ?" ಎಂದು ಪ್ರಶ್ನಿಸಿದ ಒಬ್ಬ

ಪ್ರಯಾಣಿಕ. ''ಹೌದು, ತಿಳಿದವರು" ಮುಖ ಪಕ್ಕಕ್ಕೆ ತಿರುಗಿಸಿದ ಕಂಡಕ್ಟರ್.

ഠ ഠ ഠ ഠ

ನಂತರ ಕೆಲವು ದಿನಗಳಾದ ಮೇಲೆ ವಿಶಾಖಪಟ್ಟಣದಲ್ಲಿ ವಿಲಾಸ್ ಹೋಟೆಲ್‌ನಿಂದ ಬರುತ್ತಿದ್ದ ವ್ಯಕ್ತಿಯನ್ನು "ಚೆನ್ನಾಗಿದ್ದೀಯಾ ಗೋಪಾಲ" ಎಂದು ಪ್ರಶ್ನಿಸಿದ್ದ ಬಸ್ ಕಂಡಕ್ಟರ್ ಪ್ರಸಾದರಾವ್. ''ಓಹೋ......ನೀವಾ ? ಅಕ್ಕ ಹೇಳಿದ್ಲು. ಸ್ವಲ್ಪ ದಿನಗಳ ಕೆಳಗೆ ನೀವು....."ಎನ್ನುತ್ತಾ ನಿಲ್ಲಿಸಿದ ಆ ವ್ಯಕ್ತಿ.

''ಹೌದು, ಬಸ್ ಕಂಡಕ್ಟರ್ ಕೆಲಸಮಾಡ್ತಿದ್ದೆ ! ನಿಮ್ಮ ತಂದೆಯವರು ತೀರಿಕೊಂಡ್ರು ಅಂತ ಕೇಳ್ದೆ.....ಛೇ, ಏನೋ......ಎಲ್ಲಾ ಚೆನ್ನಾಗಿದ್ದಾರೆ ತಾನೇ ?" ಎಂದ ಪ್ರಸಾದರಾವ್.

''ಊಂ, ಎಲ್ಲಾ ಚೆನ್ನಾಗಿದ್ದಾರೆ. ಈಗ ಎಲ್ಲಿ ಕೆಲಸ ಮಾಡ್ತಿದ್ದೀರಿ ?" ಎದುರಿಗೆ ಬಂದು ನಿಲ್ಲಿಸಿ ಮಾತನಾಡೋ ವ್ಯಕ್ತಿಯೊಂದಿಗೆ ಏನೋ ಮಾತನಾಡಬೇಕಲ್ಲಾ ಎಂದು ಮಾತನಾಡಿದ್ದರು ಗೋಪಾಲರಾವ್.

ಪೆನ್, ಚಿಕ್ಕಕಾಗದ ಜೋಬಿನಿಂದ ತೆಗೆದು ಅಡ್ರೆಸ್ ಬರೆದು, ''ಇದೋ, ನನ್ನ ಅಡ್ರೆಸ್'' ಎನ್ನುತ್ತಾ ನಿಷ್ಕ್ರಮಿಸಿದರು ಪ್ರಸಾದರಾವ್.

ಆ ನಿಷ್ಕ್ರಮಣದಲ್ಲಿ ಪ್ರಸಾದರಾವ್ ಮನಃಪಟಲದ ಮೇಲೆ ಎಷ್ಟು ಹಿಂದಿನ ಸ್ಮೃತಿಗಳು ಜ್ಞಾಪಕ ಬಂದು ಮನಸ್ಸು ಭಾರವಾಗಿತ್ತೋ ಊಹಿಸಬಹುದಾಗಿತ್ತು.

ಭಾರವಾದ ಹೆಜ್ಜೆಗಳನ್ನು ಹಾಕುತ್ತಾ ಮುಂದೆ ಹೋಗುತ್ತಿದ್ದ. ಅವನ ಕಡೆ ಕೋಪದಿಂದ ನೋಡುತ್ತಾ, "ಛಿ, ಭ್ರಷ್ಟ" ಎಂದು ಗೊಣಗಿದರು ಗೋಪಾಲರಾವ್.

ഠ ഠ ഠ ഠ

ಪಕ್ಕಕ್ಕೆ ತಿರುಗಿ ಮಲಗಿದ್ದ ವಾಸು ಪುನಃ ಅಂಗಾತನಾಗಿ ಮಲಗಿದ. ಹಿಂದಿನದೆಲ್ಲಾ ಕ್ಷಣದಲ್ಲಿ ಮರೆತುಹೋದವು. ವಾಸುವಿನ ನಿರ್ಮಲವಾದ ಮುಖವನ್ನು ತೃಪ್ತಿಯಿಂದ ದಿಟ್ಟಿಸಿ ಸಮಾಧಾನದ ನಿಟ್ಟುಸಿರು ಬಿಟ್ಟು, ''ಗೋಪಾಲ

ನಿಗೆ ಅಡ್ರೆಸ್ ಕೊಟ್ಟ ವೇಳೆ ಎಷ್ಟು ಪವಿತ್ರವಾದದ್ದು! ಭಗವಂತಾ ! ಏಕಾಂತವಾಗಿ ವಿರಾಗಿಯಾಗಿ ಬದುಕುತ್ತಿದ್ದ ನನ್ನಲ್ಲಿ ಏನೋ ಆಸೆಗಳನ್ನು ಹುಟ್ಟಿಸುತ್ತಿದ್ದಿ. ಪುನಃ ನನ್ನ ಜೀವನದಲ್ಲಿ ಆಡಿ, ನನ್ನನ್ನು ಅಳಿಸಿ ನಗಬೇಡ. ಮಾನವ ಜೀವನದಲ್ಲಿ ಉಳಿಯುವ ಕೆಲವು ಮಧುರ ಕ್ಷಣಗಳನ್ನಾದರೂ ನಾನು ಅನುಭವಿಸಲು ಅವಕಾಶ ಕೊಡು!" ಎಂದು ಗಟ್ಟಿಯಾಗಿ ಕಣ್ಣುಗಳನ್ನು ಮುಚ್ಚಿಕೊಂಡ ಕೈಜೋಡಿಸಿದರು ಪ್ರಸಾದರಾವ್.

ಅವರ ಜೀವನದಲ್ಲಿ ವಿಧಿ ಯಾವ ನಾಟಕವಾಡಲು ಬಯಸುತ್ತಾನೋ !

ಆ ದಿನಗಳಲ್ಲಿ ಆ ತಾಲ್ಲೂಕಿನ ತಹಶೀಲ್ದಾರ್ ವೆಂಕಟರಾಮಯ್ಯನವರಿಗೆ ಒಳ್ಳೆಯ ಹೆಸರಿತ್ತು. ಸುತ್ತುಮುತ್ತ ಗ್ರಾಮದಲ್ಲಿ ಅವರ ಹೆಸರು ಪ್ರಸಿದ್ಧಿಯಾಗಿತ್ತು. ಅಷ್ಟೇ ಅಲ್ಲದೆ, ಜಮೀನು, ತೋಟ, ಮನೆ, ಮಠ, ಹೆಂಡತಿ, ಇಬ್ಬರು ಗಂಡು ಮಕ್ಕಳು, ಒಬ್ಬಳೇ ಹೆಣ್ಣುಮಗಳನ್ನೊಳಗೊಂಡ ಸುಖ ಸಂಸಾರ ಅವರದು.

ಒಂದು ಭಾನುವಾರ ಸಂಜೆ ಕಾಫಿ ಫಲಾಹಾರ ಸೇವಿಸಿದ ನಂತರ ಹೆಂಡತಿ ಮಕ್ಕಳೊಂದಿಗೆ ಕೂತು ಹರಟುತ್ತಿದ್ದರು ವೆಂಕಟರಾಮಯ್ಯನವರು.

ಹಿಂದಿನ ಬಾಗಿಲಿನ ಕಡೆ ನೋಡುತ್ತಾ "ಬನ್ನಿ, ಅಜ್ಜಿ" ಎಂದು ಕಿರುನಗೆಯೊಂದಿಗೆ ಆಹ್ವಾನಿಸಿದಳು ಮಧುಮತಿ, ವೆಂಕಟರಾಮಯ್ಯನವರ ಮಗಳು.

"ಯಾರಮ್ಮ ?" ಕೇಳಿದರು ಮಗಳನ್ನು ವೆಂಕಟರಾಮಯ್ಯನವರು.

"ಪಕ್ಕದ ಮನೆಗೆ ಬಾಡಿಗೆಗೆ ಬಂದಿದ್ದಾರೆ ಅಪ್ಪಾ! ಅವರು ಪೂಜೆಗೋಸ್ಕರ ಹೂವು ತಗೊಂಡು ಹೋಗ್ತಾರೆ."

ಅಷ್ಟರಲ್ಲಿ ಕೊಠಡಿಯೊಳಗೆ ಬಂದಿದ್ದರು ಸರಸಮ್ಮ. ಬರುತ್ತಲೇ "ನಮಸ್ಕಾರ" ಎಂದು ಕೈ ಜೋಡಿಸುತ್ತಾ

"ಊಹುಂ, ದೊಡ್ಡವರು, ದಯಮಾಡಿ ಕೂಡಿ" ಎನ್ನುತ್ತಾ ವೆಂಕಟರಾಮಯ್ಯನವರು ವಿನಯದಿಂದ ಎದ್ದು ನಿಂತು ಕೈಜೋಡಿಸಿ ಪ್ರತಿನಮಸ್ಕಾರ ಮಾಡಿದರು.

ಕೆಲವು ಪರಿಚಯ ವಾಕ್ಯಗಳಾದ ನಂತರ, ಕೆಮ್ಮಿಗಂಟಲು ಸರಿಪಡಿಸಿಕೊಂಡು ಹೇಳಿದರು. "ನನ್ನ ಮೊಮ್ಮಗ ಬಿ. ಎ. ಪಾಸ್‌ಮಾಡಿ, ಕೆಲಸ ಸಿಗದೆ ತಿರಗ್ತಾ ಇದ್ದಾನೆ. ನಿಮ್ಮೊಂದಿಗೆ ಹೇಳಿದ್ರೆ ನೀವೇನಾದ್ರೂ ಕೆಲಸ ಕೊಡಿಸ್ತೀರಿ. ನಿಮ್ಮನ್ನ ನೋಡಿ ಅಂದ್ರು. ಎರಡು ಸಲ ಆಫೀಸಿಗೆ, ಒಂದ್ಸಲ

ಮನೆಗೆ ಬಂದಿದ್ನಂತೆ. ನಿಮ್ಮ ದರ್ಶನ ಸಿಗಲಿಲ್ಲ. ನಿಮಗೆ ಸಾವಿರ ಕೆಲ್ಸ. ಏನೋ ತಂಪೇ-ತಾಯಿೀನ ಕಳ್ಕೊಂಡ ಹುಡುಗನ್ನ ಬೆಳೆಸಿ ದೊಡ್ಡವನ್ನ ಮಾಡಿದೀನಿ. ಈ ಉಪಕಾರ ಮಾಡೋವ್ರು ಇನ್ನಾರೂ ಇಲ್ಲ ನಮಗೆ'' ಎಂದು ಪ್ರಾರ್ಥನಾ ಪೂರ್ವಕವಾಗಿ ತನ್ನ ಅಸಹಾಯಕತೆಯನ್ನೂ ಅವಶ್ಯಕತೆಯನ್ನೂ ಬಿನ್ನವಿಸಿ ಕೊಂಡರು ನರಸಮ್ಮನವರು.

"ಒಂದು ಸಲ ನನ್ನನ್ನ ಬಂದು ನೋಡೂಂತ ನಿಮ್ಮ ಹುಡುಗನಿಗೆ ಹೇಳಿ. ಅಪ್ಲಿಕೇಷನ್ ಬರೆದು ಕೊಟ್ರೆ, ಪ್ರಯತ್ನಪಡ್ತೀನಿ" ಎಂದರು ವೆಂಕಟರಾಮಯ್ಯ ನವರು ಗತ್ತಿನಿಂದ.

ಹೊರಡುತ್ತ "ಏನೋ ನಿಮ್ಮ ದಯೆ, ಅವನನ್ನ ಬಿಟ್ರೆ ನನಗೆ ಇನ್ನಾರೂ ಇಲ್ಲ'' ಎಂದರು ನರಸಮ್ಮ.

''ನೋಡೋಣ, ಹೋಗಿಬನ್ನಿ" ಎಂದರು ವೆಂಕಟರಾಮಯ್ಯ.

೦ ೦ ೦ ೦

ಎರಡು ದಿನಗಳ ನಂತರ "ಅಜ್ಜೀ ! ನಿಮ್ಮ ಮೊಮ್ಮಗ ನಮ್ಮ ತಂದೆಯವ ರನ್ನ ನೋಡಿದ್ರಾ ?" ಎಂದು ಕೇಳಿದಳು, ಮಧುಮತಿ ಅವರ ತಟ್ಟೆಯಲ್ಲಿ ಹೂವುಗಳನ್ನು ಸುರಿಯುತ್ತಾ.

"ಊಂ, ನೋಡಿದ್ದ ! ಒಂದು ವಾರದಲ್ಲಿ ಇಂಟರ್‌ವ್ಯೂಗೆ ಕರೀತಾರಂತೆ"

"ಊಂ, ಸೆಲೆಕ್ಟ್ ಆದ್ರೆ ಕೆಲ್ಸ ಕೊಡ್ತಾರೆ" ಎಂದಳು ನಗುತ್ತಾ.

೦ ೦ ೦ ೦

ಅಂದು ಸಂಜೆ ಬೀದಿ ಬಾಗಿಲು ತೆಗೆಯುತ್ತಾ "ಯಾರು" ಎಂದು ಪ್ರಶ್ನಿಸಿ ದಳು ಮಧುಮತಿ.

''ನಿಮ್ಮ ತಂದೆಯವರಿದ್ದಾರಾ ?'' ಎಂದ, ವಿನಯದಿಂದ ಇಪ್ಪತ್ತೈದು ವರುಷದ ಸುಂದರ ಯುವಕ.

ಅವನೆನ್ನು ಒಮ್ಮೆ ಚಕಿತಳಾಗಿ ನೋಡಿ ಮಧುಮತಿ, "ಇನ್ನೂ ಮನೆಗೆ ಬಂದಿಲ್ಲ, ಕ್ಲಬ್ಬಿಗೆ ಹೋಗಿದ್ದಾರೇನೋ ?" ಎಂದಳು ತಡವರಿಸುತ್ತಾ.

''ಸರಿ, ಪುನಃ ಬರ್ತೀನಿ, ನಾ ಬಂದಿದ್ದೆ ಅಂತ ಹೇಳಿ" ಎನ್ನುತ್ತಾ ಹಿಂದಿರುಗಿದ ಆ ಯುವಕ.

"ನೀವೊಂದ್ರೆ, ಯಾರು ಬಂದಿದ್ರೂಂತ ಹೇಳ್ಬೇಕು ?'' ಎಂದು ಪ್ರಶ್ನಿಸಿದಳು ನಗುತ್ತಾ, ಅವಳ ಕಣ್ಣುಗಳಲ್ಲಿ ಚೇಷ್ಟೆಯ ನಗು ಕಾಣುತ್ತಿತ್ತು.

ಅವಳ ಮಧುರ ಕಂಠ ಅವನನ್ನು ಹಿಡಿದು ನಿಲ್ಲಿಸಿತು. ಅವಳ ನೋಟ ಅವನನ್ನಾಕರ್ಷಿಸಿದವು. ಹಿಂದಿರುಗಿ ಅವಳ ಕಡೆ ನೋಡಿದ ಅವನ ತುಟಿಗಳಲ್ಲಿ ಮಂದಹಾಸವಿತ್ತು.

ಕಿರುನಗೆ ಬೀರುತ್ತಾ, ''ನಾನಾ……ನಾನಾ ? ನಿಮ್ಮ ಅಜ್ಜಿಮೊಮ್ಮಗ ಅಂತ ಹೇಳಿ'' ಎಂದ.

''ಓ ನೀವಾ ?……ನಿಮ್ಮ ಹೆಸರು ?" ಅಪ್ರಯತ್ನವಾಗಿ ಕೇಳಿದಳು. ಶ್ಯಾಮಲ ವರ್ಣ ಕೋಲು, ಗುಂಡು ಎರಡೂ ಅಲ್ಲದ ಮುಖ, ವಿಶಾಲವಾದ ಹಣೆ, ಕಪ್ಪು, ಗುಂಗುರು ಕೂದಲು ಬಿಲ್ಲಿನಂತೆ ಬಗ್ಗಿರುವ ಅಂದವಾದ ಹುಬ್ಬುಗಳೂ, ಆಕರ್ಷಿಸುವ. ಕಣ್ಣುಗಳೂ, ಸಂಪಿಗೆಯಂತಹ ಮೂಗು, ಗುಳಿಬೀಳುವ ಕೆನ್ನೆ, ಚೂಪಾದ ಗಡ್ಡ, ಇನ್ನೂ ಹದಿನೆಂಟು ವರ್ಷ ತುಂಬಿದ ಸುಂದರ ಯುವತಿಯನ್ನು ಪರಿಶೀಲಿಸಿ ನೋಡಿದ ಪ್ರಸಾದ್, ವಿವೇಕ ಬೆನ್ನು ತಟ್ಟಲು ತಪ್ಪೆಂದುಕೊಳ್ಳುತ್ತಾ, ತಮ್ಮ-ತಮ್ಮ ಅಂತರವನ್ನು ಜ್ಞಾಪಿಸಿಕೊಳ್ಳುತ್ತಾ, 'ಸಾರಿ……ಪ್ರಸಾದರಾವ್ ಅಂತ ಹೆಸರು" ಎಂದು ಹೇಳುತ್ತಾ ಬೀದಿಯ ಗೇಟನ್ನು ತಳ್ಳುತ್ತಾ ಸರಸರ ಹೊರಟುಹೋದ.

"ಸಾರಿ……ಯಾಕೋ !" ನಕ್ಕಳು ಮಧುಮತಿ.

o o o o

ಸಂಜೆ "ಅಜ್ಜಿ ಮೊಮ್ಮಗ ನಿಮ್ಮನ್ನ ಹುಡಕ್ಕೊಂಡು ಬಂದಿದ್ರು. ಅವಂಗೇನಾದ್ರೂ ಕೆಲ್ಸ ಸಿಕ್ತಾಪ್ಪಾ!'' ಎಂದು ಕೇಳಿದಳು ಮಧುಮತಿ ವೆಂಕಟರಾಮಯ್ಯನವರನ್ನು.

"ಊಂ, ಒಂದು ಗುಮಾಸ್ತೆ ಕೆಲಸ ಖಾಲಿ ಇತ್ತು. ಅದನ್ನ ಕೊಡಿಸಿದ್ದೀನಮ್ಮ, ಒಳ್ಳೆ ಬುದ್ಧಿವಂತ'' ಎನ್ನುತ್ತಾ "ಅಜ್ಜಿ ಮೊಮ್ಮಗ, ಅಂದ್ರೆ ಮಧು ಅಜ್ಜಿ ಮೊಮ್ಮಗ ಇಲ್ವಾ ? ಚೆನ್ನಾಗಿದ್ದಾನೆ, ಒಳ್ಳೆ ಸ್ಫುರದ್ರೂಪಿ, ಎಷ್ಟು ಬುದ್ಧಿವಂತ ಅಂತೀಯಾ ! ಒಳ್ಳೇ ಜಾಣ ಹುಡುಗ" ಎಂದು ಮೆಚ್ಚಿಗೆ ವ್ಯಕ್ತಪಡಿಸಿದರು ಹೆಂಡತಿಯ ಮುಂದೆ.

ಮಧುಮತಿಯ ಕಣ್ಣುಗಳು ಮಿರೆದವು. ಹೌದು, ಅಜ್ಜಿ ಮೊಮ್ಮಗ ಬಹಳ ಚೆನ್ನಾಗಿದಾನೆ. ಅವಳ ಹೃದಯದಲ್ಲಿ ಏನೋ ಊಹೆಗಳು. ಆ ಊಹೆಗಳು ಎಷ್ಟೋ ಹೊತ್ತು ಪ್ರಸಾದರಾವ್ ಸುತ ಹೆಣೆದುಕೊಂಡವು.

"ಅಜ್ಜೀ !"

ಮೃದು ಮಧುರವಾದ ಧ್ವನಿ ಕಿವಿಗೆ ಬಿದ್ದೊಡನೆ ಹೊರಗೆಬಂದು. ಬಿದರುತ್ತಾ ಒಳಕ್ಕೆ ಹೊರಟುಹೋಗುತ್ತಾ "ಅಜ್ಜೀ ! ತಹಶೀಲ್ದಾರ್ ಮಗಳು ಬಂದಿದ್ದಾರೆ" ಎಂದ ಪ್ರಸಾದ್.

"ಬಾಮ್ಮ, ಬಾ, ಪ್ರಸಾದ್! ಆ ಕುರ್ಚಿ ಇಲ್ಲಿ ಹಾಕಪ್ಪಾ!" ಎಂದರು ನರಸಮ್ಮ ಆದರಪೂರ್ವಕವಾಗಿ.

ಕುರ್ಚಿ ಹಾಕಿದ ಪ್ರಸಾದ್, ಜವಾನನಿಗಿಂತ ಹೆಚ್ಚು ವಿನಯವನ್ನು ಪ್ರದರ್ಶಿಸುತ್ತ.

"ಇಲ್ಲ, ಹೋಗ್ತೀನಿ ಅಜ್ಜಿ. ಇವತ್ತು ಹೂವ ತಗೊಂಡು ಹೋಗೋದಕ್ಕೆ ಯಾಕೋ ಬರ್ಲಿಲ್ಲ. ನೋಡಿ ಬಾ ಅಂದ್ರು ಅಮ್ಮ. ಕೇಳಿ ಹೋಗೋಣಾಂತ ಬಂದೆ" ಎಂದು ಸುಳ್ಳು ಹೇಳಿದಳು ಮಧುಮತಿ.

"ನಮ್ಮ ಹುಡುಗ ಆಫೀಸ್ ಕೆಲಸದ ಮೇಲೆ ಬೇಗ ಎಲ್ಲೋ ಹೋಗ್ಬೇಕು ಅಂದ. ಎರಡು ಇಡ್ಲಿ ಮಾಡಿಕೊಡೋಣಾಂತ ಒದ್ದಾಡ್ತಿದ್ದೆ. ಅದಕ್ಕೇ ನಿಧಾನ ಆಯ್ತು. ನಿಮ್ಮ ತಾಯಿ ನೋಡ್ಕೊಂಡು ಬಾಂದ್ರಾ? ಎಷ್ಟು ಒಳ್ಳೆ ಗುಣ ? ಸ್ವಲ್ಪ ಕೂತ್ಕೊ ಅಮ್ಮಾ, ಹೊರಡ್ತೀಯಂತೆ," ಮುಸಿನಗೆ ನಕ್ಕರು ನರಸಮ್ಮ.

ಕೊಡುತ್ತಾ "ಇಗೋ, ಹೂ ತಂದಿದ್ದೀನಿ ಅಜ್ಜೀ" ಎಂದಳು ಮಧುಮತಿ. ತಾವರೆ ಎಲೆಯಲ್ಲಿ ಕಟ್ಟಿದ ಹೂವಿನ ಪೊಟ್ಟಣವನ್ನು ಕೆಳಗಿಡುತ್ತಾ.

"ಅವರಿಗೆ ತಿಂಡಿ ಕೊಡಮ್ಮ !" ಎಂದ ಪ್ರಸಾಸ್.

"ನನಗೆ ಬೆಳಿಗ್ಗೆ ತಿಂಡಿ ತಿನ್ನೋ ಅಭ್ಯಾಸ ಇಲ್ಲ" ಎಂದು ಉತ್ತರ ಕೊಟ್ಟಳು. ಮಧುಮತಿ.

"ಪರವಾಗಿಲ್ಲ, ಈವತ್ತು ಒಂದು ದಿನ ತಗೋಬೇಕು" ಎಂದ ಪ್ರಸಾದ್ ಸಲುಗೆಯಿಂದ. ನರಸಮ್ಮನವರೂ ಬಲವಂತಪಡಿಸಿದ್ದರಿಂದ ಸಂಕೋಚ ಪಡುತ್ತಲೇ ತಿಂಡಿ ತಿಂದಳು ಮಧುಮತಿ.

ಹೊರಡುತ್ತಾ, "ಅಜ್ಜಿ, ಬಾಗಿಲು ಹಾಕ್ಕೋ" ಎಂದ ಪ್ರಸಾದ್ ಧ್ವನಿ ಕೇಳಿದ ಮಧುಮತಿಯ ಕಣ್ಣುಗಳು ತನಗರಿವಿಲ್ಲದೆಯೇ ಅವನ ಕಡೆ ತಿರುಗಿದವು. ಅವನು ಹೋದ ಕಡೆಯೇ ಅವಳ ನೋಟ ನೆಟ್ಟಿತ್ತು ಕೆಲಕ್ಷಣಗಳು.

"ಅಬ್ಬಾ ! ಎಷ್ಟು ಚೆನ್ನಾಗಿದ್ದಾರೆ ಇವರು '' ಹತ್ತುಬಾರಿ ಅವರನ್ನು ನೋಡಬೇಕೆನ್ನಿಸಿತು ಅವಳಿಗೆ, ಅವನ ಧ್ವನಿ ಕೇಳಬೇಕೆನಿಸಿತು. ಅವರು ಪುನಃ ಯಾವಾಗ ಬರುತ್ತಾರೋ ? ಅವಳ ಹೃದಯ ಒದ್ದಾಡಿತು.

"ಪುನಃ ಯಾವಾಗ ಬರೋದು ನಿಮ್ಮ ಮೊಮ್ಮಗ ?" ತನಗರಿವಿಲ್ಲದೆಯೇ ಈ ಪ್ರಶ್ನೆ ಅವಳ ಬಾಯಿಂದ ಹೊರಬಿತ್ತು.

"ಅವನಾ ? ಸಂಜೆ ಬಂದ್ಬಿಡ್ತಾನಮ್ಮ" ಎಂದರು ನರಸಮ್ಮ.

ಏಕೋ ಹಾಯಾಗಿ ನಿಟ್ಟುಸಿರು ಬಿಟ್ಟು, ಎದ್ದು ನಿಂತು,

"ಹೊರಡ್ತೀನಿ ಅಜ್ಜೀ !" ಎಂದಳು ಮಧುಮತಿ.

○ ○ ○ ○

"ಅಮ್ಮಾ, ಅಜ್ಜೀ ಮನೆಗೆ ಹೋಗ್ತಿದ್ದೀನಿ !" ಹೊಸಲಲ್ಲಿ ನಿಂತು ತಾಯಿಗೆ ಕೇಳಿಸುವಂತೆ ಹೇಳಿದಳು.

"ಆ ಹುಡುಗ ಮನೇಲಿ ಇರೋವಾಗ ಹೋಗ್ಬಾರದಮ್ಮ" ಎಚ್ಚರಿಸಿದರು ಜಾನಕಮ್ಮ.

ಪ್ರಸಾದರಾವ್ ಮನೆಗೆ ಬರುವವರೆಗೂ ಇದ್ದು ಅವನನ್ನೊಮ್ಮೆ ನೋಡಿ ಮೈ ತುಂಬಾ ಸೆರಗು ಹೊದ್ದು ಹಿತ್ತಲ ಬಾಗಿಲಿನಿಂದ ಮನೆ ಸೇರುತ್ತಿದ್ದಳು ಮಧುಮತಿ.

"ಅಜ್ಜೀ, ತಹಶೀಲ್ದಾರರ ಮಗಳು ಬರ್ತಾ ಇಲ್ವಾ ?" ಎಂದು ಕೇಳಿದ ಪ್ರಸಾದರಾವ್ ಒಂದು ದಿನ.

"ಊರಲ್ಲಿಲ್ಲವಲ್ಲಾ ! ದೊಡ್ಡ ಮನುಷ್ಯರು ಯಾವುದೋ ಸಂಬಂಧಗಳು ಬರ್ತಾ ಇದೆಯಂತೆ, ದೊಡ್ಡಪ್ಪ ಕಳಿಸು ಅಂತ ಬರೆದಿದ್ದರಂತೆ. ಯಾವುದಾದ್ರೂ ಸರಿಯಾದ ಸಂಬಂಧ ಕುದುರಿದರೆ ಈ ವೈಶಾಖ ಮಾಸದಲ್ಲಿ ಮದುವೆ ಮಾಡ್ಬಿಡ್ತಾರಂತೆ" ಎಂದು ಹೇಳುತ್ತಾ ತನ್ನ ಕೆಲಸದಲ್ಲಿ ತಲ್ಲೀನರಾದರು ನರಸಮ್ಮ. ಪ್ರಸಾದ್‌ನ ಮುಖ ವಿವರ್ಣವಾಯಿತು. ಅವನ ಮನಸ್ಸು ಕಳಕ್ ಎಂದಿತು,

ಅವಳು ಯಾರ ಹೆಂಡತಿಯೋ ಆಗುತ್ತಾಳೆಂದರೆ ಅದನ್ನು ಕೇಳಿ ಸಹಿಸಲಾರ ದಾದ ಹೃದಯಲ್ಲಿ ಅದೇನೋ ನೋವು ನಿರಾಸೆ ಉಂಟಾಯಿತು. 'ಅವಳನ್ನು ತಾನು ಬಯಸುತ್ತಿದ್ದೇನೆಯೇ ! ಎಂತಹ ಅವಿವೇಕ ! ಅವಳ ಅಂತಸ್ತೇನು ತನ್ನ ಅಂತಸ್ತೇನು ?' ತನ್ನಷ್ಟಕ್ಕೆ ತಾನೇ ನಕ್ಕ.

ಆದರೆ ಅವಳು ವಾಪಸ್ ಬಂದಿದಾಳೆಂದೂ, ಅಂದುಕೊಂಡಿದ್ದ ಸಂಬಂಧ ಗಳಾವುದೂ ಸರಿಹೋಗಲಿಲ್ಲವೆಂದೂ, ನರಸಮ್ಮನಿಂದ ತಿಳಿಯುವವರೆಗೂ ಅವನ ಹೃದಯದಲ್ಲಿನ ಆಂದೋಳನ ಕಡಿಮೆಯಾಗಲಿಲ್ಲ.

೦ ೦ ೦ ೦

ಒಂದು ದಿನ ''ಬೆಳಿಗ್ಗೆ-ತಹಶೀಲ್ದಾರ್ ಅವರು ಇದ್ದಾರಾ ?" ಪ್ರಸಾದ್ ಧ್ವನಿ ಕೇಳುತ್ತಲೇ, "ಬನ್ನಿಬನ್ನಿ, ಇದ್ದಾರೆ, ಕೂತ್ಕೊಳ್ಳಿ" ಎಂದಳು ಮಧುಮತಿ ರಪ್ಪೆ ಹಾಕದೆ ಅವನನ್ನೇ ನೋಡುತ್ತಾ. ಅವನೂ ಅವನನ್ನೇ ನೋಡುತ್ತಾ. ಅವನೂ ಅವಳ ಕಡೆ ಹಾಗೆಯೇ ದಿಟ್ಟಿಸಿದ. ತನ್ನ ಕಡಯೇ ನೋಡುತ್ತಿದ್ದ ಅವನ ನೋಟಕ್ಕೆ ಹೆದರಿ, ''ಸ್ನಾನಮಾಡ್ತಿದ್ದಾರೆ, ಕೂತ್ಕೊಳ್ಳಿ" ಎನ್ನುತ್ತಾ ಅವನಿಗೆ ಕುರ್ಚಿ ತೋರಿಸಿ ಸರಕ್ಕನೆ ಒಳಗೆ ಹೊರಟುಹೋದಳು ಮಧುಮತಿ.

ತಂದೆಗೂ, ಪ್ರಸಾದರಾವ್‌ಗೂ ತಿಂಡಿ ತಂದ ಮಧುಮತಿಯ ಕಡೆ ಸಂಕೋಚದಿಂದ ನೋಡುತ್ತಾ, "ನನಗೆ ಬೇಡಿ" ಎಂದ ಪ್ರಸಾದ್.

"ನಿಮ್ಮ ಮನೇಲಿ ಬಲವಂತಮಾಡಿ ಕೊಡಲಿಲ್ವಾ? ನೀವು ತಗೋಬೇಕು" ಎಂದು ಹೇಳುತ್ತಾ ಸಲುಗೆಯಿಂದ ಪ್ಲೇಟನ್ನು ಪ್ರಸಾದ್ ಮುಂದಿಟ್ಟಳು. ಇಬ್ಬರನ್ನೂ ಓರೆಗಣ್ಣಿನಿಂದ ನೋಡುತ್ತಾ ಮುಂದಹಾಸ ಬೀರಿದರು ವೆಂಕಟರಾಮಯ್ಯ.

ಪ್ರಸಾದ್ ಹೊರಟುಹೋದ ಮೇಲೆ "ಮಧು ಅವನು ಹೇಗಿದ್ದಾನೆ?" ಎಂದರು ವೆಂಕಟರಾಮಯ್ಯ ನಗುತ್ತಾ.

"ಹೋಗಿ, ಅಪ್ಪ!" ನಾಚಿದಳು ಮಧುಮತಿ.

ಎರಡು ತಿಂಗಳು ಕಳೆಯಿತು.

ಈಗ ಪ್ರಸಾದ್ ಮನೆಯಲ್ಲಿದ್ದರು. ನಾಚಿ ಹೊರಟುಹೋಗುತ್ತಿರಲಿಲ್ಲ. ಮಧುಮತಿ, ನರಸಮ್ಮನವರೊಡನೆಯೂ ಪ್ರಸಾದ್ ನಡುವೆಯೂ ನಗುತ್ತಾ ಕಾಲ ಕಳೆಯುತ್ತಿದ್ದಳು.

''ಏನ್ರೀ, ನೀವು ಎಲ್ಲಿಯವರೆಗೂ ಓದಿದ್ದೀರಿ?" ಪ್ರಸಾದ್ ಕೇಳಿದರು ಒಂದು ದಿನ,

"ಸ್ಕೂಲ್ ಫೈನಲ್ ಮುಗಿದೊಡನೆ ಬಿಡಿಸಿಬಿಟ್ರು ನಮ್ಮ ಮನೇಲಿ" ಎಂದಳು ಮಧುಮತಿ.

"ಓಹೋ ! ಹಾಗಾದ್ರೆ ಸಂಗೀತ ಏನಾದರೂ ಬರುತ್ತಾ?"

"ಸದ್ಯ, ಹಾಡೂಂತೀರೇನು ?"

ಕೇಳಿದ ಪ್ರಸಾದ್ "ಹೊಲಿಗೆ ಕೆಲಸ ಏನಾದ್ರೂ ಬರುತ್ತಾ ?" ಕಣ್ಣುಗಳಲ್ಲಿ ತುಂಟತನ ಕಾಣುತ್ತಿತ್ತು.

"ಅಂದ್ರೆ ?" ಅರ್ಥವಾಗದವಳಂತೆ ನೋಡಿದಳು ಮಧುಮತಿ.

"ಅಂದ್ರೆ, ಎಂಬ್ರಾಯಿಡರಿ ವಗೈರೆ."

"ನನಗೇನೂ ಬರೋದಿಲ್ಲ. ನಿಮಗೆ ಅದೆಲ್ಲಾ ಬರುತ್ತಾ ?" ತುಂಟನಗೆ ನಗುತ್ತಾ ಕೇಳಿದಳು ಮಧುಮತಿ.

"ಮತ್ತೆ ಅಡಿಗೆ ಕೆಲಸವೊ ?" ಎಂದ ಪ್ರಸಾದ್ ಅವಳ ಪ್ರಶ್ನೆ ತನಗೆ ಕೇಳಿಸಲಿಲ್ಲವೆಂಬಂತೆ.

"ಏನ್ರೀ, ಗಂಡಿನ ಕಡೆಯವರು ಸಹ ಈ ಪ್ರಶ್ನೆಗಳನ್ನು ಕೇಳಿಲ್ಲ.

"ಗಂಡಿನ ಕಡೆಯವರೇ ಕೇಳ್ತಾ ಇದ್ದಾರೆ ಅಂದ್ಕೋಬಾರ್ದಾ ?" ಎಂದ ಪ್ರಸಾದ್.

"ಹೋಗಿ, ನೀವು ಯಾವ ಗಂಡಿನ ಕಡೆಯವರು!" ನಾಚಿದಳು ಮಧುಮತಿ.

"ಗಂಡಿನ ಕಡೆಯವರು ಅಂದೆ, ಹೀಗಿರುತ್ತಾರೆ ?" ಚೇಷ್ಟೆಯ ಧ್ವನಿಯಲ್ಲಿ ಕೇಳಿದ. ಅಷ್ಟರಲ್ಲಿ ನರಸಮ್ಮನವರು ಅಲ್ಲಿಗೆ ಬಂದದ್ದರಿಂದ ಆ ಸಂಭಾಷಣೆ ನಿಂತುಹೋಯಿತು. "ಅಜ್ಜಿ, ಇವರು ಸಿನಿಮಾಗೆ ಹೋಗ್ತಾರಂತೆ. ನೀನೂ ಹೋಗ್ತೀಯಾ ? ಎಂದ ಪ್ರಸಾದ್. "ನಾ ಹೋಗ್ತೇನೆ ಅಂತ ನಿಮ್ಮ ಹತ್ರ ಹೇಳಿದೆನಾ ? ಹೋಗಿ ಬರೀ ಸುಳ್ಳು" ಕೋಪ ನಟಿಸುತ್ತಾ ಹೇಳಿದಳು ಮಧುಮತಿ.

"ನೀವು ಯಾವಾಗ್ಲೂ ಸಿನಿಮಾ ನೋಡೋದಿಲ್ವಾ ?" ಮಾತು ಬದಲಿಸಿದ.

"ಸಿನಿಮಾ ನೋಡ್ತೀನಿ. ಪೇಪರ್ ಓದ್ತೀನಿ. ಅಡಿಗೆ, ಹೊಲಿಗೆ, ಹಾಡು, ಎಲ್ಲಾ ಬರುತ್ತೆ. ಸರಿಯಾ ? ನೋಡಿ ಅಜ್ಜಿ, ಇವರು ಈವತ್ತು ನನ್ನನ್ನ ಒಂದೇ ಸಮ ಗೋಳಾಡಿಸ್ತಿದಾರೆ" ಎಂದಳು ಮಧುಮತಿ ನರಸಮ್ಮನಿಗೆ ಫಿರ್ಯಾದು ಮಾಡುತ್ತಾ.

"ಹುಡುಗುತನ ಹೋಗ್ಲಿಲ್ಲವಲ್ಲೋ ಪ್ರಸಾದೂ, ನಾನೂ ಬುದ್ಧಿ ಹೇಳ್ತೀನಿ ಬಿಡಮ್ಮಾ" ಎಂದರು, ಮಧುಮತಿಯ ಕಡೆ ತಿರುಗಿ. ಮಧುವತಿಯ ಹೊರಟುಹೋದ ಮೇಲೆ, ದೊಡ್ಡವರ ಮನೆ ಹುಡುಗಿ ಸಲುಗೆ ತಗೋತಿದ್ದೀಯಾ. ಹುಷಾರಾಗಿರು! ಬೆಂಕಿಯೊಂದಿಗೆ ಸರಸ" ಎಂದು ಪ್ರಸಾದ್ ಮೇಲೆ ಕೋಪಿಸಿಕೊಂಡರು ನರಸಮ್ಮ.

೦ ೦ ೦ ೦

ಆ ವರ್ಷದಲ್ಲಿ ನಾಲ್ಕು ಸಂಬಂಧಗಳು ಬಂದಿದ್ದವು ಮಧುಮತಿಗೆ. ಯಾವ ವರನನ್ನೂ ಅವಳು ಒಪ್ಪದೇ ಇದ್ದದ್ದರಿಂದ ಇವೆಲ್ಲಾ ತಪ್ಪಿಹೋದವು.

ಪ್ರಸಾದ್‌ಗೂ ಕನ್ನೆಗಳು ಬಂದವು. ನರಸಮ್ಮನವರ ಬಲವಂತದಿಂದ ಆ ಹುಡುಗಿಯರನ್ನು ನೋಡಿಯೂ ಬಂದ ಪ್ರಸಾದ್. ಯಾರೋ ಒಬ್ಬ ಹುಡುಗಿಗೆ ತಾಳಿ ಕಟ್ಟಿಸಿದರೆ ತನ್ನ ಜವಾಬ್ದಾರಿ ತೀರುತ್ತದೆ ಎಂದು ಬಲವಂತಪಡಿಸಿದರು ನರಸಮ್ಮ.

"ಮನಸ್ಸಿಗೆ ಒಪ್ಪಿಗೆ ಯಾಗದಿದ್ದರಿಂದ ಹುಡುಗಿಯನ್ನ ಹೇಗೆ ಮದುವೆ ಆಗೂಂತೀಯ ?" ಎಂದು ರಗಳೆ ಮಾಡುತ್ತಿದ್ದ ಪ್ರಸಾದ್.

"ಅಜ್ಜೀ !" ಸಣ್ಣಧ್ವನಿ.

"ಅಜ್ಜೀ ಮನೇಲಿಲ್ಲ, ಗುಡೀಗೆ ಹೋಗಿದ್ದಾರೆ. ಬನ್ನಿ" ಎನ್ನುತ್ತಾ ಆಹ್ವಾನಿಸಿದ. ಸಂಕೋಚಪಡುತ್ತಾ "ಹೋಗ್ತೀನಿ" ಎಂದಳು ಮಧುಮತಿ.

"ಏನಾದ್ರೂ ಕೆಲಸ ಇತ್ತಾ ?"

"ಊಹುಂ ! ಅಮ್ಮ ಅಜ್ಜೀನ ಒಂದ್ಸಲ ಕರ್‍ಕೊಂಡ್ಬಾ ಅಂದ್ರು" ಒಡನೆಯೇ ಸುಳ್ಳು ಹೇಳಿದಳು.

"ಹೋಗಿ ಬಹಳ ಹೊತ್ತಾಯ್ತು, ಬಂದ್ಬಿಡ್ತಾರೆ. ಕೂತ್ಕೊಳ್ಳಿ" ಕುರ್ಚಿ ತೋರಿಸಿದ ಮೌನವಾಗಿ. ಎರಡು ಕ್ಷಣ ಕಳೆದ ನಂತರ "ನಿಮಗೆ ಯಾವುದೋ ಸಂಬಂಧ ಖಾಯಂ ಆಯ್ತು ಅಂತ ಕೇಳ್ದೆ." ಎಂದಳು ಮಧುಮತಿ.

"ಊಂ" ಅಂದ ಪ್ರಸಾದ್‌ರಾವ್ ಷೇವ್ ಮಾಡಿಕೊಳ್ಳುತ್ತಾ.

"ಆ ಹುಡುಗಿ ಹೇಗಿದ್ದಾಳೆ ?" ಆ ಧ್ವನಿಯಲ್ಲಿ ಕುತೂಹಲ.

"ನನಗೆ ಹಿಡಿಸಿದೆ" ಎಂದ ನಗುವನ್ನು ತಡೆದುಕೊಳ್ಳುತ್ತಾ.

"ಅಂದ್ರೆ ನಮುಗ್ಯಾರಿಗೂ ಹಿಡಿಸೋದಿಲ್ಲ ಅಂತ್ಲಾ ?" ತುಂಟನಗೆ ಸೂಸುತ್ತಾ ಕೇಳಿದಳು.

"ಅಲ್ಲಾ, ನಿಮಗೆ ಹಿಡಿಸಬೇಕೂಂತ ಎಲ್ಲಿದೆ ?"

"ಅಬ್ಬಾ......ಹೇಳಿ, ಆ ಹುಡುಗಿ ಹೇಗಿದ್ದಾಳೆ. ಏನು ಓದಿದ್ದಾಳೆ ?"

"ಇಷ್ಟಕ್ಕೆ ಆ ಹುಡುಗಿಗೆ ನಾನು, ನನ್ನ ರೂಪ ಹಿಡಿಸಿದೆಯೋ ಇಲ್ಲವೋ ನನ್ನನ್ನ ಒಪ್ಪಿದ್ದಾಳೋ ಇಲ್ಲೋ ತಿಳ್ಕೊಂಡ ಮೇಲೆ ನನ್ನ ಅಭಿಪ್ರಾಯ ಹೇಳ್ಬೇಕು. ಏನಂತೀರಿ ? ಸರಿಯಾ ?'' ಎಂದ ತುಂಟತನದಿಂದ ಅವಳ ಕಡೆ ನೋಡುತ್ತಾ.

ಅವನನ್ನೇ ನೋಡುತ್ತಿದ್ದ ತನ್ನ ನೋಟವನ್ನು ಬೇರೆಡೆಗೆ ತಿರುಗಿಸಿ, "ಹೋಗ್ಲಿ, ಹೇಳಬಾರದು ಅಂತಿದ್ರೆ ಹೇಳ್ಬೇಡಿ. ನಿಮ್ಮನ್ನ ಒಪ್ಪೋದಿಲ್ಲಾ ಅಂದ್ರೆ ಏನರ್ಥ ? ಹುಡುಗಾಟಿಕೆ ಮಾತು ......." ಎಂದಳು.

"ಹುಡುಗಾಟದ ಮಾತಾ ?' ಆಶ್ಚರ್ಯ ನಟಿಸಿದ.

"ಅಲ್ಲದೆ ! ನೀವು ಹಿಡಿಸಲಿಲ್ಲಾಂದ್ರೆ, ನಿಮಗಿಂತ ಚೆನ್ನಾಗಿರೋವ್ರು, ಒಳ್ಳೆಯವರು ಆ ಹುಡುಗಿಗೆ ಸಿಗೋದಿಲ್ಲ'' ಥಟಕ್ಕನೆ ಮನಸ್ಸಿಗೆ ತೋಚಿದ್ದನ್ನು ಆಡಿಬಿಟ್ಟಳು.

''ಹಾಗಾದ್ರೆ ಸಂಬಂಧ ಖಾಯಂ ಅಂದ್ಕೊಳ್ಳಿ. ಹಾಗೇ ಆಗಲಿ ಅಂತ ಆಶಿಸ್ತೀನಿ'' ಎಂದ ಪ್ರಸಾದ್.

''ಛೆ, ಹೋಗಿ ಅರ್ಥ ಆಗೋ ಹಾಗೆ ಮಾತಾಡೋದಿಲ್ಲ ನೀವು. ನಾ ಹೊರಡ್ತಿದ್ದೀನಿ. ಎದ್ದುನಿಂತಳು ಮಧುಮತಿ.

'ಊಹುಂ, ಬೇಡಿ, ಕೂತ್ಕೊಳ್ಳಿ. ಆ ಹುಡುಗಿ ಹೇಗಿರ್ತಾಳೆ ಅಂದ್ರೆ ನನಗೆ ಒಪ್ಪಿಗೆಯಾಗಿರೋ ಹುಡುಗಿ ! ಯಾರಿಗೂ ಹೇಳೋದಿಲ್ಲ ತಾನೆ ?'' ತುಂಟತನದಿಂದ ಅವಳ ಕಡೆ ನೋಡಿ ನಕ್ಕ.

''ಹೇಳೋದಿಲ್ಲ.''

''ನನ್ನ ಆಣೆ ?''

''ನಿಮ್ಮ ತಲೆಮೇಲೆ ಕೈ ಇಡಬೇಕಾ ?''

''ಬೇಡ. ಅಷ್ಟು ಕೆಲ್ಸ ಮಾಡ್ಬೇಡಿ. ಅಜ್ಞೇನ ನಿಮಗೇ ಒಪ್ಪಿಸಬೇಕು. ಯಾರಿಗೂ ಹೇಳಕೂಡದು. ಕೋಪ ಬಂದರೂ ನನ್ನ ಮಾತನ್ನ ಮನಸ್ಸಿನಲ್ಲೇ ಇಟ್ಕೋಬೇಕು.''

"ಅಬ್ಬಾ, ಏನ್ರೀ ಇದು! ಇಷ್ಟು ಸಸ್ಪೆನ್ಸಾ" ಬೇಸರಪಟ್ಟಳು ಮಧುಮತಿ.

"ಶ್ಯಾಮಲ ವರ್ಣ, ಅಗಲವಾದ ಕಣ್ಣುಗಳೂ, ಸಂಪಿಗೆಯಂತಹ ಮೂಗು ವಿಶಾಲವಾದ ಹಣೆ– ಆ ಹುಡುಗಿ ನನಗೆ ತ್ರಿಲೋಕ ಸುಂದರಿಯಂತೆ ಕಾಣುತ್ತಾಳೆ. ಅವಳನ್ನು ನೋಡದೆ ಇದ್ದ ದಿವಸ ದುರ್ದಿನ ಅನ್ನಿಸುತ್ತೆ. ಅವಳು ನನಗೆ ಎಟುಕದ ದ್ರಾಕ್ಷಿ ಹಣ್ಣೇನೋ ಅನಿಸುತ್ತೆ" ಎಂದು ಹೇಳಿ ಹಿಂದಿರುಗಿ ನೋಡಿದ ಪ್ರಸಾದ್. ಹೊಸಿಲು ದಾಟಿ ರಭಸದಿಂದ ಹೊರಟುಹೋಗುತ್ತಿದ್ದ ಮಧುಮತಿಯನ್ನು ನೋಡಿ, ಭಯದಿಂದ "ಏನ್ರೀ !" ಎಂದು ಕೂಗಿದ.

ಅವಳು ಕೇಳಿಸಿಕೊಳ್ಳಲಿಲ್ಲ.

ಅವನ ಹೃದಯ ಡವಡವ ಹೊಡೆದುಕೊಂಡಿತು. ಮೈಯೆಲ್ಲಾ ಬೆವರಿತ ತುಟಿಗಳು ಒಣಗಿದವು. ಹೆದರುತ್ತಾ ಬಾಗಿಲಿಗೆ ಬಂದ. ಆ ಹುಡುಗ ಅವರ ತಂದೆಗೆ ಹೇಳುತ್ತಾಳೇನೊ ಅವನ ಕಾಲುಗಳು ನಡುಗಿದವು.

ವೆಂಕಟರಾಮಯ್ಯನವರ ದಪ್ಪ ಮೀಸೆ, ಗಂಭೀರವಾದ ಮುಖ ಜ್ಞಾಪಕ ಬಂದ ಭಯದಿಂದ ಬೆವತುಹೋದ.

"ಏನೋ ಮಗು, ಹಾಗಿದ್ದೀ ? ಎಂದ ನರಸಮ್ಮನವರ ಪ್ರಶ್ನೆಗೆ "ಹೇಗಿದ್ದೀನಿ?" ಎಂದ, ಗದರಿಸಿದ.

ಆಫೀಸಿಗೆ ಹೋಗುವಾಗ, ಯಾಂತ್ರಿಕವಾಗಿ ತಹಶೀಲ್ದಾರರ ಮನ ಗೇಟು ತೆರೆದು ಒಳಗೆ ಹೋಗಿ, ಹೆದರುತ್ತಾ ತಹಶೀಲ್ದಾರರಿಗೆ ನಮಸ್ಕರಿಸಿದ. ಅವರು ಎಂದಿನಂತೆ ಠೀವಿಯ ಮಂದಹಾಸ ಬೀರಿದರು. ನಿರಾಳವಾಗಿ ಉಸಿರು ಬಿಟ್ಟು ಮಧುಮತಿಗೆ ಮನಸ್ಸಿನಲ್ಲಿಯೇ ಕೃತಜ್ಞತೆ ಅರ್ಪಿಸಿದ ಪ್ರಸಾದ್.

o o o o

ಮಧುಮತಿ ನಾಲ್ಕು ದಿನ ಕಣ್ಣಿಗೆ ಕಾಣಿಸದೆ ಇದ್ದದ್ದರಿಂದ ಆ ಹುಡುಗಿ ತನ್ನ ಬಗ್ಗೆ ಬೇಸರಪಟ್ಟಿದ್ದಾಳೆಂದುಕೊಂಡ.

"ಅದೇನೋ ಹುಳಿಯಂತೆ. ಮಧು ನಿನಗೋಸ್ಕರ ತಂದುಕೊಟ್ಟಿದ್ದಾಳೆ" ಎನ್ನುತ್ತಾ ಅನ್ನದ ಮೇಲೆ ಹುಳಿಯನ್ನು ಹಾಕಿದ ಅಜ್ಜಿಯ ಕಡೆ ಸಂಭ್ರಮದಿಂದ ನೋಡುತ್ತಾ ಅವರು ಈ ನಡುವೆ ಕಾಣಿಸೋದೇ ಇಲ್ವಲ್ಲಾ ?" ಎಂದ ಪ್ರಸಾದ್.

"ಚೆನ್ನಾಯ್ತು, ಈಗ ತಾನೆ ನಮ್ಮ ಮನೆಯಿಂದ ಹೋದ್ಲು. ಅದೇನು ಋಣವೋ ! ನಾನೂಂದ್ರೆ ಆ ಹುಡುಗಿಗೆ ಬಹಳ ಅಭಿಮಾನ." ನಕ್ಕರು ನರಸಮ್ಮ.

ಅವಳು ತನ್ನ ಮನೆಗೆ ಬಂದಾಗ, ತಾನು ಅವರ ಮನೆಗೆ ಹೋದಾಗ ಅವಳನ್ನು ನೋಡಿದೊಡನೆ ತಲೆ ಬಗ್ಗಿಸಿಬಿಡುತ್ತಿದ್ದ.

ಒಬ್ಬರನ್ನೊಬ್ಬರು ನೋಡಬೇಕೆಂದೂ ಮನಸ್ಸು ಬಿಚ್ಚಿ ನಗುತ್ತಾ ಮಾತನಾಡಬೇಕೆಂದೂ ಇಬ್ಬರ ಹೃದಯಗಳೂ ಪರಿತಪಿಸುತ್ತಿತ್ತು. ಒಬ್ಬರಿಗೆ ಸಂಕೋಚ, ಇನ್ನೊಬ್ಬರಿಗೆ ನಾಚಿಕೆ.

ತಹಶೀಲ್ದಾರರ ಮಗಳು ಮಾತ್ರ ಎಂದುಕೊಳ್ಳಲಾರದ ಅವನೂ, ಅಜ್ಜಿಯ ಮೊಮ್ಮಗ ಮಾತ್ರ ಎಂದುಕೊಳ್ಳಲಾರದ ಅವಳೂ-ಅವರ ಮಧ್ಯೆ ಎಂತಹ ಮಧುರ ಭಾವನೆಗಳು. ಪ್ರತಿದಿನ ಸಂಜೆ ಪ್ರಸಾದ್‌ಗಾಗಿ ತಹಶೀಲ್ದಾರರ ಮನೆಯಿಂದ ತಿಂಡಿ ಬರುತ್ತಿತ್ತು. ದಿನವೂ ಇದೇನು ಮರ್ಯಾದೆ ? ಬೇಡಾಂತ ಹೇಳು ಎನ್ನುತ್ತಾ ನರಸಮ್ಮನವರ ಮೇಲೆ ಕೋಪಿಸಿಕೊಳ್ಳುತ್ತಿದ್ದ ಪ್ರಸಾದ್ ರಾವ್.

"ಹೇಗೋ ಮಗು ? ಎಷ್ಟು ಸಲ ಹೇಳಿದರೂ ಆ ಹುಡುಗಿ ಕೇಳಿದರೆ ತಾನೇನೋ !"

"ಆ ಹುಡುಗಿ ಅಂದ್ರೇ....!" ಅವನ ಕಣ್ಣುಗಳು ಕಾಂತಿಯುಕ್ತವಾದವು

ಒಂದು ದಿನ ಮಾತಿನ ಮಧ್ಯೆ, ಟೆಸ್ಟ್‌ಗಳನ್ನೆಲ್ಲಾ ಪಾಸ್ ಮಾಡಿದ್ದರಿಂದ ಪ್ರಸಾದ್‌ರಾವ್‌ಗೆ (ಅಪ್ಪರ್ ಡಿವಿಜನ್) ಕ್ಲರ್ಕ್ ಆಗಿ ಪ್ರಮೋಷನ್ ಸಿಕ್ಕಿದೆಯೆಂದು ವೆಂಕಟರಾಮಯ್ಯನವರು ತಿಳಿಸಿದರು.

"ಆ ಹುಡುಗ ತುಂಬಾ ಚೆನ್ನಾಗಿದ್ದಾನೆ !" ಅವನ ರೂಪವನ್ನು ಮೆಚ್ಚಿದರು ಜಾನಕಮ್ಮ.

"ಬಹಳ ಯೋಗ್ಯ. ಅಷ್ಟೇ ಅಲ್ಲ. ಬುದ್ಧಿವಂತ !" ಹೊಗಳಿದರು ವೆಂಕಟರಾಮಯ್ಯ.

ಅವರ ಸಂಭಾಷಣೆ ಕೇಳಿದ ಮಧುಮತಿ ತೃಪ್ತಿಯಿಂದ ಉಸಿರಾಡಿದರು.

ದಿನಗಳೂ, ತಿಂಗಳುಗಳೂ ಉರುಳಿಹೋಗುತ್ತಿದ್ದವು. ಯಾವುದೇ ಒಂದು ವೇಳೆಯಲ್ಲಿ, ಯಾರ ಮನೆಯ ಬಳಿಯಾದರೂ ಪ್ರಸಾದ್, ಮಧುಮತಿ ಇಬ್ಬರ ನೋಟವೂ ಕಲೆಯುತ್ತಿತ್ತು. ಆದರೆ ಮಾತು ಹೊರಡು

ತ್ತಿರಲಿಲ್ಲ. ಮೊದಲು ಯಾರು ಏನೆಂದು ಮಾತು ಪ್ರಾರಂಭಿಸಬೇಕು? ಅವರು ಮಾತನಾಡಿದರೆ, ತಾನು ಮಾತನಾಡುವುದು :—ಇಬ್ಬರಿಗೂ ಒಂದೇ ಸಂಕೋಚ, ಇಬ್ಬರದೂ ಒಂದೇ ನಿರ್ಣಯ.

೦ ೦ ೦ ೦

"ಮಧು ! ಅಜ್ಜಿಯವರಿಗೆ ಹೇಗಿದೆ ಮಾ ?"

ಬೆಚ್ಚಿ, "ಏನಪ್ಪಾ ! ಅವರಿಗೆ ಮೈಸರಿ ಇಲ್ವೆ ? ನನಗ್ಗೊತ್ತಿಲ್ಲವಲ್ಲಾ. ನಾವು ಎರಡು ದಿನಗಳಿಂದ ಅವರ ಮನೆ ಕಡೆ ಹೋಗಿಲ್ಲ" ಎಂದಳು ಮಧುಮತಿ, ಕಾತರವಿತ್ತು ಆ ಧ್ವನಿಯಲ್ಲಿ.

"ಹೌದಂತಮ್ಮಾ" ಪ್ರಸಾದ್‌ರಾವ್ ನೆನ್ನೆ, ಇವತ್ತು ಆಫೀಸಿಗೆ ರಜಾ ಹಾಕಿದ್ದಾನೆ. ಹೋಗಿ ಒಂದ್ಸಲ ನೋಡ್ಕೊಂಡು ಬಾ" ಎಂದರು ವೆಂಕಟರಾಮಯ್ಯ.

೦ ೦ ೦ ೦

ನರಸಮ್ಮನವರ ಕೆನ್ನೆಗಳನ್ನು ಮುಟ್ಟಿ ನೋಡುತ್ತಾ, "ಅಬ್ಬಾ, ಎಷ್ಟು ಜ್ವರ ಇದೆ ! ಡಾಕ್ಟರಿಗೆ ತೋರಿಸಿದಿರಾ ?" ಎಂದು ಪ್ರಸಾದ್ ಕಡೆ ನೋಡಿದಳು ಮಧುಮತಿ.

"ತೋರಿಸಿದೆ. ಇಂಜೆಕ್ಷನ್ ಕೊಟ್ಟು ಹೋಗಿದ್ದಾರೆ. ನೀವು...... ನೀವು ..." ಎನ್ನುತ್ತಾ ಗೊಣಗಿದ ಪ್ರಸಾದ್.

"ಆಂ ನೀವು ?" ನಗಬೇಕೆಂದುಕೊಂಡು ನಗಲಿಲ್ಲ ಮಧುಮತಿ.

"ನೀವು ನನ್ನನ್ನು ಕ್ಷಮಿಸಬೇಕು...."

"ಯಾತಕ್ಕೊ ?"

"ಅವತ್ತು ನಾನು ಏನೇನೋ ಮಾತಾಡ್ಬೆ...." ತಡವರಿಸಿದ ಪ್ರಸಾದ್.

"ಛೇ ಛೇ ....ಊಹುಂ, ಇಷ್ಟು ದಿನ ಆದ ಮೇಲೆ ಕ್ಷಮಿಸೋದಾ ! ಪನಿಷ್‌ಮೆಂಟ್ ಕೊಡಬೇಕಾದದ್ದೇ !" ನಗುತ್ತ ಹೇಳಿದಳು.

"ನಿಜವಾಗ಼್ೂ ನೀವು ಬಹಳ ಒಳ್ಳೇವ್ರು."

"ಓಹೋ ! ಹಾಗಾ ? ನೀವು ಈವತ್ತು ಊಟ ಮಾಡಿದ್ರಾ ?"

"ಮಾಡಿದ್ದನಲ್ಲಾ....."

"ಎಲ್ಲೋ.

"ಹೋಟೆಲ್‌ನಲ್ಲಿ."

"ಸುಳ್ಳು !"

"ನನಗೆ ಹಸಿವಿಲ್ಲ.........ಆದರಿಂದ" ಅವಳನ್ನೇ ದಿಟ್ಟಿಸುತ್ತಾ ಉತ್ತರ ಕೊಟ್ಟ.

"ನಿಮಗೆ ಅಡಿಗೆ ಬರೋದಿಲ್ವಾ ?" ಅವನಿಗೆ ಬೇಸರವಾಯಿತು. "ನಮ್ಮಜ್ಜಿ ಕಲಿಸಲಿಲ್ಲ" ಎಂದ.

"ಕಲಿಸಬೇಕಾಗಿತ್ತು....."

ಅವನು ನಿಟ್ಟುಸಿರು ಬಿಟ್ಟ.

"ಅಡಿಗೆನಾದ್ರೂ ಕಲಿಸಬೇಕಾಗಿತ್ತು......ಮದುವೆ ಅಂತೂ ಮಾಡಲಿಲ್ಲ ವಲ್ಲಾ ! ಹಿರಿಯರಲ್ವಾ ? ಮುಂದಾಲೋಚನೆ ಬೇಡ್ವಾ ?"

ಸ್ವಗತವಾಗಿ ಅಂದುಕೊಂಡಂತೆ ಅಂದು, 'ಅಜ್ಜಿ' ಎಂದು ಕೂಗಲಿದ್ದ ಮಧುಮತಿಯನ್ನು ತಡೆದ ಪ್ರಸಾದರಾವ್ ಅವಳ ಮಾತಿಗೆ ಮಂದಹಾಸ ಬೀರುತ್ತಾ "ಸರಿ, ನಾ ಹೊರಡ್ತೀನಿ, ನಮ್ಮಿಂದ ಏನಾಗಬೇಕಾಗಿದ್ರೂ ಸಂಕೋಚ ವಿಲ್ದೆ ಹೇಳಿ, ನಾನು ಬಂದು ಅಜ್ಜೀನ ನೋಡ್ಕೊಂಡು ಹೋಗ್ತಿರ್ತೀನಿ. ನಿಮ ಗೇನು ಸಹಾಯ ಬೇಕಾದ್ರೂ ಮಾಡ್ತೀನಿ. ಅಮ್ಮ , ಅಪ್ಪ ಏನೂ ಅನ್ನೋದಿಲ್ಲ. ನಿಮಗೆ ಕ್ಯಾರಿಯರ್‌ನಲ್ಲಿ ಊಟ ಕಳಿಸ್ತೀನಿ....."

ಅವನು ಬೇಡವೆಂದು ಹೇಳುತ್ತಿದ್ದರೂ ಕೇಳಿಸಿಕೊಳ್ಳದೆ ಹೊರಟು ಹೋದಳು ಮಧುಮತಿ.

ಮಾರನೆಯ ದಿನ ತಹಶಿಲ್ದಾರರೇ ಸ್ವತಃ ಬಂದು ನರಸಮ್ಮನ ದೇಹ ಸ್ಥಿತಿಯ ಬಗ್ಗೆ ವಿಚಾರಿಸಿ, ಪ್ರಸಾದ್ ಅನ್ನು ಊಟಕ್ಕೆ ಆಹ್ವಾನಿಸಿದರು.

"ಸಾರ್....." ಎಂದು ಏನೋ ಹೇಳಲು ಹೊರಟ ಪ್ರಸಾದ್‌ಗೆ, "ನನ್ನ ಮಾತು ಮೀರೋದಕ್ಕೆ ಅವಕಾಶವಿಲ್ಲ ಅಷ್ಟೇ" ಎನ್ನುತ್ತಾ, ಮಂದಹಾಸ ಬೀರಿ ರೀತಿಯಿಂದ ಹೊರಟುಹೋದರು.

ನರಸಮ್ಮನವರಿಗೆ ಶುಶ್ರೂಷೆ ಮಾಡುತ್ತಿದ್ದ ಮಧುಮತಿಯನ್ನು ಬೇಡ ವೆಂದು ತಡೆಯುತ್ತಾ ನೊಂದುಕೊಳ್ಳುತ್ತಿದ್ದ ಪ್ರಸಾದ್.

ಒಂದು ದಿನ ಖಂಡಿತವಾಗಿ ಹೇಳಿದ "ನೀವು ಅವರಿಗೆ ಈ ರೀತಿ ಶುಶ್ರೂಷೆ ಮಾಡೋದನ್ನ ನೋಡೋದಕ್ಕೆ ನನ್ನ ಕೈಲಾಗೋದಿಲ್ಲ. ನಿಮ್ಮ ಅಂತಸ್ತೇನು ? ನೀವು ಈ ರೀತಿ ಅವರಿಗೆ ಸೇವೆ ಮಾಡೋದು ಅಂದ್ರೆ ಏನು ? ಯಾವ ಜನ್ಮದ ಋಣವೋ ಎಷ್ಟು ಹೇಳಿದರೂ ಕೇಳೋದಿಲ್ಲ."

"ಓ . ನಿಮಗೆ ನಮ್ಮೊಂದಿಗೆ ಅಂತಹ ಸಂಬಂಧ ಏನೂ ಇಲ್ವಾ?"

"ನನಗೂ ಇರಬಹುದು, ಇಲ್ಲಿದ್ರೆ ನಮ್ಮಜ್ಜಿ ಇಷ್ಟು ಖಾಯಿಲೆಯಾಗಿದ್ದೂ ನಾನು ಅಳಿಯನ ಹಾಗೆ ನಿಮ್ಮಸೇಲಿ ಮೇಯ್ತಾ ಇದ್ದೀನಿ, ಪ್ಲೀಸ್, ಈವತ್ತು ನಿಮ್ಮ ತಂದೆಯವರಿಗೆ ಹೇಳಿ ನಾನು ಹೋಟೆಲ್‌ನಲ್ಲಿ ಊಟ ಮಾಡ್ತೀನಿ ಅಂತ" ಎಂದ ಪ್ರಸಾದ್.

"ನೀವೇ ಹೇಳಿ" ಅವಳ ಕಣ್ಣುಗಳು ನಗೆ ಸೂಸುತ್ತಿದ್ದವು.

"ಅವರ ಎದುರಿಗೆ ಮಾತನಾಡಲಾರೆ."

"ಆದ್ರೆ ಜಾಣರ ಹಾಗೆ ಊಟ ಮಾಡಿ ಸುಮ್ನಿರಿ."

"ನಿಮಗ್ಯಾಕೆ ಅಂತೀನಿ ಸುಮ್ಮನೆ ಅಪನಿಂದೆ ! " ಕೆಲ ಕ್ಷಣಗಳನಂತರ ಅವಳ ಕಡೆ ನೋಡಿದ ವೇದನೆಯಿಂದ-

"ಯಾರು ಏನಂದ್ಕೋತಿದ್ದಾರೆ ?" ಆ ಧ್ವನಿಯಲ್ಲಿ ನಿರ್ಲಕ್ಷ್ಯ.

"ನಿಮ್ಮ ತಂದೆಯವರಿಗೆ ತಿಳಿದೇ ಇರುತ್ತೆ. ಆಫೀಸ್‌ನಲ್ಲೂ, ಅಕ್ಕಪಕ್ಕ ದವರೂ ಅನ್ನೋ ಮಾತುಗಳು......" ಗೊಣಗಿದ, ಪ್ರಸಾದ್‌ರಾವ್.

"ಸರಿ, ಇನ್ನೇನು ? ತಂದೆಯವರಿಗೆ ಗೊತ್ತು. ನಿಮಗೆ ಗೊತ್ತು. ಇನ್ಯಾತಕೆ ಭಯ ?"

"ಆದಲ್ಲ......"

"ಏನಲ್ಲ ? ಏನಂದ್ಕೋತಾರೆ ಎಲ್ರೂ ? ಕೇಳ್ಬೇಕು ಅನ್ನಿಸುತ್ತೆ, ಹೇಳೊಲ್ಲಾ ?" ಎರಡು ಕ್ಷಣಗಳ ನಂತರ, "ಯಾಕೆ ಮಾತಾಡೋದಿಲ್ಲ ? ನಾಚಿಕೇನಾ ?" ಎಂದು ಹಾಸ್ಯ ಮಾಡಿದಳು ನಗುತ್ತಾ.

"ನನಗ್ಯಾಕೆ ನಾಚಿಕೆ ! ಗಂಡಸು...... ನನಗೋಸ್ಕರ, ಅಜ್ಜೀನ ನೋಡೋ ನೆಪದಲ್ಲಿ ನಮ್ಮನೆಗೆ ನೀವು ಬರ್ತಿದೀರಂತೆ, ವಯಸ್ಸಿಗೆ ಬಂದ ಇಬ್ಬರು ಗಂಟೆಗಳ ಕಾಲ ಒಂದೇ ಮನೇಲಿ ಕಾಲ ಕಳೀತಿದೀವಂತೆ. ಒಂದು ಕಾಸು ವರದಕ್ಷಿಣೆ

ಇಲ್ದೆ ನಿಮ್ಮ ತಂದೆ ಅಳಿಯನನ್ನು ಸಂಪಾದಿಸಿದ್ದಾರಂತೆ. ಅದಕ್ಕೆ ನಿಮ್ಮನೇಲಿ ನನಗೆ ಊಟಹಾಕ್ತಿದ್ದೀರಂತೆ..... ಕೇಳಿದ್ರಾ ? ಚೆನ್ನಾಗಿವೆಯಾ ಆ ಮಾತುಗಳು ?"

ಅವಳ ಮುಖ ಪಕ್ಕಕ್ಕೆ ತಿರುಗಿಸಿಕೊಂಡು ನಗುತ್ತಿದ್ದಳು. ಇದನ್ನು ಗಮನಿಸದಿದ್ದ ಅವನು.... "ನನ್ನ ಮನಸ್ಸು ಮೊದಲೇ ಸರಿಯಾಗಿಲ್ಲ. ಹೇಗೋ ಮಾಡ್ಕೋತೀವಿ. ದಯವಿಟ್ಟು ನೀವು ನಮ್ಮನೆಗೆ ಬರಬೇಡಿ, ನಾನೂ ನಿಮ್ಮನೆಗೆ ಬರೋದಿಲ್ಲ. ಹೀಗೆ ಬದುಕೋದಕ್ಕೆ ನನ್ನನ್ನ ಬಿಡಿ. ಏನೂ ಅಂದ್ಕೊಳ್ಳಬೇಡಿ. ನಿಮ್ಮ ಸಂಸಾರದೊಂದಿಗೆ ಸ್ನೇಹ ಅಂದ್ರೆ ಹೆಮ್ಮೆ ಅಂದ್ಕೊಂಡಿದ್ದೆ. ಆದರೆ ಬೆಂಕಿಯೊಂದಿಗೆ ಸರಸ ಅದು ಅನ್ನೋದನ್ನ ತಿಳ್ಕೊಂಡೆ.....ನನ್ನ ಸ್ನೇಹಿತರು ನನ್ನನ್ನು ಎಚ್ಚರಿಸಿದ್ದಾರೆ. ನನಗೇನೋ ಭಯವಾಗಿದೆ.....ನನಗೆ ಟ್ರಾನ್ಸ್‌ಫರ್ ಮಾಡಿಸಿಬಿಡಿ. ನಮಜ್ಜಿ ಇನ್ನು ಬಹಳ ದಿನ ಉಳಿಯೋದಿಲ್ಲ" ಎಂದ.

"ಮಿಸ್ಟರ್ ಪ್ರಸಾದರಾವ್ !" ಕಂಚಿನಂತಿತ್ತು ಮಧುಮತಿಯ ಧ್ವನಿ. ಸರಸರನೆ ಮಾತಾಡುತ್ತಿದ್ದ ಅವನು ಥಟಕ್ಕನೆ ನಿಲ್ಲಿಸಿ ಅವಳ ಕಡೆ ನೋಡಿದ. "ಎಚ್ಚರಿಸ್ತಿದ್ದಾರಂತೆ ಸ್ನೇಹಿತರು. ಈಗ ಅವರು ಎಚ್ಚರಿಸೋದು, ನೀವು ಕೇಳೋದು ? ಬುದ್ಧಿ ಇಲ್ದಿದ್ರೆ ಸರಿ !" ಅಸಹನೆಯಿಂದ ಹೇಳಿ ಅವನ ಕಡೆ ರೋಷದಿಂದ ನೋಡಿದಳು.

"ಏನ್ರೀ ?" ಬಿಳುಚಿಹೋದ ಅವನು.

"ಏನ್ರೀ ! ಈ ಸಂಬೋಧನೆ ನನಗೆ ಬೇಕಿಲ್ಲದು. ನಿಮ್ಮ ಸ್ವಾರ್ಥಕೋಸ್ಕರ ಈ ಊರು ಬಿಟ್ಟು ಹೋಗ್ಬೇಕು ಅದ್ನೋತಿದ್ದೀರ, ಆದರೆ ಸ್ವಲ್ಪ ಸಹಾನುಭೂತಿಯಿಂದ ನನ್ನ ವಿಷಯ ಏನಾದ್ರೂ ಆಲೋಚನೆ ಮಾಡಿದ್ರಾ ?" ಅವಳ ತುಟಿಗಳು ಅದುರಿದವು.

"ನಿಮಗೇನು ? ನಿಮ್ಮ ತಂದೆ ಹಣವಂತರು. ಹೆಸರು ಪಡೆದ ಆಫೀಸರ್."

"ಆದ್ರೆ ನಿಂದೆ ಹೊರಟುಹೋಗುತ್ತಾ ? ನಮ್ಮ ಕುಟುಂಬದ ಮೇಲೆ, ನನ್ನ ಮೇಲೆ ಅಭಿಮಾನ ಇದ್ರೆ ನನ್ನ ತಂದೆಯವರ ಮೇಲೆ ನಿಮಗೇನಾದರೂ ಕೃತಜ್ಞತಾ ಭಾವನೆ ಇದ್ರೆ ಎಲ್ರೂ ಅನ್ಕೋತಾ ಇರೋ ಮಾತನ್ನು ನಿಜಮಾಡಿ."

ಅವನು ಮೌನವಾಗಿದ್ದುಬಿಟ್ಟು ಎಲ್ಲೋ ನೋಡುತ್ತಾ,

"ಈವತ್ತು ನೀವು ಹೇಳಿದ್ದರಿಂದ ಗೊತ್ತಾಗಲಿಲ್ಲ-ನಿಮ್ಮನ್ನು ನಾನು ಪ್ರೀತಿಸ್ತಿದ್ದೀನೆ ಅಂತ. ನಾನು ಯಾವುದನ್ನು ಲಕ್ಷ್ಯಮಾಡದೆ ಓಡಾಡ್ತಿದ್ದೀನಿ.

ನೀವು ಬಹಳ ಒಳ್ಳೆಯವರು ಅದ್ಕೊಂಡು ನಿಮ್ಮ ಮೇಲೆ ಮಮತೇನ ಬೆಳೆಸಿದೆ. ನೀವೂ ನನ್ನನ್ನು ಪ್ರೀತಿಸ್ತೀರ ಅಂತ ಭ್ರಮೆಹೊಂದಿದೆ. ಏನ್ರೀ ? ನನ್ನ ಬಾಳು ನಗೆಪಾಟಲಾಗುವಂತೆ ಮಾಡ್ಬೇಡಿ, ನನ್ನ....ನನ್ನ ಮೋಸಮಾಡಿ ಹೊರಟ್ಹೋಗ್ಬೇಡಿ" ಎನ್ನುತ್ತಾ ಎರಡು ಕೈಗಳಿಂದಲೂ ತನ್ನ ಮುಖ ಮುಚ್ಚಿಕೊಂಡಳು.

"ಮಧು !" ಅನುರಾಗಪೂರಿತ ಧ್ವನಿಯಲ್ಲಿ ಅವಳನ್ನು ಸಂತೈಸುತ್ತಾ ಅವಳ ಭುಜದ ಮೇಲೆ ಕೈಹಾಕಿದ ಪ್ರಸಾದ್‌ರಾವ್.

ನೀರು ತುಂಬಿದ ಕಣ್ಣುಗಳಿಂದ ಅವನ ಕಣ್ಣುಗಳನ್ನು ದಿಟ್ಟಿಸಿದಳು. ಮಧುಮತಿ.

"ತಂದೆಯವರು ಒಪ್ಕೋತಾರೆ ತಾನೇ !" ಅವಳ ಕಣ್ಣೀರನ್ನೊರಸುತ್ತಾ ಕೇಳಿದ ಪ್ರಸಾದ್‌ರಾವ್.

"ತಂದೆಯವರಿಗೆ ಮೊದಲಿನಿಂದಲೂ ನಿಮ್ಮನ್ನು ಕಂಡ್ರೆ ಇಷ್ಟ." ನಾಚಿಕೆಯಿಂದ ತಲೆ ಬಗ್ಗಿಸಿದಳು ಮಧುಮತಿ.

ನರಸಮ್ಮನವರು ನರಳುತ್ತಾ ಪಕ್ಕಕ್ಕೆ ತಿರುಗಿದ್ದರಿಂದ ಇಬ್ಬರೂ ಅವರ ಬಳಿಗೆ ಬಂದರು.

"ಅಜ್ಜೀ, ಏನ್ಬೇಕು ?" ಅವರ ಪಕ್ಕದಲ್ಲಿ ಕೂಡುತ್ತಾ ಗದ್ಗದ ಧ್ವನಿಯಲ್ಲಿ ಕೇಳಿದ ಪ್ರಸಾದ್.

"ಛಿ, ಛಿ. ಕಣ್ಣೀರು ಹಾಕ್ತಿದ್ದೀಯಾ, ನಾನು ಸತ್ತುಹೋಗ್ತೀನಿ ಅಂತ ? ಈವತ್ತು ತುಂಬಾ ಆಯಾಸ......ನನ್ನ ಕಥೆ ಮುಗಿಯುತ್ತೋ ಏನೋ ? ನಿನ್ನನ್ನ ಒಂದು ಸಂಸಾರಿಯನ್ನಾಗಿ ಮಾಡ್ಬೇಕು ಅಂದ್ಕೊಂಡೆ, ನೀನು ಅವಕಾಶ ಕೊಡಲಿಲ್ಲ" ಎಂದು "ಅಮ್ಮ, ಮಧು, ತಂದೆಯವರನ್ನು ಸ್ವಲ್ಪ ಕರೀಮ್ಮ. ಅಯ್ಯೋ, ನೀನೂ ಅಳ್ತಿದ್ದೀಯಾ ?" ಎನ್ನುತ್ತಾ ಗಟ್ಟಿಯಾಗಿ ಕಣ್ಣು ಮುಚ್ಚಿಕೊಂಡು ನೋವಿನಿಂದ ನರಳುತ್ತಿದ್ದ ನರಸಮ್ಮನವರ ಭುಜಗಳನ್ನು ಹಿಡಿದು ಅಲ್ಲಾಡಿಸುತ್ತಾ, "ಅಜ್ಜೀ ! ಯಾಕೆ ಹೀಗಾಡ್ತಿದ್ದೀ ?" ಎಂದು ರೋದಿಸತೊಡಗಿದ ಪ್ರಸಾದ್.

ಎರಡು ಕ್ಷಣಗಳ ನಂತರ ಕಣ್ಣುಗಳನ್ನು ತೆರೆದ ನರಸಮ್ಮನವರು "ಹೆಂಡತಿಯೊಂದಿಗೆ ನೀನು ಸಂಸಾರ ಮಾಡೋದನ್ನು ನೋಡಿ ಹೋಗ್ಬೇಕು ಅಂದ್ಕೊಂಡೆ, ಆದರೆ ಮೃತ್ಯು ಬಂದ್ಬಿಡ್ತಾ ಇದೆ" ಆಯಾಸದಿಂದ ಅತಿ ಕಷ್ಟಪಟ್ಟು ಮಾತ

ನಾಡುತ್ತಿದ್ದ ನರಸಮ್ಮನ ಕಣ್ಣುಗಳಿಂದ ನೀರು ಧಾರಾಕಾರವಾಗಿ ಹರಿಯುತ್ತಿತ್ತು.

"ಬೇಡ ಹಾಗೆ ಸಂಕಟಪಡಬೇಡ ಅಜ್ಜಿ......ಇದೋ, ನೋಡು, ನಾನು ಮಧೂನ ಮದುವೆ ಮಾಡ್ಕೋತೀನಿ. ಇವಳು ನನ್ನ ಹೆಂಡ್ತಿ. ಆಶೀರ್ವದಿಸು ಆಜ್ಜಿ......" ದುಃಖಾವೇಶದಿಂದ ಹೇಳಿದ ಪ್ರಸಾದ್, ಮಧುಮತಿಯ ಕೈಗಳನ್ನು ತನ್ನ ಕೈಗಳಲ್ಲಿ ಗಟ್ಟಿಯಾಗಿ ಹಿಡಿದುಕೊಳ್ಳುತ್ತಾ.

"ಹಾಗೆ ಯಾವಾಗ ತೀರ್ಮಾನ ಮಾಡಿದಿರಿ ? ತಹಶೀಲ್‌ದಾರ್ ಅಳಿಯನೇ ನೀನು ? ಸಂತೋಷ !" ಅವರ ಗುಳಿ ಬಿದ್ದ ಕಣ್ಣುಗಳನ್ನು ಪ್ರಕಾಶಿಸಿದವು ತೃಪ್ತಿಯಿಂದ.

ಆಯಾಸ ಹೆಚ್ಚಿ ಕಣ್ಣು ಮುಚ್ಚಿದರು ನರಸಮ್ಮ.

ಹೆದರುತ್ತಾ ವೆಂಕಟರಾಮಯ್ಯನವರನ್ನು ಕರೆತಂದಳು ಮಧುಮತಿ.

ಡಾಕ್ಟರನ್ನು ಕರೆದುಕೊಂಡು ಬಂದ ಪ್ರಸಾದ್. ಆಯಾಸದಿಂದ ನರಸಮ್ಮನವರು ಒಂದು ಸಲ ತನ್ನ ಸುತ್ತು ಇದ್ದವರನ್ನು ದೃಷ್ಟಿಸಿ, ಪ್ರಸಾದರಾವ್ ಕೈಯನ್ನು ವೆಂಕಟರಾಮಯ್ಯನವರ ಕೈಯಲ್ಲಿಟ್ಟರು. ಏನೋ ಹೇಳಬೇಕೆನ್ನುವಂತೆ ಅವರ ತುಟಿಗಳು ಅಲ್ಲಾಡಿದವು. ಆದರೆ ಅವರ ವಾಕ್‌ಶಕ್ತಿ ಆ ವೇಳೆಗೆ ಉಡುಗಿಹೋಯಿತು.

ನಿಶ್ಚೇತನರಾಗಿದ್ದ ನರಸಮ್ಮನವರನ್ನು ನೋಡುತ್ತಾ ಧಾರಾಕಾರವಾಗಿ ಕಣ್ಣೀರು ಸುರಿಸಿದ ಪ್ರಸಾದ್. ಅವರ ಭುಜದ ಮೇಲೆ ಕೈಹಾಕಿ ಹತ್ತಿರಕ್ಕೆಳೆದುಕೊಂಡು ಅವನ ಕಣ್ಣೀರೊರೆಸುತ್ತಾ, "ಹೀಗೆ ಹೆದರಿದ್ರೆ ಹೇಗೆ ? ಛಿ ಛಿ! ಯಾರಾದ್ರೂ ನಗ್ತಾರಷ್ಟೆ ! ನಿನಗೋಸ್ಕರ ತೊಂಭತ್ತು ವರ್ಷ ಬದುಕಿದ್ದಾರೆ ಆಕೆ ಸುಮ್ಮಿರು. ಆಗಬೇಕಾದ ಕೆಲಸ ನೋಡು" ಎಂದು ಮೃದುವಾಗಿ ಗದರಿಸಿ ಧೈರ್ಯ ಹೇಳಿದರು ವೆಂಕಟರಾಮಯ್ಯನವರು.

ಕರ್ಮಕಾಂಡ ಮುಗಿದೊಡನೆ ಪ್ರಸಾದರಾವ್ ತನ್ನ ಮನೆಗೆ ಕರೆದುಕೊಂಡು ಬಂದ ವೆಂಕಟರಾಮಯ್ಯ ಅವನನ್ನು ತಮ್ಮ ಅಳಿಯ ಎಂದು ತಿಳಿದವರೆಲ್ಲರಿಗೂ ಹೇಳಿದರು.

ಅವನ ವಿನಯವನ್ನು ಕಂಡು ಅತ್ತೆಯವರಾಗಲಿರುವವರು ಮೆಚ್ಚಿಕೊಂಡರೆ, ಅವರ ಆದರ ಅಭಿಮಾನಗಳನ್ನು ಕಂಡ ಅಳಿಯ ಉಬ್ಬಿಹೋಗುತ್ತಿದ್ದ.

ಸಂಬಳ ತೆಗೆದುಕೊಂಡ ದಿನ, ಊಟ ಹಾಕಿದ್ದೆಂದು ಹಣ ಕೊಟ್ಟರೆ ಏನೆಂದುಕೊಳ್ಳುವರೋ, ಕೊಡದಿದ್ದರೆ ಏನೆಂದುಕೊಳ್ಳುವರೋ, ಏನು ಮಾಡಲೂ ತೋಚಲಿಲ್ಲ, ಪ್ರಸಾದ್‌ರಾವ್‌ಗೆ.

ಮನೆಗೆ ಬಂದೊಡನೆ "ಮಗು, ಪ್ರಸಾದ್ ?" ಎಂದು ಕೂಗಿದರು ವೆಂಕಟರಾಮಯ್ಯ.

"ಸಾರ್, ಕರೆದ್ರಾ ?" ಕೈಗಳನ್ನು ಕಟ್ಟಿಕೊಂಡು ಅವರೆದುರಿಗೆ ನಿಂತ ಪ್ರಸಾದ್.

"ಚೆನ್ನಾಗಿದೆ ಮೊನ್ನೆ ರೇಡಿಯೋಲಿ ಬಂದಿತ್ತಲ್ಲಾ......ಸಾರ್, ಗೀರ್ ಅನ್ಬೇಡ, ಮನೇಲಿ ಗುಮಾಸ್ತೆ ಹಾಗೆ ನಡಕೊಳ್ಳೊ ಅಳಿಯನ ಹಾಗಿರು.-ಅಂತ. ನೋಡು ! ಆ ಮನೆಯವರಿಗೆ ಏನು ಬಾಡಿಗೆ ಕೊಡಬೇಕೋ ಅದನ್ನ ಕೊಟು ನಿನ್ನ ಸಾಮಾನುಗಳನ್ನು ನಮ್ಮ ಮನೆಗೆ ತಂದುಬಿಡು. ಪ್ರತಿ ದಿನ ಅಲ್ಲಿ ಹೋಗಿ ಮಲಗ್ತಾ ಇದ್ದಿ-ನಿನ್ನ ಭಾನಸ್ತವೋ, ನೀನೋ. ದಿನವೂ ಹೇಳ್ಬೇಕು ಅಂತ್ಲೇ ಅಂದ್ಕೋತಾ ಇದ್ದೀನಿ. ಆದರೆ ಏನೋ ಸಾಮಾನುಗಳಿವೆಯು ಲ್ಲಾಂತ ಸುಮ್ನೆ ಇದ್ದೆ. ಈವತ್ತು ದಿನ ಚೆನ್ನಾಗಿದೆ. ನಮ್ಮ ಮನೇಲಿ ಇದ್ಬಿಡು ಈವತ್ತಿನಿಂದ" ಎಂದರು ನಗುತ್ತಾ.

"ಅಯ್ಯಯ್ಯೋ, ಅದೆಲ್ಲಾ ಯಾಕೆ ? ಒಂದು ತಿಂಗಳಿಂದ ನಿಮ್ಮನೇಲಿ ಊಟಮಾಡ್ದೆ. ಈವತಿನಿಂದ ಹೋಟೆಲ್‌ನಲ್ಲಿ ಊಟ ಮಾಡ್ಕೊಂಡು ಆ ಮನೇಲೇ ಇರ್ತೀನಿ. ಆಮೇಲೆ ಹೇಗಾದ್ರೆ ಹಾಗೆ. ನೀವು ಯಾವುದು ಒಳ್ಳೇದು ಅಂದ್ರೆ ಹಾಗೇ ಮಾಡ್ತೀನಿ" ಎಂದ ಪ್ರಸಾದ್ ದಾಕ್ಷಿಣ್ಯದಿಂದ.

"ಅಬ್ಬ" ಹೋಟಲಿನಲ್ಲಿ ಊಟ, ಇನ್ನೊಂದು ಮನೇಲಿ ಸಂಸಾರ ಇವೆಲ್ಲಾ ಚೆನ್ನಾಗಿರೋದಿಲ್ಲ ! ನೀನು ಏನೆಂದುಕೊಂಡಿದ್ದಿಯೋ ಏನೋ. ರಾಜು, ಗೋಪಿ ಚಿಕ್ಕ ಮಕ್ಕಳು. ನೀನು ನನಗೆ ದೊಡ್ಡ ಮಗ ಅಂದ್ಕೊಂಡಿ ದೀನಿ" ಎಂದರು ವೆಂಕಟರಾಮಯ್ಯ ಮಂದಹಾಸ ಬೀರುತ್ತಾ.

"ಎಸ್ ಸಾರ್ !" ಎಂದು ಹಿಂದಿರುಗಿ ಒಳಗೆ ಹೋದ ಪ್ರಸಾದ್‌ರಾವ್.

"ಏನ್ರೀ, ಸಾಮಾನ್ನೆಲ್ಲಾ ತಂದುಬಿಡು ಎಂದು ಅಂದ್ರು ತಹಶೀಲ ದಾರ್ರು. ಎಲ್ಲಿಡಬೇಕು ? ಎಂದ ಪ್ರಸಾದ್‌ರಾವ್ ಅಡಿಗೆಯ ಹೊಸಿಲ ಬಳಿ ನಿಂತು ಸಂಕೋಚಪಡುತ್ತಾ.

"ಅತ್ತೆ, ಮಾವ ಅಂತ ಕರಿ, ಏನ್ರೀ ಗೀನ್ರೀ ಅನ್ನದೆ. ದೇವರು ಕಣ್ಣು

ಬಿಟ್ಟು ನೋಡಿದ್ರೆ ಒಂದು ತಿಂಗಳೊಳಗಾಗಿ ಮೂರು ಮುಡಿ ಬೀಳುತ್ತೆ. ಮಧು ! ಸಾಮಾನೆಲ್ಲಾ ತರ್ತಾನಂತೆ, ಸರಿಯಾಗಿ ಒಳಗಡೆ ಇಡಿಸಮ್ಮ !" ಎಂದರು ಜಾನಕಮ್ಮ.

"ಬಾಡಿಗೆ ಕೊಟ್ಬಿಟ್ಟು ಮನೆಯಾಕೆಗೆ ಹೇಳ್ಬಿಟ್ಟು ಬನ್ನಿ, ನಾನು ಆ ಸಾಮಾನೆಲ್ಲಾ ತರ್ತೀನಿ, ಅಪ್ಪ ಆಳನ್ನ ಕಳಿಸ್ತಾರೆ" ಎಂದಳು ಮಧುಮತಿ.

○ ○ ○ ○

ಸಂಜೆ ಆಫೀಸಿನಿಂದ ಬಂದ ಪ್ರಸಾದ್‌ಗೆ ಕಾಫಿ ತಂದುಕೊಟ್ಟಳು ಮಧುಮತಿ, ಮಂದಹಾಸ ಬೀರುತ್ತಾ. "ಸಾಮಾನೆಲ್ಲಾ ಭದ್ರವಾಗಿ ತಂದ್ಬಿಟ್ಟೆಯಾ?" ಎಂದ ಕಾಫಿ ಸಿಪ್ ಮಾಡುತ್ತಾ.

"ಎಲ್ಲಾ ಸರಿಯಾಗೇ ಇದೆ. ಆದರೆ ರಾಧಾಕೃಷ್ಣರ ವಿಗ್ರಹ....." ಎನ್ನುತ್ತಾ ಅವನ ಕಡೆ ಹೆದರುತ್ತಾ ನೋಡಿದಳು.

"ಯಾಕೆ ? ರಾಧಾಕೃಷ್ಣರ ವಿಗ್ರಹ ಒಡೆದುಹೋಯ್ತಾ ?"

"ಊಹುಂ, ಇಲ್ಲ ಬಿರುಕು ಬಿಟ್ಟಿದೆ." ಎಂದಳು ನೊಂದುಕೊಳ್ಳುತ್ತಾ.

"ಯಾಕೆ ? ಕೈ ಜಾರಿತಾ ?"

"ಹೌದು, ಹುಷಾರಾಗೇ ತಂದೆ. ಆದರೂ ಕೈ ಜಾರಿತು. ನೋಡಿ, ಈ ಕೊನೇಲಿ, ತಲೆಗಳು ಸೇರಿಕೊಂಡು ಚೆನ್ನಾಗೇ ಇದೆ...." ಎನ್ನುತ್ತಾ ಭಯದಿಂದ ಅವನಡೆ, ನೋಡಿದಳು, ಮಧುಮತಿ.

ಇಬ್ಬರ ಮಧ್ಯೆ ಸಣ್ಣ ಬಿರುಕು. "ಹೋಗ್ಲಿ ಬಿಡು. ಏನ್ಮಾಡೋದು ? ಏನೂ ಬೇಸರಪಡಬೇಡ" ಎಂದ ಪ್ರಸಾದ್‌ರಾವ್ ಆ ಬೊಂಬೆಯನ್ನೇ ನೋಡುತ್ತಾ.

ಮೌನವಾಗಿ ನಿಂತಿದ್ದ ಅವಳ ಕೈಗೆ ಆ ಬೊಂಬೆಯನ್ನು ಕೊಡುತ್ತಾ,

"ನೋಡು, ನನಗೆ ಬೇರೆ ಕೊಠಡಿ ಕೊಡ್ತೀರಾ ? ಇಲ್ಲ ನಿನ್ನ ಕೊಠಡೀಲೇ ಇರು ಅಂತಾರಾ ನಿಮ್ಮ ತಂದೆ !" ಎಂದ, ಬಂದ ನಗುವನ್ನು ತಡೆದುಕೊಳ್ಳುತ್ತಾ.

''ಅಬ್ಬಾ, ಹೋಗಿ.'' ಅವಳ ಕೆನ್ನೆಗಳು ಕೆಂಪಾದವು.

"ಹೋಗ್ತೀನಿ ಅಂದ್ರೆ, ಬಿಡೋದಿಲ್ವಲ್ಲಾ ? ನಮ್ಮ ಕೊಠಡೀಲಿ

ಟೇಬಲ್ ಮೇಲಿಡು. ಈ ವಿಗ್ರಹಾನ" ಎಂದ ಪ್ರಸಾದ್‌ರಾವ್ ತುಂಟನಗು ನಗುತ್ತಾ.

ಹೊರಟುಹೋಗುತ್ತಿದ್ದ ಅವಳ ಕಡೆ ನೋಡುತ್ತಾ "ಏಯ್ ಮಧು, ನನ್ನ ಬಟ್ಟೆಗಳೆಲ್ಲಿ ?" ಎಂದು ಕೇಳಿದ, ಪ್ರಸಾದ್ ಛೇಡಿಸುತ್ತಾ.

"ಹಾಸ್ಯ ಮಾಡದೇ ಇದ್ರೇನಿ ನಿಮ್ಹತ್ರ ಮಾತಾಡೋದು ನಾನು ?" ಹಿಂದಿರುಗಿ ಅವನ ಕಡೆ ನೋಡುತ್ತಾ ಬರುತ್ತಿದ್ದ ನಗುವನ್ನು ಕಷ್ಟದಿಂದ ತಡೆದುಕೊಂಡಳು.

"ನಕ್ಕರೆ ಏನ್ಮಾಡ್ತೀನೋ ಗೊತ್ತಾ ?" ಎಂದ ಪ್ರಸಾದ್.

"ಏನ್ಮಾಡ್ತೀರಿ ! ಬನ್ನಿ ನಿಮ್ಮ ಕೊಠಡಿ ಮಹಡಿ ಮೇಲೆ" ಎನ್ನುತ್ತಾ ಮುಂದೆ ನಡೆದಳು ಮಧುಮತಿ.

ಅವನು ಅವಳನ್ನನುಸರಿಸಿದ.

ಕೊಠಡಿಯೆಲ್ಲವನ್ನು ಪರಿಶೀಲಿಸಿದ ಪ್ರಸಾದ್, "ನೋಡು, ಮಧೂ, ಈ ಪೆಟ್ಟಿಗೆಯನ್ನು ಬೆಲೆ ಬಾಳುವ ನಿಮ್ಮ ಸಾಮಾನುಗಳಿರೋ ಕಡೆ ಇಡಿಸು" ಎಂದ.

"ಅಷ್ಟು ಬೆಲೆ ಬಾಳುವಂತಹ ಸಾಮಾನು ಅದರಲ್ಲೇನಿದೆ ?" ಕುತೂಹಲದಿಂದ ಪ್ರಶ್ನಿಸಿದಳು ಮಧುಮತಿ.

ಪೆಟ್ಟಿಗೆಯನ್ನು ತೆರೆದು, "ನಮ್ಮ ತಾಯಿ ಹತ್ರ ಇದ್ದ ಚಿನ್ನ, ಮುವತ್ತು ತೊಲಾ ಇದೆಯಂತೆ, ಇವು ಬೆಳ್ಳಿ ತಟ್ಟೆ, ಬಟ್ಟಲು, ಇತ್ಯಾದಿ ಇವೆಲ್ಲಾ ಹಳೇ ಕಾಲದ ರೇಷ್ಮೆ ಸೀರೆಗಳು, ನನ್ನ ಹೆಂಡತಿ ಉಡಬೇಕೂಂತ ನಮ್ಮಜ್ಜಿ ಆಸೆ" ಎಂದ. ಕಣ್ಣುಗಳನ್ನರಳಿಸಿ ಆಶ್ಚರ್ಯದಿಂದ ನೋಡುತ್ತಾ, ಎದೆಯ ಮೇಲೆ ಕೈಯಿಟ್ಟುಕೊಂಡು, "ಅಮ್ಮ ! ಇಷ್ಟು ಚಿನ್ನ ಇದೆಯಾ ನಿಮ್ಮನೇಲಿ !" ಎಂದಳು ಮಧುಮತಿ.

"ಊಂ............ಎಲ್ಲಾ ನಿಂದೇ ಮತ್ತೆ" ಎನ್ನುತ್ತಾ ಬೀಗದ ಕೈ ಅವಳ ಕೈಯ್ಯಲ್ಲಿಟ್ಟ.

"ಬೀಗದ ಕೈ ನಿಮ್ಮ ಹತ್ರಾನೇ ಇಟ್ಕೊಂಡ್ರೆ ವಾಸಿ."

"ಎಲ್ಲಾದ್ರೂ ಕಳೆದುಬಿಡ್ತೀನಿ, ಆದರಿಂದ..........ಊಂ ನಿನ್ಹತ್ರ ಸ್ವಲ್ಪ ಮಾತಾಡಬೇಕು. ಕೂತ್ಕೋ" ಎಂದ ಪ್ರಸಾದ್ ಬಟ್ಟೆಗಳನ್ನು ಬದಲಾಯಿಸುತ್ತಾ.

ಕೆಲಕ್ಷಣಗಳ ಮೌನದ ನಂತರ, "ಏನ್ರೀ ಮಾತೇ ಆಡೋದಿಲ್ಲ ? ಯಾಕೆ ಕೊಡ್ತೋ ಅಂತ ಹೇಳಿದ್ರಿ ಮತ್ತೆ ?" ಎಂದು ಕೇಳಿದಳು, ಬೇಸರ ನಟಿಸುತ್ತಾ.

"ಚೆನ್ನಾಗಿದೆ. ಹೆಂಡತಿಯಾಗುವವಳ ಹತ್ರ ಕೆಲವು ಮುಖ್ಯ ವಿಷಯಗಳನ್ನ ಹೇಳಬೇಕಾದಾಗ ಸ್ವಲ್ಪ ಯೋಚಿಸಬೇಡ್ವಾ ? ಎರಡು ನಿಮಿಷ ತಡಿ" ಎಂದು ಹೇಳಿ ನಗುತ್ತಾ, ಅವಳ ಬಳಿಯಲ್ಲಿದ್ದ ಕುರ್ಚಿಯಲ್ಲಿ ತಾನೂ ಕೂಡುತ್ತಾ, "ನೋಡು, ಇಷ್ಟು ದಿನವೂ ಸಂಬಳ ಬಂದೊಡನೆ ಅಜ್ಜಿ ಕೈಲಿ ಕೊಟ್ಬಿಡ್ತಿದ್ದೆ ಖರ್ಚು, ವೆಚ್ಚ ಅವರೇ ನೋಡ್ಕೋತಾ ಇದ್ರು. ಈಗ ನನ್ನ ಖರ್ಚೆಲ್ಲಾ ನಿಮ್ಮನೆಯವರೇ ವಹಿಸಿದ್ದಾರೆ. ನಂಗೇನೂ ಗೊತ್ತಿಲ್ಲ. ಮಹಾ ದಾಕ್ಷಿಣ್ಯವಾಗಿದೆ, ಮಧೂ ! ಹಣಾನ ಊಟದ ಖರ್ಚಿಗೆ ಅಂತ ಕೊಟ್ರೆ ಏನಂದ್ಕೋತಾರೋ ನಿಮ್ಮ ಮನೆಯವರು ಕೊಡದೇ ಸುಮ್ನೆ ಹೇಗೆ ಊಟ ಮಾಡೋದು ? ನನಗೇನೋ ಚೆನ್ನಾಗಿ ಕಾಣೋದಿಲ್ಲ. ಅದರಿಂದ ಈ ಹಣವನ್ನು ನಿನಗೆ ಯಾವ ರೀತಿ ತೋಚಿದರೆ ಹಾಗೆ ಉಪಯೋಗಿಸು" ಎಂದು ಹೇಳುತ್ತಾ ಬಲವಂತವಾಗಿ ಅವಳ ಕೈಯ್ಯಲಿಟ್ಟ ಕೆಲವು ಹತ್ತು ರೂಪಾಯಿ ನೋಟುಗಳನ್ನು.

"ನನಗ್ಗೊತ್ತಿಲ್ಲ. ಇದಕ್ಕಾ ನೀವು ಇರೂಂತ ಹೇಳಿದ್ದು ?" ಆ ನೋಟುಗಳನ್ನು ಅವನ ಪಕ್ಕದಲ್ಲಿಟ್ಟು ಹೊರಡುತ್ತಿದ್ದ ಅವಳ ಕೈ ಹಿಡಿದುಕೊಳ್ಳುತ್ತಾ "ಮಧೂ, ಪ್ಲೀಸ್ ತಗೋಬೇಕು" ಎಂದ.

"ಅಬ್ಬಾ, ಬೇಡ್ರಿ" ಬಿಡಿಸಿಕೊಳ್ಳಲು ಪ್ರಯತ್ನಿಸಿದಳು. ಅವಳಿಗೆ ಇನ್ನೂ ಹತ್ತಿರ ಬಂದು ಅವನ ಕೈಯಲ್ಲಿ ತನ್ನ ಕೈ. ಆ ಸ್ಪರ್ಶದಲ್ಲಿ ಏನೋ ಹಿತವಾದ ಅನುಭವ ಕಣ್ಣು ರೆಪ್ಪೆಗಳು ಭಾರವಾದವು ಮಧುಮತಿಗೆ.

"ಗೊತ್ತಿಲ್ಲ ಅಂದ್ರೆ ಆಗೋದಿಲ್ಲ" ಅವಳ ಗಲ್ಲವನ್ನು ಹಿಡಿದುಕೊಂಡು ಅವಳ ಕಣ್ಣುಗಳನ್ನೇ ದಿಟ್ಟಿಸುತ್ತಾ "ಗೊತ್ತಿಲ್ಲಾಂತ ತಪ್ಪಿಸ್ಕೋಬೇಡ. ಈ ಹಣ ನಿನ್ನಲ್ಲೇ ಇರ್ಲಿ. ಖರ್ಚು ಮಾಡಬೇಕಾಗಿ ಬಂದಾಗ ಸಂಕೋಚವಿಲ್ದೆ ಖರ್ಚುಮಾಡು." ಅವಳ ಕೈಯಲ್ಲಿ ನೋಟುಗಳನ್ನಿಟ್ಟು ಆ ಕೈಯ್ಯನ್ನು ಮುಚ್ಚಿ ಗಟ್ಟಿಯಾಗಿ ಅದುಮಿ ಬಿಟ್ಟುಬಿಟ್ಟ.

"ನಿಮ್ಮ ಖರ್ಚಿಗೆ ಹಣ ಇಟ್ಕೊಳ್ಳೋದಿಲ್ವಾ ?" ಸಂಕೋಚದಿಂದ ಮೆಲ್ಲಗೆ ಕೇಳಿದಳು ಮಧು.

"ನನಗೇನಿದೆ ಖರ್ಚು ! ಮಧ್ಯಾಹ್ನ ಲಂಚ್ ಟೈಮಿನಲ್ಲಿ ಒಂದು ಕಪ್ಪು ಕಾಫಿ, ಅದಕ್ಕೆ ತಿಂಗಳಿಗೊಂದು ಸಲ ಕೊಟ್ಬಿಡ್ತೀನಿ."

"ಸಿಗರೇಟ್, ಬೀಡಾ, ಸಿನಿಮಾ......ಇಂತಹ ಅಭ್ಯಾಸಗಳೇನು ಇಲ್ವಾ? " ವಿಪರೀತ ಸಂತೋಷದಿಂದ ಕಕ್ಕಾಬಿಕ್ಕಿಯಾಗಿ ರೆಪ್ಪೆ ಹಾಕದ ನಂಬಲಾರ ದವಳಂತೆ ಅವನನ್ನೇ ನೋಡುತ್ತಾ ಕೇಳಿದಳು ಮಧುಮತಿ.

"ಛೆ ! ನನಗ್ಯಾಕೆ ಅಂತಹ ಅಭ್ಯಾಸಗಳು ? ಬಡವ" ಎನ್ನುತ್ತಾ ನಕ್ಕು ಬಿಟ್ಟ, "ಸುಮ್ನೆ ಬಡವಾ, ಬಡವಾ ಅಂದ್ರೆ ಸಹಿಸಲಾರೆ. ಅಭ್ಯಾಸಗಳಿಗೆ ಬಡತನ, ಸಿರಿತನ ಅಂತ ಎಲ್ಲಿದೆ ?"

"ಹೋಗ್ಲಿ ಹಾಗೆ ಬೇಕಾದಾಗ ನಿನ್ನನ್ನ ಕೇಳಿ ತಗೋತೀನಿ. ಹೊರಡ್ಲಾ, ಸ್ವಲ್ಪ ಮುಖ ತೊಳೆದು ಹಾಗೇ ಸುತ್ತಾಡ್ಕೊಂಡು ಬರ್ತೀನಿ" ಎಂದು ಹೇಳುತ್ತಾ ಕೆಳಗಿಳಿದ.

ಸೋಪು ಟವೆಲ್, ಬಾತ್‌ರೂಮಿಗೆ ತಂದಳು ಮಧುಮತಿ.

ಮಗಳು ನಾಚುತ್ತಾ ಹೇಳಿದ ಪ್ರತಿಯೊಂದು ಮಾತನ್ನೂ ಆಸಕ್ತಿ ಯಿಂದ ಕೇಳಿದ ಜಾನಕಮ್ಮ, "ಏನ್ರೀ ನೋಡಿದ್ರಾ, ಅಳಿಯನ ಗುಣ......" ಎನ್ನುತ್ತಾ ಎಲ್ಲವನ್ನೂ ವೆಂಕಟರಾಮಯ್ಯನವರಿಗೆ ವರದಿ ಮಾಡಿದರು.

ಅವರು ಮೀಸೆ ಕುಣಿಯುವಂತೆ ನಗುತ್ತಾ, "ನಾ ಹೇಳ್ಲಿಲ್ವಾ ? ಬುದ್ಧಿ ಯಲ್ಲಿ ಬೃಹಸ್ಪತಿ ಅಂಥವನು ಅಂತ" ಎಂದರು.

"ಸರಿ, ಅವನಿಗೇನ್ ಗೊತ್ತು ಪಾಪ ! ಅವನ ಪರವಾಗೂ ಮದುವೆ ಏರ್ಪಾಡೆಲ್ಲಾ ನಾವೇ ಮಾಡ್ಬೇಕು. ಯಾರಾದ್ರೂ ದೂರದ ಸಂಬಂಧಿಗಳಿ ದ್ದಾರಾಂತ ಕೇಳಿ ನೋಡಿದೆ. ಯಾರೂ ಇದ್ದಂತಿಲ್ಲ, ಅವನಿಗೇನೂ ಗೊತ್ತಿಲ್ಲ ವಂತೆ."

"ಹಾಗಾ, ಮಧೂನ ಕರ್ಕೊಂಡು ಹೋಗಿ ಅವನಿಗೆ ಅವಳಿಗೆ ಇಬ್ಬರಿಗೂ ಇಷ್ಟವಾಗೋ ಅಂತಹ ಒಡವೆಗಳನ್ನು ಮಾಡೋದಕ್ಕೆ ಆ ಚಿನ್ನ ಕೊಟ್ಟು ಬರಬೇಕು. ಈಗ್ಲೆ ಕೊಟ್ರೆ ಆ ವೇಳೆಗೆ ರೆಡಿಯಾಗಿರುತ್ತೆ."

"ಇನ್ನೂ ತಿಂಗಳ ಮೇಲಿದೆ ಮುಹೂರ್ತ, ಎಲ್ಲಾ ಏರ್ಪಾಡನ್ನೂ ಘನ ವಾಗಿ ಮಾಡಿ. ಒಬ್ಬಳೇ ಒಬ್ಬ ಮಗಳು. ಅವನಿಗೆ ಮಾತ್ರ ಯಾರಿದ್ದಾರೆ? ಚಿನ್ನದ ಸರಪಳಿ ಗಡಿಯಾರ ತನ್ನಿ. ಮೊನ್ನೆ ಶಬ್ಬಕ್ಕೆ ಮ್ಯಾಜಿಸ್ಟ್ರೇಟರ ಅಳಿ ಯನಿಗೆ ತೆಗೆದುಕೊಟ್ಟಿದ್ದಾರೆ. ಚೆನ್ನಾಗಿದೆ. ಬೆಳ್ಳಗಿದ್ದಾನೆ.....ದಾಳಿಂಬೆ

ಬೀಜದಂತಹ ಕೆಂಪು ಹರಳಿನ ಉಂಗುರ ಒಂದು, ಸಾಧಾರಣ ಚಿನ್ನದ ಉಂಗುರ ಒಂದು ಕೊಟ್ರೆ ಸರಿ." ಹೀಗೆ ಅವರಿಬ್ಬರೂ ಒಡವೆ, ಜವಳಿ, ಲಗ್ನ ಪತ್ರಿಕೆ......ಇನ್ನೂ ಏನೇನೋ ವಿಷಯಗಳನ್ನು ಬಹಳ ಹೊತ್ತು ಮಾತಾಡಿದರು.

* * * *

''ಏನ್ರೀ ?' ಮೇಲಿನ ಹಲ್ಲುಗಳಿಂದ ಕೆಳಗಿನ ತುಟಿಯನ್ನು ಕಚ್ಚುತ್ತಾ ಸಂಕೋಚದಿಂದ ಪ್ರಸಾದನ ಕಡೆ ನೋಡುತ್ತಾ ನಿಂತಳು ಮಧುಮತಿ.

"ಊಂ ಏನ್ರೀ ?" ಅವಳ ಕಣ್ಣುಗಳನ್ನೇ ದಿಟ್ಟಿಸುತ್ತಾ ಪರಿಹಾಸ್ಯ ಮಾಡಿದ.

"ನೀವು......ನೀವು ..." ಎಂದು ಪುನಃ ಮೌನ ತಾಳಿದಳು ಮಧುಮತಿ.

"ಆಂ ನೀವು...." ಫಕ್ಕನೆ ನಕ್ಕ ಪ್ರಸಾದ್.

"ಅಲ್ಲಾರೀ, ಸಿನಿಮಾಗೆ ಹೋಗೋಣವಾ ?" ಎಂದ.

"ಓ, ಹೋಗು. ರಾಜು, ಗೋಪಿ, ನಿಮ್ಮ ಜವಾನಾನೋ....ಯಾರಾದ್ರೂ ಬರ‍್ತಾರೆ, ಟಿಕೆಟ್ ತೆಗೆದು ಕೊಡ್ತಾರೆ."

"ರಾಜು, ಗೋಪಿ ಬರೋದಿಲ್ಲ. ಅವರಿಗೆ ಪರೀಕ್ಷೆಗಳು, ದರಿದ್ರ ಜವಾನನ ಜೋತೇಲಿ ಹೋಗ್ತೀನಾ ! ನೀವೂ ನಾನು ಹೋಗೋಣ" ಎಂದಳು, ಥಟಕ್ಕನೆ ನಾಚಿಕೆಯೆಲ್ಲಾ ಓಡಿಹೋದಂತೆ.

"ನಿನಗಿರೋ ಅಷ್ಟು ಪವರ್ಸ್ ನನಗಿದೆಯೋ ಮಧು ? ಎಲ್ರೂ ಏನಂದ್ಕೋತಾರೆ ? ಮದುವೆ ಆಗೋದಕ್ಕೆ ಮುಂಚೇನೇ ಸಿನಿಮಾಗೆ ಹೋಗ್ತಾರೆ ಅಂತ ಅವಹೇಳನ ಮಾಡೋದಿಲ್ವಾ ? ನಿಮ್ಮ ತಂದೆ ಏನಂದ್ಕೋತಾರೆ, ಹೇಳು ?" ಎಂದು ಅನುನಯಿಸುವಂತೆ.

ಮೌನವಾಗಿ ತಲೆ ಬಗ್ಗಿಸಿ ನಿಂತಳು ಮಧುಮತಿ.

ಇಬ್ಬರ ಮಧ್ಯೆ ಕೆಲವು ಕ್ಷಣ ಮೌನ ಸಾಮ್ರಾಜ್ಯವಾಳಿತು. ನಿಶ್ಯಬ್ದವನ್ನು ಬೇಧಿಸುತ್ತಾ, ಮುಗುಳ್ನಗೆ ನಕ್ಕು "ಭಯ ಇಲ್ಲಾಂದ್ರೆ, ನಿಮ್ಮವರು ಒಪ್ಪಿದರೆ ನನಗೇನೂ ಅಭ್ಯಂತರ ಇಲ್ಲ, ಹೋಗೋಣ" ಎಂದ ಪ್ರಸಾದ್.

ಹತ್ತು ನಿಮಿಷಗಳಲ್ಲಿ ಹಾಲಿನ ನೊರೆಯಂತಹ ಬಿಳಿಯ ಸೀರೆಯನ್ನುಟ್ಟು ಅಂದವಾಗಿ ಅಲಂಕರಿಸಿಕೊಂಡು ಬಂದ ಮಧುಮತಿ "ಇನ್ನೂ ಹೀಗೇ ಇದ್ದೀರಲ್ಲಾ ?" ಎಂದಳು.

ಒಂದು ಕ್ಷಣ ಚಕಿತನಾಗಿ ಅವಳೆಡೆ ನೋಡಿ, "ತಂದೆಯವರಿನ್ನೂ ಬರಲಿಲ್ವೇನೋ ?" ಎಂದು ಸಂದೇಹ ವ್ಯಕ್ತಪಡಿಸಿದ.

"ತಂದೆಯವರು ರಿಕ್ಷಾ ತರೋದಕ್ಕೆ ಆಳನ್ನು ಕಳಿಸಿದ್ದಾರೆ, ಸರೀನಾ ? ಹೊರಡಿ" ಎಂದಳು ಹೆಮ್ಮೆಯಿಂದ ಅವನ ಕಡೆ ನೋಡುತ್ತಾ.

ಬೀದಿಯ ಬಾಗಿಲಿನ ಹೊಸಲು ದಾಟಿ ಒಬ್ಬರ ಪಕ್ಕದಲ್ಲಿ ಒಬ್ಬರು ನಡೆದು ಹೋಗುತ್ತಿದ್ದ ಪ್ರಸಾದ್‌ರಾವ್, ಮಧುಮತಿಯನ್ನು ತೃಪ್ತಿಯಿಂದ ನೋಡಿದರು ವೆಂಕಟರಾಮಯ್ಯ, ಜಾನಕಮ್ಮ.

ಎಷ್ಟೋ ದಿನಗಳ ಪರಿಚಯಸ್ಥರಂತೆ ರಿಕ್ಷಾ ಹತ್ತಿ ಕೂತ ಅವರಿಬ್ಬರನ್ನೂ ನೋಡಿ ಮುಗುಳುನಗುತ್ತಾ ಮೂಗಿನ ಮೇಲೆ ಬೆರಳಿಟ್ಟುಕೊಂಡು "ಏನ್ರಿ, ಜೋಡಿ ಬಹಳ ಚೆನ್ನಾಗಿದೆ ಅಲ್ವೇ ?" ಎಂದರು ಜಾನಕಮ್ಮ.

"ನಿನ್ನ ಗಂಡ ಸರ್ವಿಸ್‌ನಲ್ಲಿ ಚೆನ್ನಾಗಿಲ್ಲದೆ ಇರೋ ಕೆಲಸ ಯಾವುದನ್ನು ಮಾಡಿದ್ದಾನೆ, ಹೇಳು ?" ಎನ್ನುತ್ತಾ ಜಾನಕಮ್ಮನ ಭುಜವೇರಿಸಿ ನಕ್ಕರು.

o o o o

ಇಂಟರ್‌ವಲ್‌ನಲ್ಲಿ ಲೈಟುಗಳು ಹತ್ತಿಕೊಂಡಾಗ ಮಧುಮತಿಯ ಕಡೆ ನೋಡಿ "ಪಿಕ್ಚರ್ ಹೇಗಿದೆ" ಎಂದ ಪ್ರಸಾದ್‌ರಾವ್.

ಅವಳು ಜವಾಬು ಕೊಡುವ ಮೊದಲೇ ಹಿಂದಿನ ಕುರ್ಚಿಯಲ್ಲಿದ್ದವರಾರೋ "ಶೀಘ್ರವೇ ಸುಪುತ್ರ ಪ್ರಾಪ್ತಿ ರಸ್ತು !" ಎಂದರು ಮೆಲ್ಲನೆ. ಒಡನೆಯೇ ಕೆಲವು ಕಂಠಗಳು ಪಕಪಕನೆ ನಕ್ಕವು.

"ಮನೆಗೆ ಹೋಗೋಣ" ರಭಸದಿಂದ ಎದ್ದು ನಿಂತಳು ಮಧುಮತಿ.

"ಉಷ್, ಏನಾಗಿಹೋಯ್ತೀಗ ? ಕೂತ್ಕೋ. ಪಿಕ್ಚರ್ ಬಹಳ ಚೆನ್ನಾಗಿದೆ" ಎನ್ನುತ್ತಾ ಅವಳ ಕೈಹಿಡಿದುಕೊಂಡು ಪುನಃ ಕೂಡಿಸಿದ ಪ್ರಸಾದ್‌ರಾವ್.

ತುಟಿಗಳು ಅದುರುತ್ತಿದ್ದರೆ, ನಿಸ್ಸಹಾಯಳಾಗಿ ಪ್ರಸಾದ್‌ರಾವ್ ಕಡೆ ನೋಡಿದಳು ಮಧುಮತಿ.

"ಆಗ್ಲಿ ಬಿಡು. ಅದು ಅವರಿಗೆ ತಮಾಷೆ! ಇನ್ನೆಷ್ಟು ದಿನ ಹೀಗೆ ಹೇಳ್ತಾರೆ!" ಮೆಲ್ಲಗೆ ಹೇಳಿದ ಪ್ರಸಾದ್.

o o o o

ಬಾಗಿಲನ್ನು ತೆರೆಯುತ್ತಾ ಜಾನಕಮ್ಮ "ಮಧೂ, ಇಬ್ಬರೂ ಬಡಿಸಿಕೊಂಡು ಊಟಮಾಡಿ ಬಿಡಮ್ಮ" ಎಂದರು ಆಕಳಿಸುತ್ತಾ.

"ಬಾ, ಬಡಿಸು !" ಎಂದಳು ಮಧುಮತಿ ಒರಟಾಗಿ.

"ಅದೇಕೆ ಹಾಗೆ ಕೋಪ ಮಾಡ್ಕೋತಿ ? ಚೆನ್ನಾಗಿದೆ. ನಿನ್ನ ಮಾತೆಲ್ಲಾ ನಡಿತಾ ಇದ್ರೆ ಹಾಗೇ ಬಿಡು" ಎಂದು ಇನ್ನೂ ಏನೋ ಹೇಳಲು ಹೋದ ಜಾನಕಮ್ಮನ ಮಾತನ್ನ ತಡೆಯುತ್ತಾ "ನಿಮ್ಮ ಮೇಲಲ್ಲ ಅವಳ ಕೋಪ" ಎನ್ನುತ್ತಾ ಮಧುಮತಿಯ ಕಡೆ ನೋಡಿ ಫಕ್ಕನೆ ನಕ್ಕ ಪ್ರಸಾದ್‌ರಾವ್.

"ಯಾರೋ ಶೀಘ್ರಮೇವ ಸುಪುತ್ರ ಪ್ರಾಪ್ತಿರಸ್ತು ಅಂತ ನಿಮ್ಮ ಮಗಳಿಗೆ ಆಶೀರ್ವಾದ ಮಾಡಿದರು . ಅವಳು ನನ್ನ ಭುಜದ ಮೇಲೆ ತಲೆ ಬಗ್ಗಿಸಿ ಏನೇನೋ ಹರಟುತ್ತಾ ಇದ್ಲು. ಹಾಗೆ ಮಾತಾಡ್ತಾ ಇದ್ರೆ ಮದುವೆ ಆಗೋಯ್ತು ಅಂದ್ಕೊಂಡಿದಾರೆ."

"ಏನ್ರಿ !" ರೋಷದಿಂದ ಕೂಗಿದಳು ಮಧುಮತಿ.

"ಓಹೋ, ಅಂಪ್ರೆ ಅಂತಾರೇ. ಅದಕ್ಕೋಸ್ಕರವೇ ಅಷ್ಟು ರಂಪಾಟ ಮಾಡ್ತಿದ್ದೀ, ಅಯ್ಯೋ ! ಯಾರೋ ಅಯೋಗ್ಯರು ಏನೋ ಅಂದ್ಬಿಟ್ರಾ ?...... ಆ ಮೂರು ಮುಡಿ ಬಿದ್ರೆ ಅದೂ ಆಗುತ್ತೆ" ಎಂದು ಜಾನಕಮ್ಮ ನಗುತ್ತಾ ಅಡಿಗೆ ಮನೆ ಕಡೆ ಹೋದರು

"ಏನೋ ಅದು ನಗು, ಕೋಪಾ" ಎನ್ನುತ್ತಾ ಪ್ರವೇಶಿಸಿದರು ವೆಂಕಟ ರಾಮಯ್ಯ, ತಹಶೀಲ್‌ದಾರರೂ ಅವರ ಹೆಂಡತಿ ಎಂದು ಜ್ಞಾಪಕ ಬಂದೊಡನೆ ಜಾನಕಮ್ಮ ಮುಸಿಮುಸಿ ನಗುತ್ತಾ ! "ಅಳಿಯ ಹೀಗೆಂದ" ಎಂದು ಮೆಲ್ಲನೆ ಉಸುರಿದರು.

"ಆದ್ರೆ ನಿನ್ನನ್ನೇನ್ನೋ ಅತ್ತೆ ಅಂದ್ಕೊಂಡಿದ್ದಾನಾಗ್ಲೀ, ನನ್ನ ಹತ್ರ ಮಾತ್ರ ಗುಮಾಸ್ತೆಯಾಗೇ ಇದ್ದಾನೆ. ಅದೇ ತೊಂದರೆ !" ಎಂದರು ವೆಂಕಟ ರಾಮಯ್ಯ ನಗುತ್ತಾ,

ಎರಡು ಖರ್ಚುಗಳನ್ನೂ ತಾನೇ ಹಾಕಿ ವೈಭವದಿಂದ ಮಗಳ ಮದುವೆ ಮಾಡಿದರು ವೆಂಕಟರಾಮಯ್ಯ.

ತಾಯಿಯ ಚಿನ್ನದಲ್ಲಿ ಮಧುಮತಿ ಕೋರಿದ ಒಡವೆಗಳನ್ನು ಮಾಡಿಸಿದ ಪ್ರಸಾದ್.

ತಾವು ಬೇರೆ ಸಂಸಾರ ಹೂಡಲು ಅನುಮತಿ ಕೊಡಬೇಕೆಂದು ಮತ್ತೊಮ್ಮೆ ವಿನಯದಿಂದ ಕೇಳಿದ ಪ್ರಸಾದ್ ವೆಂಕಟರಾಮಯ್ಯನವರನ್ನು.

"ಹೀಗೆ ಇನ್ನೊಮ್ಮೆ ಕೇಳಿ ನನ್ನ ಮನಸ್ಸು ನೋಯಿಸಬೇಡ. ರಾಜು,

ಗೋಪಿ ನನಗೆ ಚಿಕ್ಕ ಗಂಡುಮಕ್ಕಳು. ಈ ಮನೆ ದೊಡ್ಡಮಗ ನೀನು. ನಾಲ್ಕು ಜನ ಮಕ್ಕಳು ಸತ್ತುಹೋದ ಮೇಲೆ ಲಕ್ಷ್ಮಿಯ ಹಾಗೆ ಹುಟ್ಟಿ ತನ್ನ ಬೆನ್ನ ಹಿಂದೆ ಇಬ್ಬರು ತಮ್ಮಂದಿರನ್ನು ತಂದ್ಕೊಂಡಿದ್ದಾಳೆ ಮಧು. ಅವಳನ್ನು ಬಿಟ್ಟು ನಾನು ನಿಮ್ಮತ್ತೆ ಇಬ್ಬರೂ ಇರಲಾರೆವು. ನಿನಗೆ ಈ ಮನೇಲಿ ಏನಾದ್ರೂ ತೊಂದರೆ ಇದ್ರೆ ನನಗೆ ಹೇಳು, ಅದನ್ನು ನಾನು ಸರಿಪಡಿಸ್ತೀನಿ" ಎಂದರು ವೆಂಕಟ ರಾಮಯ್ಯ ಅವನ ಮಾತುಗಳನ್ನು ತಳ್ಳಿಹಾಕುತ್ತಾ.

"ಅದಲ್ಲ ನಿಮ್ಮ ಪಕ್ಕದ ಮನೇಲೇ ..."

"ಅದೇ, ಪುನಃ ನಾನು ಬದುಕಿರೋ ಅಷ್ಟು ದಿನ ಬೇರೆ ಸಂಸಾರದ ಮಾತು ಎತ್ತೋದಕ್ಕೆ ಅವಕಾಶವಿಲ್ಲ" ಎಂದು ನುಡಿಯಿತು ಅವರ ಕಂಚಿನ ಕಂಠ.

o o o o

ಆ ಮನೆಯಲ್ಲಿ ಪ್ರಸಾದ್‌ಗೆ ಸರ್ವ ಸ್ವಾತಂತ್ರ್ಯ. ವೆಂಕಟರಾಮಯ್ಯ ನವರಿಗೆ ಅಚ್ಚುಮೆಚ್ಚಿನ ಅಳಿಯ, ಜಾನಕಮ್ಮನವರಿಗೆ ಹಿರಿಯ ಮಗನಾಗಿ ಮಧುಮತಿಗೆ ಒಳ್ಳೆಯ ಗಂಡನಾಗಿ, ರಾಜು, ಗೋಪಿ ಇವರಿಗೆ ಆಪ್ತ ಸ್ನೇಹಿತ ನಾಗಿ ಎಲ್ಲರ ಆದರ ಅಭಿಮಾನಿಗಳನ್ನು ಸೂರೆಗೊಂಡ ಪ್ರಸಾದ್.

ಯಾವ ಚಿಕ್ಕ ವ್ಯವಹಾರವೇ ಆಗಲಿ ಯಾವ ಸಣ್ಣ ವಿಷಯವೇ ಆಗಲಿ. "ನಮ್ಮ ಅಳಿಯನ್ನ ಒಂದು ಮಾತು ಕೇಳಿ ಹೇಳ್ತೀನಿ" ಎನ್ನುತ್ತಿದ್ದರು ವೆಂಕಟ ರಾಮಯ್ಯ

ಸುಖ ಸಂತೋಷಗಳಿಂದ ಕೂಡಿದ್ದ ಆ ಸಂಸಾರವನ್ನು ಕಂಡು ಎಲ್ಲರೂ ಮೆಚ್ಚುತ್ತಿದ್ದರು. ಹಾಗೆ ಐದು ವರ್ಷಗಳು ಬಹು ಬೇಗ ಉರುಳಿಹೋದವು.

ರಾಜಶೇಖರ ಉದ್ಯೋಗಸ್ಥನಾದ. ಗೋಪಿಯ ಓದು ಪೂರ್ತಿ ಯಾಯಿತು. ಜಾನಕಮ್ಮನವರಿಗೆ ಮಾತ್ರ ಮಗಳಿಗೆ ಇನ್ನೂ ಮಕ್ಕಳಾಗಲಿಲ್ಲವಲ್ಲ ಎಂಬ ಯೋಚನೆ ಇತ್ತು. ಜಾತಕಗಳನ್ನು ತೋರಿಸಿದರು. ಹರಕೆಗಳನ್ನು ಹೊತ್ತರು. ಡಾಕ್ಟರುಗಳಿಗೆ ತೋರಿಸಿದರು. ಇಷ್ಟೆಲ್ಲಾ ಆದ ಮೇಲೆ ಮಧುಮತಿ ಗರ್ಭವತಿಯಾದಳು.

o o o o

ಸ್ನಾನ ಮಾಡಿ ಬಂದ ಪ್ರಸಾದ್ ತಲೆಯನ್ನು ಟವಲಿನಿಂದ ಒರೆಸು ಕೊಳ್ಳುತ್ತಾ, "ಈವತ್ತು ನಿಮ್ಮ ಹುಟ್ಟಿದ ಹಬ್ಬ, ಏನಡಿಗೆ ಮಾಡೊದು ಕೇಳು ಅಂದ್ರು ಅಮ್ಮ" ಎಂದಳು ಮಧುಮತಿ.

ಕನ್ನಡಿಯ ಮುಂದೆ ನಿಂತು ತಲೆ ಬಾ[illegible]ಳ್ಳುತ್ತಾ "ನನ್ನ ಹುಟ್ಟಿ ಹಬ್ಬ ನಿಮ್ಮ ತಾಯಿಯವರಿಗೆ ಜ್ಞಾಪಕ ಬರುವಷ್ಟು [illegible]ತ್ತು ಮನೇಲಿ ಇನ್ದಿ್ದೀನಿ ಅಂದ ಹಾಗಾಯ್ತು. ಇಂದಿಗೆ ಸರಿಯಾಗಿ ಮೂವತ್ತು ತುಂಬಿತು. ಮುದುಕ ಆಗಿಹೋಗ್ತಿದ್ದೀನಿ'' ಎಂದ ಅವಳ ಮುಖ ನೋಡಿ ನಗುತ್ತಾ.

"ಮುವ್ವತ್ತು ವರ್ಷಕ್ಕೆ ಮುದುಕನಾಗಿಬಿಟ್ರಾ ? ನನಗಿನ್ನೂ ಇಪ್ಪತ್ತು ಇಪ್ಪತ್ತಮೂರು ವರ್ಷವೂ ಆಗಿಲ್ಲವಲ್ಲ ! ಆಗಲೇ ನೀವು ಮುದುಕರಾಗಿಬಿಟ್ರೆ ..........ತಾತನೊಂದಿಗೆ ಸಂಸಾರಾನ ?" ಹಾಸ್ಯ ಮಾಡುತ್ತಾ ನಕ್ಕಳು ಮಧು ಮತಿ.

''ಕರೆಕ್ಟ್.....ನಾನು ತಾತ ಆಗಬೇಕಾದ್ರೆ ಮೊದಲು ನೀನು ತಾಯಿ ಆಗ್ಬೇಡ್ವಾ ?......ಮಧು ! ಬೇಗ ! ನನಗೆ ಸಿಹಿ ಮಿಠಾಯಿ ಬೇಡ. ಮುದ್ದಾಗಿ 'ಅಪ್ಪಾ' ಅಂತ ಕೂಗೋ ಮಗ ಬೇಕು. ಕೊಡ್ತೀ ತಾನೆ !'' ಅವಳ ಮುಖ ವನ್ನು ತನ್ನ ಕೈಲಿ ಹಿಡಿದು ಹೇಳಿದ.

"ಅಬ್ಬ ! ಏನ್ರೀ ಇದು ! ನಿಮಗೂ ಹಾಸ್ಯ!" ಅವನಿಂದ ನಾಲ್ಕು ಹೆಜ್ಜೆ ಹಿಂದಕ್ಕೆ ಹೋಗಿ ನಾಚಿಕೆಯಿಂದ ತಲೆ ತಗ್ಗಿಸಿದಳು ಮಧುಮತಿ.

"ನಿಮಗೂ ಹಾಸ್ಯ ಅಂದ್ರೆ ? ಇನ್ಯಾರು ಹಾಸ್ಯ ಮಾಡ್ತಿದಾರೆ ಮಧೂ?"

''ಎಲ್ಲರಿಗೂ ಅದೇ ಹಾಸ್ಯ. ಚೆನಾಗಿ ತಿನ್ನು ಅಂತಾರೆ ಅಮ್ಮ. ಹತ್ತು ಸಲ ಮಹಡಿ ಹತ್ತಿ ಇಳಿದು ಮಾಡ್ಬೇಡಾ ಅಂತಾರೆ ಅಪ್ಪ. ರಾಜು, ಗೋಪಿ ಅಳಿಯನ ಹಾಗೆ ಚೆನ್ನಾಗಿರಬೇಕು ಅಂತಾರೆ. ಕೆಲಸದದಳು ಒಳ್ಳೇ ಸೀರೆ ಉಡಿಸಬೇಕು ಅಂತಾಳೆ. ಎಲ್ಲೂ ಸ್ವೆಷ್ಟಾಯಿಸ್ತಾರೆ !" ನಾಚಿಕೆಯಿಂದ ಅವಳ ಮುಖ ಕೆಂಪಾಯಿತು.

"ಅಮ್ಮಾ ಕಳ್ಳೀ ! ಎಲ್ಲರಿಗೂ ತಿಳಿದ ವಿಷಯವನ್ನು ನನ್ಹತ್ರ ಮುಚ್ಚಿಟ್ಟೆ ಅಂದ ಹಾಗಾಯ್ತು!" ಸಂತೋಷದಿಂದ ಅವಳನ್ನು ತನ್ನ ಎರಡೂ ಕೈಗಳಿಂದಲೂ ಬರಸೆಳೆದು ಅಪ್ಪಿಕೊಂಡು ಅವಳನ್ನು ಚುಂಬಿಸಿದ.

"ಹೋಗ್ರೀ. ಅದಕ್ಕೇ ನಿಮಗೆ ಹೇಳಬಾರದು ಅಂದ್ಕೊಂಡೆ.'' ಅವ ನಿಂದ ದೂರ ಸರಿದು ಮಧು ಕೋಪ ಅಭಿನಯಿಸಿದಳು.

o o o o

ದೂರದಲ್ಲಿದ್ದ ಚರ್ಚಿನ ಗಂಟೆ ಟಂಗ್, ಟಂಗ್ ಎಂದು ಎರಡು ಸಲ ಹೊಡೆಯಿತು. ಗತಜೀವನ ಮೆಲುಕು ಹಾಕುತ್ತಿದ್ದ ಪ್ರಸಾದ್‌ರಾವ್‌ಗೆ ನಿದ್ದೆ

ಹತ್ತಲಿಲ್ಲ. ಸುಸ್ತಾದರಾವ್ ದೀರ್ಘವಾದ ನಿಟ್ಟುಸಿರುಬಿಟ್ಟ. ನಿದ್ದೆ ಮಾಡುತ್ತಿದ್ದ ವಾಸುವಿನ ತಲೆ ನೇವರಿಸಿ ಮೃದುವಾಗಿ ಅವನ ಹಣೆಯ ಮೇಲೆ ಕೈಯಾಡಿಸಿದರು. ಒಂದು ಸಲ ಪಕ್ಕಕ್ಕೆ ತಿರುಗಿ ಪುನಃ ನಿದ್ರೆ ಹೋದ ವಾಸು.

ಬೆಳಿಗ್ಗೆ ವಾಸುವಿಗೆ ಬಲವಂತದಿಂದ ಕಾಫಿ ತಿಂಡಿ ತಿನ್ನಿಸಿದರು ಪ್ರಸಾದ್ ರಾವ್. ಏನೋ ಸೀರಿಯಸ್ಸಾಗಿ ಯೋಚಿಸುತ್ತಿದ್ದ ಪ್ರಸಾದ್‌ರಾವ್, "ಮತ್ತೆ ನಾನು ಹೊರಡ್ತೀನಿ, ಮತ್ತೆ ನಾನು ಹೊರಡ್ತೀನಿ" ಎಂದ ವಾಸುವಿನ ಮಾತಿಗೆ ಬೆಚ್ಚಿಬಿದ್ದು," "ಇಲ್ಲಿಕೂತ್ಕೊ, ನಿನ್ಹತ್ರ ಒಂದು ವಿಷಯಹೇಳ್ಬೇಕು" ಎಂದರು.

ತಲೆ ತಗ್ಗಿಸಿ ಮೌನವಾಗಿ ಕುಳಿತ ವಾಸು. ಏನೋ ನಿಶ್ಚಯಕ್ಕೆ ಬಂದವರಂತೆ ನಿರಾಳವಾಗಿ ಉಸಿರುಬಿಟ್ಟು, "ನಾನು ನಿನ್ನ ತಂದೆಯೆಂದೂ, ನಿನಗೆ ಇದುವರೆಗೂ ಆಶ್ರಯ ಕೊಟ್ಟು ಎಲ್ಲರಿಗಿಂತ ಹೆಚ್ಚಿನವನೆಂದೂ, ಹುಡುಕಿಕೊಂಡು ನನ್ನಲ್ಲಿಗೆ ಬಂದಿದ್ದೀ. ನನಗೆ ಅದಕ್ಕಿಂತ ಇನ್ನೇನು ಬೇಕು ಹೇಳು, ನನಗೆ ಬಹಳ ಸಂತೋಷವಾಗಿದೆ. ನಿನಗೋಸ್ಕರ ಏನು ಬೇಕಾದ್ರೂ ಮಾಡ್ತೀನಿ. ಆದರೆ–" ಎನ್ನುತ್ತಾ ವಾಸುವಿನ ಕಡೆ ನೋಡಿದ ಪ್ರಸಾದ್‌ರಾವ್.

"ಹೇಳಿ ಸಾರ್ ! ನನ್ನನ್ನ ಓದಿಸೋದಕ್ಕೆ ಸಾಧ್ಯ ಇಲ್ಲ ಅಂತೀರಾ ?" ಸುಸ್ತಾಗಿ ಬೇಸರವಾಗಿದ್ದ ವಾಸುವಿಗೆ ಅದೇ ತೋಚಿರಬೇಕು. ಕಂದಿದ ವಾಸುವಿನ ಮುಖವನ್ನು ಪರಿಶೀಲಿಸಿದ ಪ್ರಸಾದ್‌ರಾವ್.

ತಾಯಿತಂದೆಯರ ಬಳಿ ಮುದ್ದಿನಿಂದ ಬೆಳೆಯುವ ಹುಡುಗರಿಗಿಂತ ಬೇರೆಯವರ ಆಸರೆಯಲ್ಲಿ ಕಷ್ಟಪಡುತ್ತಾ ದರಿದ್ರದಲ್ಲಿ ಬೆಳೆಯುವ ಹುಡುಗರಿಗೆ ಮನಸ್ಸು ವಯಸ್ಸಿಗೆ ಮೀರಿ ಬೆಳೆದಿರುತ್ತದೇನೋ ಎಂದುಕೊಳ್ಳುತ್ತಾ, "ಅದಲ್ಲ ಮಗು ! ಏಕೆ ಓದಿಸೋದಿಲ್ಲ, ಓದಿಸ್ತೀನಿ. ನಾನು ಅವರೆಲ್ಲ ಹೇಳಿದಂತೆ ಓದಿಸೋದಿಲ್ಲ ಅಂತ ಹೇಗೆ ಹೇಳೋದಕ್ಕೆ ಸಾಧ್ಯ. ಅದೂ ಅಲ್ಲದೆ ನಿನ್ನನ್ನ ಬಿಟ್ಟು ನನಗಿನ್ನಾರಿದ್ದಾರೆ ? ಆದರೆ....." ಮಾತನ್ನು ನಿಲ್ಲಿಸಿಬಿಟ್ಟ ಪ್ರಸಾದ್‌ರಾವ್ ಕಡೆ ಆತುರದಿಂದ ನೋಡಿದ ವಾಸು.

ಇಬ್ಬರ ಮಧ್ಯೆ ಎರಡು ಕ್ಷಣ ಮೌನವಾಗಿ ಕಳೆಯಿತು.

"ನೀನು ಇಲ್ಲಿಗೆ ಬಂದದ್ದೂ, ನಾನು ನಿನ್ನನ್ನು ಓದಿಸಲು ಒಪ್ಪಿಕೊಂಡಿರುವುದೂ ತಿಳಿಯಕೂಡದು. ಈ ವಿಷಯ ಯಾರಿಗೂ ತಿಳಿಯುವುದು ನನಗಿಷ್ಟವಿಲ್ಲ" ಆ ಧ್ವನಿ ಗಂಭೀರವಾಗಿಯೂ ದೃಢವಾಗಿಯೂ ಇತ್ತು.

''ಅದು ಹೇಗೆ ಸಾಧ್ಯ ?" ನಿಶ್ಶೇಷ್ಟನಾದ ವಾಸು.

''ಗೋಪಾಲನಿಗೆ ಮಾತ್ರ ಹೇಳು, ಯಾರಿಗೂ ಹೇಳಕೂಡದು ಎಂದು ಅವನಿಗೆ ಹೇಳು. ನಾನೂ ಕಾಗದ ಬರೀತೀನಿ. ನೀನು ಯಾವಾಗಲೂ, ಎಂತಹ ಸಮಯದಲ್ಲೂ ನಾನಿಲ್ಲಿದ್ದೇನೆ ಎಂದೂ, ನಾನು ಓದಿಸುತ್ತಿದ್ದೀನಿ ಎಂದೂ ನಿಮ್ಮವರಾರಿಗೂ ತಿಳಿಸುವುದಿಲ್ಲ ಎಂದು ಮಾತುಕೊಡು" ಕೈ ಮುಂದಕ್ಕೆ ಚಾಚಿದರು ಪ್ರಸಾದರಾವ್, ಅವರ ಧ್ವನಿಯಲ್ಲಿನ ಗಾಂಭೀರ್ಯ ಸಡಿಲವಾಗಲಿಲ್ಲ.

ಭಯದಿಂದ, ಹೆದರುತ್ತಾ ಏನೋ ಆಗಿಹೋದಂತೆ, ಏನೂ ಅರ್ಥವಾಗದಂತೆ ಪ್ರಸಾದ್‌ರಾವ್ ಕಡೆ ನೋಡಿದ ವಾಸು.

ಪುನಃ ಕೆಲಕ್ಷಣಗಳು ಮೌನದಿಂದ ಸಾಗಿತು.

"ನೀವು ಹಾಗೆ ಮಾತು ಕೊಡಬೇಕು ಕೊಡದಿದ್ರೆ ನಾನು ಓದಿಸೋದಿಲ್ಲ. ಕಿತ್ತುಹೋದ ದಾರವನ್ನು ಗಂಟುಹಾಕಬೇಕೆಂದೂ, ಇಳಿದ ಹೊಸಲನ್ನು ಹತ್ತಬೇಕೆಂದೂ ನಾನು ಆಶಿಸೋದಿಲ್ಲ. ಆದರೆ ನೀನು ಕಲೆಕ್ಟರ್ ಆಗಿ ..." ಅವನ ಹಲ್ಲುಗಳು ಕರಕರ ಶಬ್ದ ಮಾಡಿದವು.

ವಾಸುವಿನ ಮುಖ ಬೇಗ ಬೇಗ ಬದಲಾಯಿಸುತ್ತಿದ್ದ ಭಾವನೆಗಳೊಂದಿಗೆ ಕೆಂಪಾಯಿತು. ಪ್ರಸಾದ್‌ರಾವ್ ಕೈ ತನ್ನ ಎರಡು ಕೈಗಳಲ್ಲೂ ಹಿಡಿದುಕೊಳ್ಳುತ್ತಾ ''ಹಾಗೇ ಆಗಲಿ. ನಿಮ್ಮ ಅನುಮತಿ ಪಡೆಯದೆ ಯಾರಿಗೂ ತಿಳಿಯಪಡಿಸೊಲ್ಲ, ನನ್ನನ್ನ ಓದಿಸಿ" ಎಂದ. ಎದೆಯಲ್ಲಿ ಹೆಪ್ಪುಗಟ್ಟಿದ್ದ ದುಃಖ ಪ್ರವಹಿಸಿತು......

ಬಿಕ್ಕಿ ಬಿಕ್ಕಿ ಅಳುತ್ತಿದ್ದ ವಾಸುವನ್ನು ಎದೆಗಪ್ಪಿಕೊಳ್ಳುತ್ತಾ, "ಛೆ! ಛೆ! ಎಲ್ಲಿ ನನ್ನ ಕಡೆ ನೋಡು !" ಎಂದು ಸಮಾಧಾನ ಹೇಳಬೇಕೆಂದಿದ್ದ ಪ್ರಸಾದರಾವ್ ಹೃದಯ ಕರಗಿ ಕಣ್ಣುಗಳಲ್ಲಿ ನೀರು ತುಂಬಿ ಧ್ವನಿ ಶುದ್ಧವಾಯಿತು. ಟಪಟಪನೆ ಎರಡು ಕಣ್ಣೀರಿನ ಬೊಟ್ಟು ವಾಸುವಿನ ತಲೆಯ ಮೇಲೆ ಬಿತ್ತು.

ಕೆಲ ಕ್ಷಣಗಳು ಹಾಗೆಯೇ ಇದ್ದುಬಿಟ್ಟರು. ಆ ತಂದೆ ಮಕ್ಕಳು ....ಒಬ್ಬರನ್ನೊಬ್ಬರು ಬಿಟ್ಟಿರಲಾರೆವು ಎಂಬಂತೆ.

''ಮಗೂ, ಏಳು ವಾಸು! ನೋಡು, ಮುಖ ತೊಳೆದುಕೊ, ಟ್ರೇಯಿನ್‌ಗೆ ಟೈಂ ಆಗಿಹೋಗುತ್ತೆ. ಚಿಕ್ಕ ಮಾವನ ಊರಿನಲ್ಲೇ ಸೀಟಿಗೆ ಅಪ್ಲೈ

ಮಾಡು. ನಾನು ದುಡ್ಡು ಕೊಡ್ತೀನಿ, ಇನ್ನೇನಿಲ್ಲ ನಾನು ಓದಿಸ್ತೀನಿ ಅನ್ನೋ ವಿಷಯ ಗೊತ್ತಾದ್ರೆ ಹೊಟ್ಟೆಕಿಚ್ಚು ಪಡೋವ್ರು ಇರ್ತಾರೆ. ನಿನ್ನ ಓದು ಸಾಗದ ಹಾಗೆ ಮಾಡ್ತಾರೆ. ಆದರಿಂದ ಹೇಳಿದೆ ಅಷ್ಟೆ. ನಮ್ಮವರೆಲ್ಲ ಚೆನ್ನಾಗಿದ್ದಾರೆ ತಾನೆ ?" ಎಂದರು ಪ್ರಸಾದ್‌ರಾವ್ ಮಗನನ್ನು ಸಂತೈಸುತ್ತಾ.

ಏನೇನೋ ಕೇಳಿ ತಿಳಿದುಕೊಳ್ಳಬೇಕೆಂಬ ಆಸೆಯನ್ನು ಇಬ್ಬರೂ ಹತ್ತಿದರು.

ಬೇಗ ಬೇಗ ಪ್ರಯಾಣಸನ್ನದ್ಧನಾದ ವಾಸು. ಅವನನ್ನು ಬೀಳ್ಕೊಡಲು ಸ್ಟೇಷನ್‌ಗೆ ಹೊರಡಲು ಸಿದ್ಧರಾದರು ಪ್ರಸಾದರಾವ್.

"ವಾಸು, ಈ ಹಣ ಭದ್ರವಾಗಿಟ್ಕೋ, ಈ ಕಾಗದವನ್ನು ಮಾವನಿಗೆ ಕೊಡು. ನಡಿ, ಸ್ಟೇಷನ್‌ಗೆ ಬರ್‍ತೀನಿ" ಎಂದರು ಪ್ರಸಾದ್‌ರಾವ್.

ಹಣ ತೆಗೆದುಕೊಳ್ಳುತ್ತಿದ್ದರೆ ವಾಸುವಿನ ಕೈ ನಡುಗಿತು. ಮೂರು ನೂರು ರೂಪಾಯಿನ ನೋಟುಗಳು ಕಣ್ಣುಗಳನ್ನು ಅಗಲವಾಗಿ ಬಿಟ್ಟು "ಇಷ್ಟು ಹಣ ಬೇಕಾಗುತ್ತಾ ?" ಎಂದ.

"ಫೀಸ್ ಕಟ್ಟಬೇಕು. ಪುಸ್ತಕಗಳನ್ನು ಕೊಂಡ್ಕೋಬೇಕು, ಅಲ್ವಾ ? ಇರಲಿ, ಮಾವನ ಅಡ್ರೆಸ್ ಬರಿ'' ಎನ್ನುತ್ತಾ ಒಂದು ಕಾಗದವನ್ನಿತ್ತರು.

''ನಿಮ್ಮ ಕರೆಕ್ಟ್ ಅಡ್ರೆಸ್ ಇದೇ ತಾನೇ ?" ಎನ್ನುತ್ತ ಗೋಪಾಲರಾವ್ ಅಡ್ರೆಸ್ ಬರೆದುಕೊಟ್ಟ ವಾಸು.

"ಊಂ......ಮಾವ ಕೊಟ್ಟಿರೊ ಅಡ್ರೆಸ್ಸೇ. ಹೋದ ಮೇಲೆ ವಿಶದವಾಗಿ ಕಾಗದ ಬರಿ'' ಎಂದರು ಪ್ರಸಾದರಾವ್.

ಸ್ಟೇಷನ್‌ವರೆಗೂ ಇಬ್ಬರೂ ಮೌನವಾಗಿಯೇ ನಡೆದರು. ಟಿಕೆಟ್, ಸ್ವಲ್ಪ ಚಿಲ್ಲರೆ, ಹತ್ತು ರೂಪಾಯಲ್ಲಿ ಟಿಕೆಟ್‌ಗೆ ಆಗಿ, ಉಳಿದ ಒಂದು ರೂಪಾಯಿನ ಕೆಲವು ನೋಟುಗಳನ್ನು ವಾಸುವಿನ ಜೋಬಿನಲ್ಲಿಡುತ್ತಾ, ''ಹುಷಾರಾಗಿ ಹೋಗು. ಸುಮ್ಮನೆ ಏನೇನೋ ಯೋಚನೆ ಮಾಡಬೇಡ. ಹಣ ಬೇಕಾದಾಗ ಬರಿ. ಕಾಲ ಬಂದಾಗ ನಾನೇ ನಿನಗೆ ನನ್ನ ಎಲ್ಲ ವಿಷಯಗಳನ್ನೂ ಹೇಳ್ತೀನಿ, ಚಿಕ್ಕ ಮಾವ ಗೋಪಾಲನ ವಿನ ಇನ್ನಾರಿಗೂ ತಿಳಿಸಬೇಡ" ಎಂದು ಮತ್ತೊಂದು ಸಲ ಚ್ಚರಿಸಿದರು, ಪ್ರಸಾದ್‌ರಾವ್.

ಟ್ರೈನ್ ಕದಲುತ್ತಿದ್ದರೆ ವಾಸುವಿನ ಕೈ ತನ್ನ ಕೈಗಳಲ್ಲಿ ತೆಗೆದುಕೊಂಡು

ಆಪ್ಯಾಯತೆಯಿಂದ್ನಹಿಸುಕುತ್ತಾ, "ರಜೆ ಬಂದೊಡನೆ ಬರ್ತ್ತೀ ತಾನೆ ? "ಎಂದರು ಆರ್ದ್ರ ಸ್ವರದಲ್ಲಿ.

"ಬರ್ತ್ತೀನಿ" ಆ ಧ್ವನಿಯಲ್ಲಿ ಕೃತಜ್ಞತೆ.

o o o o

"ವಾಸು ವಾಪಸ್ ಬಂದಂತಿದೆ. ನಿನ್ನೊಂದಿಗೆ ಏನಾದ್ರೂ ಹೇಳಿದ್ನಾ ?" ಎಂದು ಕೇಳಿದರು ಗೋಪಾಲರಾವ್ ಹೆಂಡತಿಯನ್ನು.

"ಒಂದ್ಸಲ, ಎರಡ್ಸಲ ಕೇಳ್ದ ವಾಸೂ, ಕಾಲೇಜಿಗ ಸೇರಲು ಸೀಟಿಗೆ ಅಪ್ಲೈ ಮಾಡ್ತೀಯಾ, ಅಂತ. ಮಾವ ಬರ್ಲಿ, ಹೇಳ್ತೀನಿ ಅತ್ತೆ ಎಂದ" ಎಂದು ಹೇಳಿದಳು ಲಕ್ಷ್ಮಿ.

"ವಾಸೂ" ಕೂಗಿದರು ಗೋಪಾಲರಾವ್.

ವಾಸೂ "ಒಪ್ಕೊಂಡಿದ್ದಾರೆ ಮಾವ ಫೀಸ್ ಕಟ್ಟೋವಕ್ಕೆ" ಎಂದು ಹೇಳಿದ ನಿಧಾನವಾಗಿ.

"ಬಾ, ಏನು ಸಮಾಚಾರ ? ತಕ್ಷಣ ವಾಪಸ್ ಬಂದುಬಿಟ್ಟೆಯಲ್ಲಾ" ಎನ್ನುತ್ತಾ ವಾಸುವಿನ ಕೈಹಿಡಿದು ತನ್ನ ರೂಮಿಗೆ ಕರೆದೊಯ್ದರು. "ಆಂ ಒಪ್ಕೊಂಡ್ನಾ ನಿಮ್ಮ ದೊಡ್ಡ ಮಾವ ? ಮೊದಲು ನೀನು ಮನೆಯಿಂದ ಹೊರಟು ಬಂದಾಗ ಗಪ್ ಚಿಪ್ ಅಂತ ಸುಮ್ನೆ ಇದ್ದೆಯಲ್ಲಾ, ಹೇಳು, ನೀನು ಏನು ಕೇಳ್ದೆ ?" ಎಂದು ಕೇಳಿದರು ತಾನು ಮಲಗಿ ತನ್ನ ಪಕ್ಕದಲ್ಲಿ ವಾಸುವಿಗೆ ಕೂಡಲು ಜಾಗ ತೋರಿಸುತ್ತಾ.

ಕೆಲವು ಕ್ಷಣ ಮೌನವಾಗಿ ಕಳೆದ ನಂತರ "ಯಾಕೋ, ಮಾತಾಡೋದಿಲ್ಲ ?" ಎಂದರು ಗೋಪಾಲರಾವ್ ಮುಗುಳ್ನಗುತ್ತಾ.

"ನಿನ್ಹತ್ರ ಕೊಂಚ ಮಾತಾಡ್ಬೇಕಾಗಿದೆ ಮಾವ" ಎಂದ ಲಕ್ಷ್ಮಿಯ ಕಡೆ ಒಮ್ಮೆ ನೋಡಿ ತಲೆ ಬಗ್ಗಿಸಿ.

ಹೋಗೆಂಬಂತೆ ಸನ್ನೆ ಮಾಡಿದರು ಗೋಪಾಲರಾವ್, ಲಕ್ಷ್ಮಿಯ ಕಡೆ ನೋಡಿ. "ಊಂ, ಈಗ ಹೇಳು" ಎಂದರು ವಾಸುವಿನ ಮುಖವನ್ನು ಆತುರದಿಂದ ದಿಟ್ಟಿಸುತ್ತಾ.

"ನಮ್ಮ ತಂದೆ......ನಮ್ಮ ತಂದೆ.....ಅಂದರೆ ನೀನು ಅಡ್ರೆಸ್ ಕೊಟ್ಟಿದ್ದೆಯಲ್ಲಾ ? ಹೋದೆ" ಎಂದ ವಾಸು. ಅವನ ಧ್ವನಿ ಕಂಪಿಸುತ್ತಿತ್ತು.

ಕಣ್ಣುಗಳನ್ನು ಕಿರಿದುಮಾಡಿ, "ಏನು ನೀ ಹೇಳ್ತಿರೋದು ? ನಿಮ್ಮ ತಂದೆಯವರ ಬಳಿಗೆ ಹೋಗಿದ್ಯಾ ? ನಿಜವಾಗ಼್ಲೂ !" ಎನ್ನುತ್ತಾ ನಂಬಲಾಗದಂತೆ ಸಂಭ್ರಮದಿಂದ ಎದ್ದು ಕೂತರು ಗೋಪಾಲರಾವ್.

"ಹೌದು ಮಾವ, ಅವರೇ ಓದಿಸ್ತೀನಿ ಅಂದ್ರು. ನನಗೆ ದುಡ್ಡು ಕೂಡಾ ಕೊಟ್ರು."

"ನೀ ಅವರ ಮಗ ಅಂತ ಹೇಗೆ ಕಂಡುಹಿಡಿದ್ರು ?....ಛೆ ಸುಳ್ಳು !" ಎನ್ನುತ್ತಾ ನಕ್ಕುಬಿಟ್ಟರು ಗೋಪಾಲರಾವ್.

"ನಿಜವಾಗ್ಲೂ, ಬೇಕಾದ್ರೆ ಇದೋ ನೋಡು, ನಿನಗೆ ಈ ಕಾಗದ ಕೊಡು ಅಂತ ಹೇಳಿದರು. ನಾನೇ ಹೇಳ್ದೆ ನಿಮ್ಮ ಮಗ ಅಂತ" ಎನ್ನುತ್ತಾ ಕಾಗದ ಗೋಪಾಲರಾವ್ ಕೈಗೆ ಕೊಟ್ಟ ವಾಸು.

ಆತುರದಿಂದ ಸರಸರನೆ ಓದಿ, "ಊಂ, ಹೇಳು, ನಿಮ್ಮತ್ತೆಗೆ ಗೊತ್ತಾದ್ರೂ ಪರವಾಗಿಲ್ಲ ಬಿಡು. ಅವರ ಉದ್ದೇಶ ಏನೋ! ಹೋಗ್ಲಿ, ಹಾಗೇ ಆಗ್ಲಿ, ಊಂ, ಈಗ ಹೇಳು. ಹೇಗೆ ಹೋದೆ ? ನಿನ್ನ, ಅವರ ಮಧ್ಯೆ ಸಂಭಾಷಣೆಹೇಗೆ ನಡೆಯಿತು ?" ಎಂದು ಕುತೂಹಲದಿಂದಲೂ ಸಂತೋಷದಿಂದಲೂ ವಾಸುವಿನ ಭುಜಗಳನ್ನು ಹಿಡಿದು ಅಲ್ಲಾಡಿಸಿದರು.

ವಾಸು ಹೇಳಿದ ಪ್ರತಿ ಮಾತನ್ನೂ ಆಸಕ್ತಿಯಿಂದ ಕೇಳಿದ ಗೋಪಾಲರಾವ್ "ನೀನೇನೋ ನಮ್ಮ ಅಕ್ಕನ ಮಗ ಅಂದ್ರೆ ! ವೆರಿಗುಡ್....ಶಭಾಷ್ ! ಮುಂದಕ್ಕೆ ಬರ್ತಿ ವಾಸು ! ಪ್ರಪಂಚದಲ್ಲಿ ಬದುಕೋದು ಹೇಗೆ ಅಂತ ನಿನಗ್ಗೊತ್ತು" ಎನ್ನುತ್ತಾ ಉತ್ಸಾಹದಿಂದ ಸಂತೋಷದಿಂದ ಹೊಗಳಿ, "ಹೋಗಿ ಮಲಕ್ಕೋ, ನಾಳೆ ಪ್ರಿನ್ಸಿಪಾಲ್‌ರವರನ್ನು ನೋಡೋಣ."

"ಯಾರಿಗೂ ತಿಳಿಸಬೇಡ ಮಾವ" ಎಂದ ಎದ್ದು ನಿಲ್ಲುತ್ತಾ.

"ಅತ್ತೆಗೆ ಮಾತ್ರ ತಿಳಿಸಬೇಕು. ಇಲ್ಲದೆ ಇದ್ರೆ ಸ್ವಲ್ಪ ತೊಂದರೆ, ಆದಷ್ಟು ಬೇಗ ನಿಮ್ಮ ತಂದೇನ ಹೋಗಿ ನೋಡ್ತೀನಿ" ಎಂದರು ಗೋಪಾಲರಾಯರು.

ಎಲ್ಲವನ್ನೂ ವಿವರವಾಗಿ ಗಂಡನಿಂದ ತಿಳಿದುಕೊಂಡ ಲಕ್ಷ್ಮಿ, "ಹುಡುಗ ಗಟ್ಟಿಗನೇ !" ಎಂದು ಹೇಳಿ ಕಣ್ಣುಗಳನ್ನರಳಿಸಿ ನಕ್ಕಳು.

o o o o

ಕಾಲೇಜಿನಿಂದ ಬಂದ ವಾಸುವನ್ನು "ನಿಮ್ಮ ತಂದೆಗೆ ಕಾಗದ ಬರೆದೆಯಾ ?" ಎಂದು ಕೇಳಿದರು ಗೋಪಾಲರಾವ್.

"ಹೇಗೆ ಬರೀಬೇಕೋ ?" ನಾಚಿದಂತೆ ಹೇಳಿದ ವಾಸು.

"ಶಾಭಾಷ್ ! ನಿಮ್ಮಪ್ಪನಿಗೆ ಸರಿಯಾದ ಮಗ ನೀನು : ತಂದೆ ಹತ್ತಿರಕ್ಕೆ ಹೋಗಿ ಸಂಧಿ ಮಾಡಿಕೊಳ್ಳೋದಕ್ಕೆ ಗೊತ್ತಾಯ್ತು. ಕಾಗದ ಬರೆಯೋದಕ್ಕೆ ಗೊತ್ತಾಗಲಿಲ್ವಾ ? ಕಾಲೇಜ್ ಸೇರಿದ್ದೀನಿ ಅಂತ ಬರಿ, ನಾನೂ ಬರೀತೀನಿ. ಆದರೂ ನೀನೂ ಬರೀಬೇಕು" ಎಚ್ಚರಿಸಿದರು ಗೋಪಾಲರಾಯರು.

"ಬರೀತೀನಿ, ಮಾವ ! ಬರೀಬೇಕು ಅಂದ್ಕೊಳ್ತಾನೇ ಇದ್ರೂ ಏನೋ ಬರೆಯೋದಕ್ಕೆ ಸಂಕೋಚ'' ಎಂದ ವಾಸು.

* * * *

ತಾನು ಒಂದು ವಾರದಿಂದ ಎದುರು ನೋಡುತ್ತಿದ್ದ ಕಾಗದ ಬರುವ ವೇಳೆಗೆ ಆತುರದಿಂದ ಕವರು ಒಡೆದು ನೋಡಿದರು ಪ್ರಸಾದ್‌ರಾವ್.

"ಪೂಜ್ಯರಾದ ಪ್ರಸಾದ್‌ರಾವ್ ಅವರಿಗೆ, ನಮಸ್ಕಾರಗಳು. ನಾನು ಸುಖವಾಗಿ ತಲಪಿದೆ. ಎಲ್ಲ ವಿಷಯವನ್ನೂ ಮಾವನಿಗೆ ತಿಳಿಸಿದೆ. ಮಾವ ಒಪ್ಪಿದ್ದಾರೆ. ಆದಷ್ಟು ಬೇಗ ನಿಮ್ಮನ್ನು ಬಂದು ನೋಡುವುದಾಗಿ ತಿಳಿಸು ಎಂದರು ನಾನು ಎರಡು ದಿನಗಳ ಕೆಳಗೆ ಕಾಲೇಜಿಗೆ ಸೇರಿದೆ. ಮಾವ ನಿಮಗೆ ಕಾಗದ ಬರೆದಿರಬೇಕು. ಈ ಕೆಳಗಿನ ಅಡ್ರೆಸ್ಸಿಗೆ ಕಾಗದ ಬರೆಯಿರಿ-ವಾಸು."

ನಿರ್ಲಿಪ್ತವಾಗಿ ಮತ್ತೊಮ್ಮೆ ಓದಿ ಭಾರವಾದ ನಿಟ್ಟುಸಿರು ಬಿಟ್ಟರು ಪ್ರಸಾದರಾವ್.

೦ ೦ ೦ ೦

"ಲೌ ಲೆಟರ್ಸ್ ಬರ್‍ತಿದೆಯೋ ನಮ್ಮವನಿಗೆ. ಇವನು ಕಾಲೇಜ್ ಸೇರಿದ ದಿನವೇ ಅಂದ್ಕೊಂಡ್ವಿ-ಇವನ ಫೇಸ್‌ಕಟ್, ಬಿಗುಮಾನ ನೋಡಿ ಅವನಿಗೆ ಹೀರೋ ಲಕ್ಷಣಗಳಿವೆ ಅಂತ. ಲೋ ! ಒಂದೇ ಸಲ....ಎರಡೇ ಎರಡು

ಪದ......ಆ ರೈಟಿಂಗ್ ಹೇಗಿದೆಯೋ......" ಸುತ್ತಲೂ ಸಹಪಾಠಿಗಳ ಗಲಾಟೆ. ಕೈಯಲ್ಲಿದ್ದ ಕಾಗದ ಕಿತ್ತುಕೊಳ್ಳಲು ಪ್ರಯತ್ನಿಸಿದರು.

"ನಮ್ಮ ದೊಡ್ಡಮಾವ ಕಾಲೇಜ್ ಅಡ್ರೆಸ್‌ಗೇ ಬರೀತಾರೆ. ಚಿಕ್ಕ ಮಾವನಿಗೂ ದೊಡ್ಡ ಮಾವನಿಗೂ ಸರಿಹೋಗೋದಿಲ್ಲ. ಅದಕ್ಕೋಸ್ಕರ ಕಾಲೇಜ್ ಅಡ್ರೆಸ್‌ಗೆ ಬರುತ್ತೆ ಕಾಗದ. ಎಲ್ಲರೂ ಒಂದು ಸಲ ನೋಡಿ, ಈ ಕಾಗದಾನ ಗಂಡಸಿನ ರೈಟಿಂಗೇ !" ಸರಿದಂತೆ ಎಲ್ಲರ ಮಧ್ಯೆ ನಿಂತು ಕಾಗದ ವನ್ನು ತೋರಿಸುತ್ತಾ ಹೇಳಿದ ವಾಸು.

"ಕೆಲವರು ಗಂಡಸರು ಹೆಂಗಸರಂತೆ, ಕೆಲವು ಹುಡುಗಿಯರು ಗಂಡಸರಂತೆ ಬರಿಯಬಲ್ಲರಂತೆ !" ಕೀಚಲು ಧ್ವನಿ ಕೇಳಿಸಿತು ಹುಡುಗರ ಮಧ್ಯೆ.

"ಪ್ಲೀಸ್..... ಬ್ರದರ್ಸ್..... ಈವತ್ತು ಬಿಟ್ಬಿಡಿ. ಇನ್ನೊಂದು ಸಲ ಬರೋ ಕಾಗದವನ್ನು ಮೊದಲು ನೀವು ಓದಿ ಆಮೇಲೆ ನನಗೆ ಕೊಡ್ತೀರಂತೆ. ಟಾ ! ಟಾ ! ಬೈ ! ಬೈ !" ಎನ್ನುತ್ತಾ ಎಲ್ಲರಿಂದ ತಪ್ಪಿಸಿಕೊಂಡು ಓಡಿದ.

"ಪ್ರಿಯಾತಿ ಪ್ರಿಯನಾದ ವಾಸುವಿಗೆ ಅದೃಷ್ಟಹೀನನಾದ ನಿನ್ನ ತಂದೆ ಆಶೀರ್ವದಿಸಿ ಬರೆಯುವುದೇನೆಂದರೆ, ಮಗೂ—

ನಿನ್ನ ಕಾಗದ ನನಗೆ ಎಂತಹ ಸಂತೋಷವನ್ನು ಕೊಡುತ್ತದೋ, ನನ್ನ ಹೃದಯದಲ್ಲಿ ಎಂತಹ ಸಂಚಲನೆಯುಂಟಾಗುತ್ತದೋ ಎಂದು ಎದುರುನೋಡು ತ್ತಿದ್ದ ನನಗೆ ನಿನ್ನ ಕಾಗದ ಓದಿದ ಮೇಲೆ ನಾಚಿಗೆ ಎನ್ನಿಸಿತು. ಅಪ್ಪಾ ! ಎಂದು ನನ್ನನ್ನು ಸಂಬೋಧಿಸಲಾಗದ ನನ್ನ ಮಗನ ವಿಷಯದಲ್ಲಿ ನನ್ನ ಅಪ ರಾಧಗಳೇನಿವೆಯೋ ಎಂದು ನನ್ನ ಗತಜೀವಿತ ಪುಟಗಳನ್ನು ತಿರುವಿಹಾಕಿದೆ. ಬಲವತ್ತರವಾದ ವಿಧಿ ನಮ್ಮನ್ನು ಈ ರೀತಿ ದೂರಮಾಡಿದೆಯೆಂದು ಸಮರ್ಥಿಸಿ ಕೊಂಡು ಅಸಹಾಯಕತೆಯಿಂದ ತೃಪ್ತಿಪಟ್ಟೆ.

ನೀನು ಹುಟ್ಟಿದಾಗ ನಾನೇನೋ ವಿಜಯ ಸಾಧಿಸಿದಂತೆ ಉಬ್ಬಿಹೋದೆ, ನಾನೇ ಮಹಾ ಅದೃಷ್ಟವಂತನೆಂದು ಗರ್ವಪಟ್ಟೆ. "ಅಪ್ಪಾ" ಎನ್ನುವ ನಿನ್ನ ಮಧುರವಾಣಿಯನ್ನು ಕೇಳದೆಯೇ ನಿನಗೆ ದೂರವಾದೆ. ನಿನ್ನ ಎಳೆಯ ಮನಸ್ಸಿ ನಲ್ಲಿ ವಿಷಬೀಜ ನೆಡಬೇಕೆಂಬ ಮನಸ್ಸು ನನ್ನದಲ್ಲ. ನಿಮ್ಮ ಅಮ್ಮ ಒಳ್ಳೆಯ ವಳೇ, ಎಲ್ಲರೂ ಒಳ್ಳೆಯವರೇ, ಆದರಿಂದಲೇ ಇಷ್ಟು ವರ್ಷದ ನಂತರ ನಾನೂ ನೀನೂ ಹೀಗೆ ಸೇರಿದಿವಿ,

ಬೇಕಾದ ಪುಸ್ತಕಗಳನ್ನೆಲ್ಲಾ ಕೊಂಡೆಯಾ? ಹಣ ಬೇಕಾದರೆ ಬರಿ. ಎಲ್ಲರ ಕ್ಷೇಮ ಸಮಾಚಾರಕ್ಕೂ ಕಾಗದ ಬರಿ–ನಿನ್ನ ಕಾಗದವನ್ನೇ ಎದುರು ನೋಡುತ್ತಿರುತ್ತೇನೆ.

ಇಂತಿ,
ಪ್ರಸಾದ್‌ರಾವ್."

ಓದಿದ ನಂತರ ಕಾಗದ ಮಡಿಸಿ ಭದ್ರವಾಗಿ ಮುಚ್ಚಿಟ್ಟು ಒಡನೆಯೇ ಉತ್ತರ ಬರೆದ ವಾಸು.

ಆತುರವಾಗಿ ಕವರನ್ನು ಬಿಚ್ಚಿ ಓದಿದ ಪ್ರಸಾದ್‌ರಾವ್ ಹೃದಯ ಉಬ್ಬಿ ಹೋಯಿತು. ತೃಪ್ತಿಯಿಂದ ಹಾಯಾಗಿ ನಿರಾಳವಾದ ಉಸಿರುಬಿಟ್ಟು ತುಟಿಯಲ್ಲಿ ಮಂದಹಾಸ ಬಿರಿಯುತ್ತಿದ್ದರೆ, ಮಮತೆ ಮನಸ್ಸನ್ನು ತುಂಬಿ, ಕಣ್ಣುಗಳು ತೇವವಾಗುತ್ತಿದ್ದರೆ ಇನ್ನೊಮ್ಮೆ ಕಾಗದ ಓದಿದರು ಪ್ರಸಾದರಾವ್.

"ಪೂಜ್ಯರಾದ ತಂದೆಯವರಿಗೆ, ನಿಮ್ಮ ಮಗ ವಾಸು ನಮಸ್ಕರಿಸಿ ಬರೆಯುವುದೇನೆಂದರೆ, ನಾವೆಲ್ಲಾ ಇಲ್ಲಿ ಕ್ಷೇಮ. ನೀವು ಅಲ್ಲಿ ಕ್ಷೇಮದಿಂದಿರುವಿರೆಂದು ಭಾವಿಸುತ್ತೇನೆ.

ಹಿಂದೆ ನಾನು ಬರೆದ ಕಾಗದ ನೋಡಿ ನಿಮ್ಮ ಮನಸ್ಸಿಗೆ ನೋವಾಗಿದೆಯೆಂದು ಗ್ರಹಿಸಿದೆ. ನಿಮಗೆ ಹೇಗೆ ಕಾಗದ ಬರೆಯಬೇಕೋ ತಿಳಿಯದೆ, ಅಭ್ಯಾಸವಿಲ್ಲವೆ ಹಾಗೆ ಬರೆದುದಕ್ಕೆ ಕ್ಷಮಿಸಬೇಕೆಂದು ಪ್ರಾರ್ಥನೆ. ಹುಟ್ಟಿದಂದಿನಿಂದ ಪಿತೃಪ್ರೇಮವೆಂತಹುದೋ ತಿಳಿಯದ ದುರದೃಷ್ಟಶಾಲಿ ನಾನು......ಇಲ್ಲವೆನ್ನುವಿರಾ? ಈಗ ನನಗೆ ಆ ಪ್ರೇಮ ಲಭಿಸಿದೆ. ನನಗೆ ಬೇಕಾದದು ಇನ್ನೇನೂ ಇಲ್ಲ. ನನಗೇನೊ ಬಹಳ ಗರ್ವವಾಗಿಯೂ ಧೈರ್ಯವಾಗಿಯೂ ಇದೆ, ಅಪ್ಪಾ! ಒಬ್ಬರ ಆಸರೆಯಲ್ಲಿ ಬದುಕಬೇಕಾದವನು ಎಂದುಕೊಂಡಿದ್ದ ನನಗೆ ಇನ್ನು ಮುಂದೆ ಅಂತಹ ಅಗತ್ಯವಿಲ್ಲ. ತಾಯಿ ತಂದೆ ಇರುವ ಮಕ್ಕಳು ಇರುವಂತೆ ಇನ್ನು ಮುಂದೆ ನಾನೂ ಜೀವಿಸಬಲ್ಲೆ. ಹೇಗೆ ಹೇಳಬೇಕೋ ನನಗೆ ತಿಳಿಯದು. ನನಗೇನೋ ತುಂಬ ಧೈರ್ಯ ಅಪ್ಪಾ!

ನೀವು ಕೊಟ್ಟ ಹಣವನ್ನು ಮಾವನಿಗೆ ಕೊಟ್ಟೆ. ಫೀಸ್ ಕಟ್ಟಿ ಪುಸ್ತಕಗಳನ್ನು ತಂದ ಕೊಟ್ಟಿದ್ದಾರೆ, ಇನ್ನೂ ಹಣ ಇದೆ. ಮಿಕ್ಕ ಪುಸ್ತಕಗಳನ್ನೂ

ತೆಗೆದುಕೊಳ್ಳುತ್ತೇನೆ ಈಗ ಹಣ ಏನೂ ಬೇಕಾಗಿಲ್ಲ. ನಿಮ್ಮ ಯೋಗಕ್ಷೇಮಕ್ಕೆ ಕಾಗದ ಬರೆಯಿರಿ. ತಪ್ಪುಗಳಿದ್ದರೆ ಕ್ಷಮಿಸಬೇಕೆಂದು ಪ್ರಾರ್ಥನೆ.

ಇಂತಿ,
ನಿಮ್ಮ ಮಗ ವಾಸು."

೦ ೦ ೦ ೦

"ಕಾಫಿ" ! ದೊಪ್ಪನೆ ಲೋಟವನ್ನು ಟೇಬಲ್ ಮೇಲಿಟ್ಟು ವಾಸುವಿನ ಕಡೆ ನೋಡಿದಳು ಪದ್ಮಜ.

ಅಂದಿನವರೆಗೂ ತನ್ನೊಡನೆ ಮಾತನಾಡದಿದ್ದ ಪದ್ಮಜ ಮುಖ ನೋಡಿ ಬೆದರುತ್ತಾ ಲೋಟ ತೆಗೆದುಕೊಂಡು, "ಅತ್ತೆ.." ಎಂದ. ಆ ಹುಡುಗಿಯ ಕಣ್ಣುಗಳೊಂದಿಗೆ ಬೆರೆತಿದ್ದ ತನ್ನ ಕಣ್ಣುಗಳನ್ನು ಬೇರೆಡೆ ತಿರುಗಿಸಿ.

"ಅತ್ತೆಗೆ ಜ್ವರ."

"ಜ್ವರಾನಾ ?" ಹೊರಡುತ್ತಿದ್ದ ಪದ್ಮಜ ಕಡೆ ಒಂದು ಕ್ಷಣ ನೋಡಿ ತಾನೂ ಅವಳ ಹಿಂದೆ ಹೋದ.

"ಅತ್ತೆ" ಆಪ್ಯಾಯತೆಯಿಂದ ಕೂಡಿದ ಕರೆ. ಪಕ್ಕಕ್ಕೆ ತಿರುಗುತ್ತಾ ಕಣ್ಣುಗಳನ್ನು ಉಜ್ಜಿಕೊಳ್ಳುತ್ತಾ, "ನೀನಾ ! ಕಾಫಿ ಕುಡಿದೆಯಾ ?" ಎಂದು ಪ್ರಶ್ನಿಸಿದಳು ಲಕ್ಷ್ಮಿ.

"ಊಂ. ಹೇಗಿದೆ ಅತ್ತೆ. ಜ್ವರಾನಾ ?" ಅದೇ ಕಳವಳ ತುಂಬಿದ ಧ್ವನಿ. "ಪರವಾಗಿಲ್ಲ..... ನಾಳೆಗೆ ಕಡಿಮೆ ಆಗಿಹೋಗುತ್ತೆ" ಮುಗುಳ್ನಕ್ಕಳು.

"ಚಿಕ್ಕ ಹುಡುಗಿ, ಅವಳೇನು ಅಡಿಗೆ ಮಾಡ್ತಾಳೆ. ನಾ ಮಾಡ್ತೀನಿ, ಅವಳನ್ನ ಕರಿ. ನಿನ್ನ ಹತ್ರ ಇರಲಿ," ತಡವರಿಸುತ್ತಾ ಹೇಳಿದ ವಾಸು.

"ಹದಿಮೂರು ವರುಷದ ಹುಡುಗಿ ಚಿಕ್ಕವಳಾ ? ಅಡಿಗೆ ಮಾಡಲಾರಳಾ ? ಪರವಾಗಿಲ್ಲ. ಅವಳಿಗೆ ಅಡಿಗೆ ಮಾಡೋದಕ್ಕೆ ಬರುತ್ತೆ." ನಕ್ಕಳು ಲಕ್ಷ್ಮಿ.

ಕ್ಷಣ ಮೌನದಿಂದಿದ್ದು ನಿಧಾನವಾಗಿ, "ನಿಮ್ಮ ತಾಯಿಗೆ ಕಾಲೇಜಿಗೆ ಸೇರಿದ ವಿಷಯ ಕಾಗದ ಬರೆದೆಯಾ ?" ಎಂದು ಕೇಳಿದಳು,

"ಬರೆದೆ ಅತ್ತೆ ! ಮಾವ ಕೂಡ ಬರೆದಿದ್ದಾರೆ, ಇನ್ನೂ ಜವಾಬು ಬಂದಿಲ್ಲ, ಅಲ್ವಾ ?"

"ಈವತ್ತೋ ನಾಳೆನೋ ಬರುತ್ತೆ ಬಿಡು." ಸುಸ್ತಾಗಿ ಕಣ್ಣು ಮುಚ್ಚಿದಳು ಲಕ್ಷ್ಮಿ.

o o o o

ಸ್ಟವ್ ಮೇಲಿದ್ದ ಹಾಲು ಉಕ್ಕುತ್ತಿರಲು ಅವಸರದಿಂದ ಲಂಗದ ನೆರಿಗೆ ಹಿಡಿದು ಹಾಲಿನ ಪಾತ್ರೆ ಇಳಿಸಲು ಹೊರಟಿದ್ದ ಪದ್ಮಜ ಯಾರೋ ಭುಜ ಹಿಡಿದು ಹಿಂದಕ್ಕೆ ಎಳೆದದ್ದರಿಂದ ಭಯಪಟ್ಟು ಹಿಂದಿರುಗಿ ನೋಡಿದಳು.

"ಅದೇನ್ ಕೆಲ್ಸ ?" ವಾಸುವಿನ ಪ್ರಶ್ನೆ.

"ಮತ್ತೆ ಮತ್ತೆ....." ಅವನ ಮುಖ ನೋಡಿ ನಾಚಿ ತಲೆ ತಗ್ಗಿಸಿದಳು.

"ಮತ್ತೆ......ಮತ್ತೆ ನಿನ್ ಮುಖ ! ಏಳು ಸ್ಟವ್ ಆರಿಹೋಗಿದೆ."

ಹಾಲಿನ ಪಾತ್ರೆ ಇಳಿಸಿ, ಪುನಃ ಸ್ಟವ್ ಹತ್ತಿಸಿ, "ಅಡಿಗೆ ಏನ್ಮಾಡ್ಬೇಕು ಅಂದ್ಕೊಂಡಿದ್ದೀ ?" ಎಂದು ಕೇಳಿ ಮುಗುಳ್ನಕ್ಕ.

"ಯಾಕೆ ? ನೀವ್ಮಾಡ್ತೀಯಾ ?" ತಾನೂ ಮುಸಿ ನಕ್ಕಳು ಪದ್ಮಜ.

"ಹೌದು."

"ಓಹೋ, ಹಾಗಾದರೆ ಅಲ್ಲಿರೋ ಬಟಾಣಿ ಬಿಡಿಸಿ, ಹುಳಿ, ಕೋಬಿ ಚಟ್ನಿ, ಸಾರು ಮಾಡು. ಆಮೇಲೆ ಊಟದ ಹೊತ್ತಿನಲ್ಲಿ ಸಂಡಿಗೆ ಕರೀತೀಯಂತೆ" ಎನ್ನುತ್ತಾ ಅಡಿಗೆ ಮನೆಯಿಂದ ಹೊರಟುಹೋಗುತ್ತಿದ್ದ ಪದ್ಮಜಳ ಕಡೆ ನಿಶ್ಚೇಷ್ಟನಾಗಿ ನಿಂತು ನೋಡುತ್ತಾ, "ಅಬ್ಬ ಇಷ್ಟು ಐಟಮ್ಸ್ ಮಾಡಬೇಕಾ" ಎಂದ ವಾಸು.

"ಐ. ಎ. ಎಸ್. ಓದೋದಕ್ಕಿಂತ ಸುಲಭವೇ" ಕಿಲಕಿಲ ನಕ್ಕು ಹಿಂದಿರುಗಿ ನಿಂತ ಪದ್ಮಜಳ ಕಡೆ ಉದಾಸೀನವಾಗಿ ನೋಡಿದ ವಾಸು. ಮರುಕ್ಷಣವೇ ಅಸಹನೆಯಿಂದ "ಪದ್ಮಜಾ !" ಎಂದ ವಾಸು ಕಳೆಗುಂದಿದ ಮುಖದಿಂದ.

"ಮತ್ತೆ ಗಂಡಸರು ಅಡಿಗೆ ಒಲೆ ಮುಂದೆ ಯಾಕೆ ಬರ್ಬೇಕು ? ಏಳು. ನಾ ಹೇಗೋ ಮಾಡ್ತೀನಿ" ಎನ್ನುತ್ತಾ ಸ್ಟವ್ ಮೇಲೆ ನೀರಿನ ಪಾತ್ರೆ ಇಟ್ಟಳು ಪದ್ಮಜ.

"ಗಂಡಸರು ಅಡಿಗೆ ಕೆಲಸ ಮಾಡೋದಕ್ಕೆ ಬರಬಾರ್ದು ಅನ್ನೋ ರೂಲ್ಸು ಎಲ್ಲೂ ಇಲ್ಲವಾಗಿ ನಾನು ಸಹಾಯ ಮಾಡಿದರೆ ಬೇಗ ಅಡಿಗೆ ಆಗುತ್ತೆ ಅಂತ ನನಗೇನಾದರೂ ಹೇಳು" ಎಂದ ವಾಸು.

ಚಟ್ನಿಗೆ ರುಬ್ಬುತ್ತಿದ್ದ ವಾಸುವಿನ ಕಡೆ ನೋಡಿ ಪಕಪಕನೆ ನಕ್ಕರು ಗೋಪಾಲರಾವ್.

"ನಗ್ತಿದ್ದೀಯಾ ? ಈವತ್ತು ಅಡಿಗೆ ಹೇಗಿರುತ್ತೊ ರುಚಿ ನೋಡ್ತಿಯಲ್ಲಾ......ಆಗ ಹೇಳು" ಎನ್ನುತ್ತಾ ತಾನೂ ನಕ್ಕ ವಾಸು.

ತನಗೆ ಜ್ವರ ಬಂದು ಮಲಗಿದ್ದ ಎರಡು ದಿನವೂ ಮನೆಯಲ್ಲಿ ಹೆಣ್ಣು ಹುಡುಗಿಯಂತೆ ಎಲ್ಲ ಕೆಲಸಗಳನ್ನೂ ಮಾಡುತ್ತಿದ್ದ ವಾಸುವನ್ನು ಆಪ್ಯಾಯತೆಯಿಂದ ನೋಡಿ "ಎಷ್ಟು ಒಳ್ಳೆ ಹುಡುಗ" ಎಂದುಕೊಂಡಳು ಲಕ್ಷ್ಮಿ. "ಬಹಳ ಒಳ್ಳೆಯವನು" ಎಂದುಕೊಂಡಳು ಪದ್ಮಜ, "ಬದುಕೋ ಮಾರ್ಗ ತಿಳಿದವನು" ಎಂದುಕೊಂಡರು ಗೋಪಾಲರಾವ್, "ನನಗೆ ಮೊಸರು ಹಾಕಿದ್ದಿ. ಎಲ್ಲರಿಗಿಂತ ನೀನೇ ಒಳ್ಳೆವ್ರು" ಎಂದು ಹೊಗಳಿದ ಗೋಪಾಲರಾವ್ ಮಗ ಶೀನು.

o o o o

"ನಿಮ್ಮ ತಂದೆಯಿಂದ ನಿನ್ನ ಕಾಗದಕ್ಕೆ ಜವಾಬ್ ಬಂತಾ ?" ಕೇಳಿದರು ಗೋಪಾಲರಾವ್.

ಹೌದು, ಪ್ರಸಾದ್‌ರಾವ್ ಕಾಗದ ಬಂದು ನಾಲ್ಕು ದಿನಗಳಾದವು. ತಾನಿನ್ನೂ ಜವಾಬು ಬರೆದಿರಲಿಲ್ಲ. ಮರೆತುಹೋದದ್ದೇನೋ ಜ್ಞಾಪಕ ಬಂದಂತೆ ತಾನೇನೋ ತಪ್ಪುಮಾಡಿದಂತೆ ಸಂಕಟಪಡುತ್ತಾ, "ಆಂ ಬಂತು ಮಾವ ! ಮಾಮೂಲು ಯೋಗಕ್ಷೇಮವೆ" ಎಂದ ವಾಸು.

"ನಿಮ್ಮ ಅಮ್ಮ ಕಾಗದ ಬರೆದಿದ್ದರಾ ?"

"ಮನೆ ಅಡ್ರೆಸ್‌ಗೆ ಬರ್ಬೇಕು, ಕಾಲೇಜ್ ಅಡ್ರೆಸ್‌ಗೆ ಬರೆಯೋದಿಲ್ವಲ್ಲಾ ಅಮ್ಮ !"

"ಒಂದು ವೇಳೆ ಅಮ್ಮ ಕಾಗದ ಬರೆಯೋದು ನಿಧಾನವಾದ್ರೂ ನೀನು ಬರೀತಾ ಇರು. ಅಪ್ಪ ಸಿಕ್ಕಿದರೂಂತ ಅಮ್ಮನ್ನ ಮರೆತುಬಿಡಬೇಡ." ಹಾಸ್ಯ ಮಾಡಿ ನಕ್ಕರು ಗೋಪಾಲರಾವ್,

"ಅವರನ್ನ ಒಂದ್ಸಲ ನೀವು ನೋಡಬೇಕೂಂತ ಹೇಳು ಎಂದು ಬರೆದಿದ್ದಾರೆ ಅಪ್ಪ."

"ಇನ್ನೇನು ಬರೆದಿದ್ದಾರೆ !" ಉತ್ಸುಕತೆಯಿಂದ ಕೇಳಿದರು ಗೋಪಾಲ್‌ರಾವ್ "ಅವರಿಗೆ ನಮ್ಮ ಮನೆ ವಿಷಯಗಳೊಂದೂ ಗೊತ್ತಿಲ್ಲ ಅಲ್ವಾ ?" ಯಾರೆಲ್ಲಿದ್ದಾರೆ ? ಎಷ್ಟೆಷ್ಟು ಜನ ಮಕ್ಕಳು ? ಅನ್ನೊ ಪ್ರಶ್ನೆಗಳೇ ಕಾಗದದ ತುಂಬಾ."

"ಆನ್ಸರ್ ಬರೆದುಬಿಡು ! ಜವಾಬಿನ್ನೂ ಬರೀಲಿಲ್ವಾ ?" ನಕ್ಕರು ಗೋಪಾಲರಾವ್.

"ಇನ್ನೂ ಇಲ್ಲ ಈವತ್ತು ಬರೀತೀನಿ"

"ಸಾಧ್ಯವಾದಷ್ಟು ಬೇಗ ಬರ್ತಾರಂತೆ ಅಂತ ಬರಿ" ಎಂದರು ಗೋಪಾಲರಾವ್.

೦ ೦ ೦ ೦

ಮಾರನೆಯ ದಿನ ತಾನು ಸುಖವಾಗಿರುವುದಾಗಿಯೂ, ಅತ್ತೆ ಮಾವ ತನ್ನನ್ನು ಚೆನ್ನಾಗಿ ನೋಡಿಕೊಳ್ಳುತ್ತಿರುವುದಾಗಿಯೂ, ತಾನೂ ಚೆನ್ನಾಗಿ ಓದುತ್ತಿರುವುದಾಗಿಯೂ ತಿಳಿಸಿ ತನ್ನ ವಿಷಯದಲ್ಲಿ ಯಾವ ಯೋಚನೆಯನ್ನೂ ಇಟ್ಟುಕೊಳ್ಳಬಾರದೆಂದು ಮಧುಮತಿಗೆ ಬರೆದು, ಪ್ರಸಾದ್‌ರಾವ್ ಬರೆದ ಕಾಗದವನ್ನು ಮತ್ತೊಮ್ಮೆ ಓದಿಕೊಂಡ.

ಈ ಸಲ ಬರೆದ ಕಾಗದದಲ್ಲಿ, ನಿಮ್ಮ ಅಜ್ಜಿ ಚೆನ್ನಾಗಿದ್ದಾರಾ ? ಎಂದು ಬರೆದು ಕುಟುಂಬದ ವಿಷಯ, ನಿಮ್ಮ ಮಾವಂದಿರಿಗೆ ಎಷ್ಟು ಜನ ಮಕ್ಕಳು ? ರಾಜಶೇಖರನ ಮಕ್ಕಳು ಏನು ಓದುತ್ತಿದ್ದಾರೆ ? ಅವನಲ್ಲಿದ್ದಾನೆ ಎಂದೆಲ್ಲಾ ವಿಚಾರಿಸಿಕೊಂಡಿದ್ದ ತಂದೆ ಮಧುಮತಿಯ ವಿಷಯವನ್ನೇ ಎತ್ತದೆ ಇದ್ದುದನ್ನು ನೋಡಿ ಮನಸ್ಸು ಕಳಕ್ ಎಂದಿತು. ಎಲ್ಲ ವಿಷಯಗಳಿಗೂ ಜವಾಬು ಬರೆಯುತ್ತಾ, "ಅಪ್ಪಾ, ನೀವು ಹರಿದುಕೊಂಡ ಬಂಧನವನ್ನು ನಾನು ಗಂಟು ಹಾಕುತ್ತಿರುವಂತೆ ತೋರುತ್ತಿದೆ ! ನಿಮ್ಮ ಮಧ್ಯೆ ನಾನಿಲ್ಲದೆ ಇದ್ದಿದ್ದರೆ ಅಮ್ಮಾ ನೀವು ಪ್ರಶಾಂತ ಜೀವನ ನಡೆಸುತ್ತಿದ್ದರೋ ಏನೋ ! ಎನ್ನಿಸುತ್ತಿದೆ ನನಗೆ. ನಾನು ಕ್ಷೇಮ. ಅಮ್ಮನಿಗೂ ಈ ದಿನ ಉತ್ತರ ಬರೆಯುತ್ತಿದ್ದೇನೆ. ನಿಮ್ಮ ಖ್ಯಾತಿನಂತೆ ಮಾವನಿಗೆ ವಿನಹ ಯಾರಿಗೂ ನಿಮ್ಮ ವಿಷಯವನ್ನು ತಿಳಿಸಲಾರೆ.

ನಾಲ್ಕೈದು ದಿನಗಳಲ್ಲಿ ನಿಮ್ಮ ಊರಿಗೆ ಬರುತ್ತೇನೆಂದು ಹೇಳಿದ್ದಾರೆ ಮಾವ" ಎಂದು ಬರೆದು ಪೋಸ್ಟ್ ಮಾಡಿದ ವಾಸು.

೦ ೦ ೦ ೦

ಅಕೌಂಟ್ಸ್ ನೋಡುತ್ತಿದ್ದ ಪ್ರಸಾದ್‌ರಾವ್ "ಪ್ರಸಾದ್‌ರಾವ್ ಇದ್ದಾರಾ ?" ಎಂಬ ಧ್ವನಿ ಕೇಳಿ ತಲೆ ಎತ್ತಿ ನೋಡಿ, ಸಂಭ್ರಮದಿಂದ "ಬಾ, ಗೋಪಾಲಾ, ನೀನಾ" ಎನ್ನುತ್ತಾ ಎದ್ದು ನಿಂತು ಆಗಂತುಕನನ್ನು ಎದುರುಗೊಳ್ಳಲು ಹೊರಟರು.

ಸಂತೋಷ, ವಿಷಾದ ಇನ್ನೂ ಏನೇನೋ ಭಾವನೆಗಳು ಇಬ್ಬರ ಮುಖಗಳಲ್ಲೂ ಲಾಸ್ಯವಾಡಿದವು. ಎರಡು ಕ್ಷಣ ಸ್ನೇಹಪೂರ್ವಕವಾಗಿ ಕೈ ಮುಂದಕ್ಕೆ ಚಾಚಿದರು ಗೋಪಾಲರಾವ್. ಒಡನೆಯೇ ಆ ಕೈಯನ್ನು ತನ್ನ ಕೈಯಲ್ಲಿ ಗಟ್ಟಿಯಾಗಿ ಹಿಡಿದುಕೊಂಡು, "ಬಾ, ಮನೆಗೆ ಹೋಗೋಣ" ಎನ್ನುತ್ತಾ ಮುಂದೆ ನಡೆದರು ಪ್ರಸಾದ್‌ರಾವ್. ಇಬ್ಬರ ಹೃದಯಗಳೂ ಭಾರವಾಗಿದ್ದವು. ಯಾರು ಮುಂಚೆ ಮಾತನಾಡಬೇಕೋ ಏನು ಮಾತನಾಡಬೇಕೋ ಅರ್ಥವಾಗದೆ ಇಬ್ಬರೂ ಒದ್ದಾಡುತ್ತಿದ್ದರು.

ಬೀಗ ಹಾಕಿದ ಮನೆಯ ಮುಂದೆ ನಿಂತ ಗೋಪಾಲ್‌ರಾವ್ "ಅಕೆ ಮನೇಲ್ಲಿಲ್ವಾ ?'' ಎಂದು ತನ್ನರಿವಿಲ್ಲದೆಯೋ ಪ್ರಶ್ನಿಸಿದರು.

"ಯಾರು ?" ಎಂದು ಒಡನೆಯೇ ಪಕಪಕನೆ ನಕ್ಕು ಆಕೇನೂ ಇಲ್ಲ ಯಾರೂ ಇಲ್ಲ. ಭಯಪಡಬೇಡ ಎನ್ನುತ್ತಾ" ಬೀಗ ತಗೆದು ಒಳಗೆ ಹೋಗಿ "ಬಾ ಕೂತ್ಕೋ" ಎಂದರು ಪ್ರಸಾದ್‌ರಾವ್ ಕುರ್ಚಿ ತೋರಿಸುತ್ತಾ.

ಕುಶಲಪ್ರಶ್ನೆಗಳೂ, ಉಚಿತ ಮರ್ಯಾದೆ ನಡೆದನಂತರ, "ಒಂದು ಗಂಟೆಯೊಳಗಾಗಿ ವಾಪಸ್ ಬರುತ್ತೇನೆ. ನನಗೆ ತಿಳಿದವರೊಬ್ಬರು ಸಿಕ್ಕಿ ಕರೆದಿದ್ದಾರೆ ನೀವು ಮನೆಯಿಂದ ಹೊರಟುಹೋದ ದಿನ ನನಗೆ ಚೆನ್ನಾಗಿ ಜ್ಞಾಪಕವಿದೆ. ಆದಕ್ಕೆ ಮೊದಲು ನಾನು ಊರಲ್ಲಿರಲಿಲ್ಲವಲ್ಲಾ ! ನಮ್ಮವರು ಮಾತನಾಡಿಕೊಳ್ಳುತ್ತಿದ್ದ ಕೆಲವು ಮಾತುಗಳನ್ನು ಮಾತ್ರ ಕೇಳಿದ್ದೇನೆ. ಕಾರಣ ಇದೇ ಎಂದು ಇಂದಿನವರೆಗೂ ತಿಳಿಯದು. ಪುನಃ ಮಾತನಾಡೋಣ, ನಾಳೆ ಬೆಳಿಗ್ಗೆ ಊರಿಗೆ ಹೋಗುತ್ತೇನೆ" ಎನ್ನುತ್ತಾ ಎದ್ದು ನಿಂತರು ಗೋಪಾಲರಾವ್.

ತಾನು ಆ ಮನೆಯಿಂದ ಹೊರಬಿದ್ದ ದಿನ ಚೆನ್ನಾಗಿಜ್ಞಾಪಕವಿದೆಯಂತೆ. ಏಕೆ ಜ್ಞಾಪಕವಿರುವುದಿಲ್ಲ ? ಪ್ರಸಾದ್‌ರಾದ್ ಹೃದಯ ಕಲಕಿಹೋಯಿತು. ಕಲೆತ ಮನಸ್ಸುಗಳು ಚೂರು-ಚೂರಾದ ದಿನ. ರಕ್ತಬಂಧನವನ್ನೂ, ವಿವಾಹ ಬಂಧನವನ್ನೂ ರದ್ದುಮಾಡಿ ತನ್ನನ್ನು ದೂರ ತಳ್ಳಿದ ದಿನ. ವಿಧಿ ತನ್ನನ್ನು ಅಣಗಿಸಿ ನಕ್ಕ ದಿನ. ಸಹಚಾರಿಣಿಯನ್ನು ಬಿಟ್ಟು ಒಂಟಿಯಾಗಿ ಕತ್ತಲಲ್ಲಿ ದಾರಿ ಹುಡುಕುತ್ತಾ ಭಿಕಾರಿಯಾಗಿ ಪ್ರಯಾಣ ಮಾಡಿದ ದಿನ. ಅರ್ಥವಿಲ್ಲದ ಅನುಮಾನಗಳಿಂದ ತನ್ನನ್ನು ವಕ್ರ ಮಾರ್ಗದಲ್ಲಿ ನಡೆಸಿ, ತನ್ನ ಪತನಕ್ಕೆ ಕಾರಣ ಭೂತಳಿಂದ ಹೆಂಡತಿಯ ಕಣ್ಣೀರು ತನ್ನನ್ನು ಬೀಳ್ಕೊಟ್ಟ ದಿನ...ಕೋಪದಿಂದ, ಭಾರವಾದ ಹೃದಯದಿಂದ ನೋವಿನ ನಿಟ್ಟುಸಿರು ಬಿಟ್ಟರು ಪ್ರಸಾದರಾವ್. ಅಂದಿನ ಜ್ಞಾಪಕ ಅವರ ಹೃದಯವನ್ನು ಇನ್ನೂ ಹಿಂಡುತ್ತಿತ್ತು.

೦ ೦ ೦ ೦

ಬೀದಿಯ ವರಾಂಡಾದಲ್ಲಿ ಹುಲಿಯಂತೆ ಅಸಹನೆಯಿಂದ, ಆಗ್ರಹದಿಂದ ಕೈಗಳನ್ನು ಕಟ್ಟಿಕೊಂಡು ರಭಸದಿಂದ ಶತಪಥ ತಿರುಗುತ್ತಿದ್ದರು ತಹಶೀಲ್ ದಾರ್ ವೆಂಕಟರಾಮಯ್ಯನವರು. ಸಂಜೆಯ ಹೊಂಬಿಸಿಲು ಬೆಳದಿಂಗಳಿನೋ ಪಾದಿ ವರಾಂಡಾದಲ್ಲಿ ಬಿದ್ದಿತ್ತು. ನಡುಮನೆಯ ಬಾಗಿಲು ಮುಂದೆ ಮಾಡಲ್ಪಟ್ಟಿತ್ತು. ಹೊರಗಿನಿಂದ ವರಾಂಡಕ್ಕೆ ಹತ್ತುವ ಮೆಟ್ಟಲಿನ ಮೇಲೆ ತುಂಬಿದ ಎರಡು ಪೆಟ್ಟಿಗಳೂ, ಸಣ್ಣ ಬೀರೂ ಇದ್ದವು. "ಮನೆ ಖಾಲಿ ಮಾಡಿ ಹೋಗುತ್ತಿದ್ದಾರೇನೋ ?" ಎಂದುಕೊಂಡರು ಬೀದಿಯಲ್ಲಿ ಹೋಗುತ್ತಿದ್ದ ಜನ.

"ನಿಲ್ಲು"....ಘರ್ಜನೆ ಕೇಳಿದ ಪ್ರಸಾದ್ ಮೆಟ್ಟಲಿನ ಬಳಿಯೇ ತಟಕ್ಕನೆ ನಿಂತು, ವೆಂಕಟರಾಮಯ್ಯನವರ ಕಡೆ ನೋಡಿ, ತಲೆ ತಗ್ಗಿಸಿ ಕೈ ಕಟ್ಟಿ ನಿಂತುಕೊಂಡ. ನಡುವೆಯ ಬಾಗಿಲುಗಳು ತೆಗೆದುಕೊಂಡವು. ಜಾನಕಮ್ಮ, ರಾಜಶೇಖರ, ಗೋಪಾಲ ಒಬ್ಬರ ಹಿಂದೆ ಒಬ್ಬರು ವರಾಂಡಾಗೆ ಬಂದರು. ಎಲ್ಲರ ಮುಖಗಳಲ್ಲಿಯೂ ಕೋಪ, ಅಸಹ್ಯ, ನೋವು.

"ನಾಲ್ಕು ಜನ ಸೇರಿ ನಗುವುದಕ್ಕೆ ಮೊದಲೇ ನಾಲ್ಕು ಬೈದು, ಹೋಗೂಂತ ಹೇಳಿ. ನನ್ನ ಮಗಳು ಇನ್ನು ಕಷ್ಟಪಡಲಾರಳು. ಅವಳಿಗೆ ಗಂಡಾನೂ ಬೇಡ, ಏನೂ ಬೇಡಾಂತ ಹೇಳಿ. ಪುನಃ ನಮಗೆ ಮುಖ ತೋರಿಸ

ಬೇಡ ಅಂತ ಹೇಳಿ." ಹೂತುಹೋಗುತ್ತಿರುವ ಧ್ವನಿಯಲ್ಲಿ ಹೇಳಿದರು ಜಾನಕಮ್ಮ.

"ಅಯೋಗ್ಯ ! ಅಪಾತ್ರದಾನ ಮಾಡಿದೆವು ...ಮದುವೇನೇ ಮಾಡಲಿಲ್ಲ. ಅಂದ್ಕೋತೀವಿ. ಸತ್ತುಹೋದ ಅಂದ್ಕೋತೀವಿ." ಅವರ ತುಟಿಗಳು ನಡುಗಿದವು. ಕಣ್ಣುಗಳು ಅಗ್ನಿಗೋಳಗಳಾಯ್ತು. ಪುನಃ ಇನ್ನೂ ರಭಸದಿಂದ ಶತಪಥ ತಿರುಗಲು ಪ್ರಾರಂಭಿಸಿದರು ವೆಂಕಟರಾಮಯ್ಯ. ಕೆಲವು ತಿಂಗಳಿನಿಂದ ಆಗಿದ್ದ ಗೃಹ ಛಿದ್ರದಿಂದ ಒಣಗಿಹೋಗಿದ್ದ ಮಧುಮತಿ, ಐದು ತಿಂಗಳ ಕಂದನನ್ನೆತ್ತಿಕೊಂಡು ನೀರು ತುಂಬಿದ ಕಣ್ಣುಗಳಿಂದ ಬೀದಿಯ ಕಡೆ ನೋಡುತ್ತಿದ್ದಳು. ಥಟಕ್ಕನೆ ಅವಳ ಕಡೆನೋಡಿದ ;ಪ್ರಸಾದ್ ಹೃದಯ ಕರಗಿ ನೀರಾಯಿತು.

"ನೆನ್ನೆ ಬರೆದ ಕಾಗದವನ್ನು ಅವನ ಮುಖದ ಮೇಲೆ ಬಿಸಾಕು, ಶನಿ ಬಿಡುಗಡೆಯಾಗುತ್ತೆ." ಅರಚಿಕೊಂಡರು ವೆಂಕಟರಾಮಯ್ಯ, ದುಃಖ ಪೂರಿತ ಧ್ವನಿಯಲ್ಲಿ. ಆ ಕ್ಷಣದಲ್ಲಿ ನಾಲ್ಕು ಜನ ಈ ರಂಪಾಟ ನೋಡುತ್ತಿದ್ದಾರೆಂಬ ಸಂಕೋಚವಾಗಲಿ, ತಾನು ಮಾಡುತ್ತಿರುವ ಈ ಕೆಲಸದ ಪರ್ಯವಸಾನ ಏನಾಗಬಹುದೆಂಬ ವಿವೇಚನೆಯಾಗಲೀ ಇಲ್ಲದೆಹೋಯಿತು ಆ ಪಿತೃ ಹೃದಯಕ್ಕೆ.

"ಯಾವ ಕಾಗದ ಅದು ?" ನಿಧಾನವಾಗಿ ಕೇಳಿದ ಪ್ರಸಾದ್.

"ವಿಚ್ಛೇದನ......ನಿನಗೆ, ನನ್ನ ಮಗಳಿಗೆ ಇಂದಿನಿಂದ ಸಂಬಂಧ ಇಲ್ಲ. ನೀನು ಆ ಶನೀನ ಮದುವೆ ಮಾಡಿಕೊಳ್ಳೋದಕ್ಕೆ ಅಭ್ಯಂತರವಿಲ್ಲ. ನನ್ನ ಮನೆಯಿಂದ ಹೊರಟ್ಹೋಗು." ಕೆಂಪಾದ ಕಣ್ಣುಗಳಿಂದ ಬೆಚ್ಚಗಿನ ನಡುಗುತ್ತಿದ್ದ ತುಟಿಗಳ ಮೇಲೆ ಜಾರಿದವು.

"ವಿಚ್ಛೇದನ ನಾನು ಕೇಳ್ಲಿಲ್ಲವಲ್ಲ ? ನಾನು ಇದಕ್ಕೆ ಒಪ್ಪೋದಿಲ್ಲ" ಅಷ್ಟೆ ನಿಧಾನವಾಗಿ ಕೇಳಿದ.

"ನೀನು ಕೇಳ್ಲಿಲ್ಲ......ಅವಳೇ ವಿಚ್ಛೇದನ ಬೇಕು ಅಂತ ಕೇಳಿದಾಳೆ. ಹೋಗು, ನಿನ್ನನ್ನು ಉದ್ಯೋಗದಿಂದ ಡಿಸ್‌ಮಿಸ್ ಮಾಡಿಸ್ತೀನಿ— ನಿನ್ನನ್ನ...... ನಿನ್ನನ್ನ......ನೀನು ತಹಶೀಲ್‌ದಾರ್ ವೆಂಕಟರಾಮಯ್ಯನ ಒಳ್ಳೇ ಗುಣಗಳನ್ನು ನೋಡಿರೋದು, ಇನ್ನು ಮುಂದೆ ವೆಂಕಟರಾಮಯ್ಯನ ಇನ್ನೊಂದು ಮುಖ ನೋಡುವೆಯಂತೆ."

ಕೋಪದಿಂದ, ಹುಚ್ಚುನಗೆ ನಕ್ಕರು ವೆಂಕಟರಾಮಯ್ಯ.

"ಏನ್ಮಾಡಿದರೂ ಪರವಾಗಿಲ್ಲ.'' ಮೊಂಡು ನಗೆ ನಕ್ಕ ಪ್ರಸಾದ್.

"ಬಿಸಾಕೇ ಆ ಕಾಗದ ಮಧೂ ! ತಗೊಡ್ಬಾ !" ಅದೇ ಆವೇಶದ ಧ್ವನಿ.

ಎರಡು ಕೈಗಳಲ್ಲೂ ಮುಖ ಮುಚ್ಚಿಕೊಂಡು ಗೊಳೋ ಎಂದತ್ತರು ಜಾನಕಮ್ಮ.

"ಛಿ ! ಛಿ ! ಬೇಡಮ್ಮ ಮಧು !" ಸಮಾಧಾನಪಡಿಸಿದ ರಾಜಶೇಖರ.

ವರಾಂಡಾಗೆ ಬಂದು ಒಂದು ಕಾಗದವನ್ನು ಪ್ರಸಾದ್ ಕಡೆಗೆಸೆದಳು. ರೋಷದಿಂದ, ನಿರ್ಲಕ್ಷ್ಯದಿಂದ. ಒಡನೆಯೇ ಹಿಂದಿರುಗಿ ಹೋಗುತ್ತಾ ನಡುವೆ ಹೊಸಲಲ್ಲಿ ನಿಂತು ಪ್ರಸಾದ್ ಕಡೆ ಒಂದು ಕ್ಷಣ ನೋಡಿ, ಕಂಕುಳಲ್ಲಿದ್ದ ಹಸುಗೂಸನ್ನು ಎದೆಗಪ್ಪಿಕೊಂಡು ಗೊಳೋ ಎಂದು ಅತ್ತಳು ಮಧುಮತಿ.

ನಿಧಾನವಾಗಿ ಬಗ್ಗಿ ಪ್ರಸಾದ್ ಆ ಕಾಗದವನ್ನು ಕೈಗೆ ತೆಗೆದುಕೊಳ್ಳುತ್ತಿದ್ದರೆ ಹುಚ್ಚು ಹಿಡಿದವರಂತೆ ಕೂಗಾಡಿದರು ವೆಂಕಟರಾಮಯ್ಯ.

"ಆ ಕಾಗದವನ್ನು ತೆಗೆದುಕೊಂಡು ನನ್ನ ಮನೆಯಿಂದ ಹೊರಟು ಹೋಗ್ತಿದ್ದೀಯಲ್ವಾ ? ಹೋಗು, ಹೋಗು ! ಆದರೆ......ನನ್ನ ಮಗಳ ಉಸಿರು.....ಅಬ್ಬಾ ! ಎದೆ ಉರಿದುಹೋಗ್ತಿದೆ. ತಲೆ ಸಿಡಿದುಹೋಗ್ತಿದೆ." ಮುಷ್ಟಿಯಿಂದ ಹಣೆಯನ್ನು ಗಟ್ಟಿಯಾಗಿ ಹೊಡೆದುಕೊಂಡು, ಎದೆಯನ್ನು ಬಲವಾಗಿ ಅದುಮಿಕೊಂಡರು.

ಸರಸರನೆ ಮೆಟ್ಟಿಲುಗಳನ್ನು ಹತ್ತಿ ವರಾಂಡಾಗೆ ಬಂದು ವೆಂಕಟರಾಮಯ್ಯನವರ ಎರಡು ಕೈಗಳನ್ನೂ ತನ್ನ ಕೈಗಳಲ್ಲಿ ಹಿಡಿದುಕೊಂಡು, "ಬೇಡಿ, ದುಃಖಪಡಬೇಡಿ, ಹೋಗೋದಿಲ್ಲ – ಎಲ್ಲಿಗೂ ಹೋಗೋದಿಲ್ಲ" ಎಂದರು ಕಂಪಿಸುವ ಸ್ವರದಲ್ಲಿ.

"ಇನ್ನೂ ನನ್ನ ಮನೇಲೇ ಇದ್ದು ನನ್ನ ಹೊಟ್ಟೆ ಉರಿ ಹೆಚ್ಚು ಮಾಡ್ತೀಯೋ ? ಹೋಗು....ಹೊರಟ್ಹೋಗು ! ನನ್ನ ಮನೆಯಿಂದ......ನನ್ನ ಮಗಳ ಜೀವನದಿಂದ" ಆಯಾಸಪಟ್ಟು ಹೋಗುತ್ತಿದ್ದರು. ಮೌನವಾಗಿ ರೋಧಿಸುತ್ತಿದ್ದರು ಜಾನಕಮ್ಮ, ಮಧುಮತಿ. ಪ್ರೇಕ್ಷಕರಾಗಿ ನೋಡುತ್ತಿದ್ದರು ರಾಜಶೇಖರ, ಗೋಪಾಲ.

"ಹೂಂ ! ಹೇಗೆ ಹೋಗಲಿ ? ನಿಮ್ಮ ಮನೆಯಿಂದ ಹೊರಟುಹೋಗಬಲ್ಲ

ನೇನೋ? ತಳ್ಳಬಲ್ಲಿರಿ. ಆದರೆ ನಿಮ್ಮ ಮನಸ್ಸಿನಿಂದ ಹೊರಟುಹೋಗ್ತೀನಾ? ಮಧು ಜೀವನದಿಂದ ನಾನು......" ಎಂದು ನಕ್ಕು, "ಅವಳಿಗೆ ಕಣ್ಮರೆಯಾಗಿ ಹೋಗಬಲ್ಲೆ. ಆದರೆ ಬದುಕಿರೋವರೆಗೂ ಹೇಗೆ ಮರೀತೀವಿ? ಆ ಸಂಭವ.... ನಮ್ಮಿಬ್ಬರ ಮಧ್ಯೆ ನಮ್ಮ ಪ್ರೇಮ....ವಿವಾಹ ಬಂಧನದ ಚಿಹ್ನೆಯಾಗಿ ಮಗು ಇದೆ" ಎನ್ನುತ್ತಾ, ಪರ ಪರ ಹರಿದು ಹಾಕಿದ ಆ ಕಾಗದವನ್ನು ಪ್ರಸಾದ್. ಅವನ ಕಣ್ಣುಗಳಲ್ಲಿ ನೀರು ತುಂಬಿತು.

ಭಾರವಾಗಿ ನಾಲ್ಕು ಹೆಜ್ಜೆ ಮುಂದೆ ಹಾಕಿ, ಮಧುಮತಿಯ ಕೈಯಲ್ಲಿದ್ದ ಮಗುವನ್ನು ಕೈಗೆ ತೆಗೆದುಕೊಂಡು ಮೃದುವಾಗಿ ಎದೆಗಪ್ಪಿಕೊಳ್ಳುತ್ತಾ ಗಟ್ಟಿಯಾಗಿ ಎರಡು ಕಣ್ಣುಗಳನ್ನೂ ಮುಚ್ಚಿಕೊಂಡ ಪ್ರಸಾದ್.

"ಕೊಡೆ, ಅದನ್ನೂ ಕೊಟ್ಬಿಡು. ಅದನ್ನು ಸಾಕೋ ಕಷ್ಟ ನಿನಗ್ಯಾಕೆ?"

"ಅಪ್ಪಾ?....." ಗೋಳೋ ಎಂದು ಅತ್ತಳು ಮಧುಮತಿ.

"ನಿನ್ನಿಂದ ಮಗೂನ ಬೇರೆ ಮಾಡೋ ಅಷ್ಟು ಕ್ರೂರೀನಾ? ಮಧು ನಾನು? ತಗೋ, ಮಗು ನಿನ್ನ ಹತ್ತಿರಾನೇ ಇರುತ್ತೆ." ಪ್ರಸಾದ್ ಕಣ್ಣುಗಳಲ್ಲಿ ಧಾರಾಕಾರವಾಗಿ ನೀರು ಸುರಿಯುತ್ತಿತ್ತು. ಆ ಹಸುಗೂಸನ್ನು ಎರಡು ಕೈಗಳಿಂದಲೂ ಹಿಡಿದು ಮೇಲಕ್ಕೆತ್ತಿ ಕಣ್ಣೀರಿನಿಂದ ತುಂಬಿ ಮಂಜಾದ ಕಣ್ಣುಗಳಿಂದ ಅದೇ ಕೊನೆಯ ನೋಟವೆಂಬಂತೆ ನೋಡಿ ಆ ಮಗುವಿನ ಎರಡು ಕೆನ್ನೆಗಳ ಮೇಲೆ ಮುತ್ತು ಕೊಟ್ಟು ಮಧುಮತಿಯ ಕೈಗೆ ಕೊಟ್ಟ.

ಎಷ್ಟೋ ದಿನಗಳಿಂದ ತನ್ನಿಂದ ದೂರವಾಗಿ ಹೋಗಿದ್ದ ಮಗು ಹಿಂದಕ್ಕೆ ಬಂದಂತೆ ತನ್ನ ಎದೆಗವಿಚಿಕೊಂಡಳು ಮಧುಮತಿ ಮಗುವನ್ನು.

''ಕೊಟ್ಬಿಡೇ! ಕೊಟ್ಬಿಡು'' ವೆಂಕಟರಾಮಯ್ಯನವರು ಘರ್ಜಿಸಿದರು. ಹೆದರುತ್ತಾ ವೆಂಕಟರಾಮಯ್ಯನವರ ಕಡೆ ನೋಡಿದಳು ಮಧುಮತಿ.

"ಬೇಡ, ಮಧೂ! ನಿನಗೆ ಅಷ್ಟು ಮಾತ್ರ........ನಿನಗೆ ಆ ಆಸರೆ ಬೇಕು. ಮಗೂನ ನೀನೇ ಇಟ್ಕೋ. ಮಾವನೋರೆ, ತಾಯೀನ, ಮಗೂನ ಬೇರೆಮಾಡೋ ಅಷ್ಟು ಧೈರಸ್ಥನಲ್ಲ ನಾನು. ಅಷ್ಟು ಗಟ್ಟಿ ಅಲ್ಲ ನನ್ನೆದೆ...... ಇಷ್ಟು ದಿನದ ನನ್ನ ಸರ್ವಿಸ್‌ನಲ್ಲಿ ನೀವೂ, ನನ್ನ ಸಹಚರ್ಯ ಮಾಡ್ಕೊಂಡು ಅವಮಾನ ಪಡಿಸಿದ್ದಕ್ಕೆ ಸಂಕಟಪಡ್ತಿದ್ದೀನಿ. ಹೊರಡ್ತಿದೀನಿ, ಪುನಃ ಈ ಜನ್ಮದಲ್ಲಿ ನನಗೆ ... ಬೇಡ.... ಬೇಡ...... ಬೇಡ...... ನನ್ನ ಮಗ...." ಎನ್ನುತ್ತಾ ಸರಸರನೆ ಮೆಟ್ಟಿಲುಗಳನ್ನಿಳಿದ ಪ್ರಸಾದ್.

"ನಿನ್ನ ಸಾಮಾನುಗಳನ್ನು ತಗೊಂಡು ಹೋಗು. ನಿನ್ನ ಜ್ಞಾಪಕ ಬರೋ ಅಂತಹ ವಸ್ತು ಯಾವುದೂ ಇರಕೂಡದು ಈ ಮನೇಲಿ." ದುಃಖಾವೇಶದಿಂದ ಅಲ್ಲಾಡಿಹೋಗುತ್ತಿದ್ದರು ವೆಂಕಟರಾಮಯ್ಯ.

ರೋಷದಿಂದ ಹಿಂದಿರುಗಿ ಒದ್ದೆಯಾಗಿದ್ದ ಕಣ್ಣುಗಳನ್ನು ಒರೆಸಿಕೊಳ್ಳುತ್ತಾ ಎಲ್ಲರ ಕಡೆಯೂ ನೋಡಿ ವೇದಾಂತಿಯಂತೆ ನಕ್ಕು "ನನ್ನ ಸಾಮಾನುಗಳು ಅಂದರೆ ಪಾತ್ರೆ, ಪರಡಿ ವಗೈರೆ ತಗೊಂಡುಹೋದ ಮಾತ್ರಕ್ಕೆ ನನ್ನ ಜ್ಞಾಪಕ ಬರದೆ ಹೋಗುತ್ತಾ, ಮಾವನವರೇ" ಎಂದ ಪ್ರಸಾದ್ ಸವಾಲ್ ಹಾಕುತ್ತಿರುವಂತೆ.

ಒಂದು ಕ್ಷಣವಾದ ಮೇಲೆ ನೋವಿನಿಂದ ನಿಟ್ಟುಸಿರು ಬಿಟ್ಟು ಕಣ್ಣುಗಳಲ್ಲಿ ನೀರು ತುಂಬುತ್ತಿರಲು, ತೋರುಬೆರಳಿನಿಂದ ತೋರಿಸುತ್ತಾ "ಸಾಮಾನುಗಳನ್ನು ಪುನಃ ಕೊಂಡ್ಕೋತೀನಿ. ಆದರೆ ಅದಕ್ಕಿಂತ ಬೆಲೆಯಾದ ನನ್ನವರು ಎಂದುಕೊಂಡ ವ್ಯಕ್ತಿಗಳನ್ನು ಬಿಟ್ಟು ಹೋಗ್ತಿದ್ದೀನಿ. ಅವರನ್ನ ನಾನು ಹೇಗೆ ಕೊಳ್ಳಬಲ್ಲೆ ? ಹಣ ಕೊಟ್ಟು ಕೊಳ್ಳಬಲ್ಲೆನಾ ? ಬಹಳ ಜನ ವ್ಯಸನಪರರಿರಬಹುದು ತಪ್ಪು, ಕೆಲಸಗಳನ್ನು ಮಾಡುವವರಿರಬಹುದು. ಆದರೆ .... ಆದರೆ......ಹೀಗೆ ಮನೆ ಅಳಿಯನ್ನ ಬೀದೀಲಿ ಅವಮಾನ ಮಾಡೋದು ನ್ಯಾಯವಲ್ಲ. ಮಧು ಇನ್ನೂ ಲೋಕಜ್ಞಾನ ತಿಳಿಯದವಳು" ಎಂದು ದುಃಖಪೂರಿತ ಧ್ವನಿಯಲ್ಲಿ ಹೇಳಿದ ಪ್ರಸಾದರಾವ್ ಕಡೆ ನೋಡಿದ ಮಧುಮತಿ ತಲೆ ತಗ್ಗಿಸಿದಳು. ವೆಂಕಟರಾಮಯ್ಯನವರ ವಿನಃ ಬೇರೆಯವರು ಬಾಗಿಲ ಹಿಂದೆ ಅವಿತುಕೊಂಡಿದ್ದರು.

ಹಿಂದಕ್ಕೆ ಹೊರಟ ಮಧುಮತಿಯನ್ನು "ಮಧೂ, ಇವರಾರಿಂದಲೂ ನನಗೆ ಏನೂ ಆಗಬೇಕಾಗಿಲ್ಲ. ನಿನ್ನನ್ನ ನನ್ನ ಜೊತೇಲಿ ಬಾ ಅಂತ ಕರೀತಿದ್ದೀನಿ. ಮಗೂನ ಕರ್ಕೊಂಡು ಬಂದ್ಬಿಡೂಂತ ಕೊನೆಯ ಬಾರಿ ಬೇಡ್ತಾ ಇದೀನಿ. ಬಂದ್ಬಿಡು ನನ್ನ ಜೊತೇಲಿ......ಈ ಮನೆಯಿಂದ ಹೊರಟು ಹೋಗೋಣ......ಇವರೆಲ್ಲಾ ಶಾಶ್ವತವಾಗಿ ನಿನ್ನನ್ನ ನೋಡ್ಕೊಳ್ಳೋದಿಲ್ಲ.... ಕೊನೆಯ ಸಲ ಕೇಳ್ತಿದ್ದೀನಿ. ನನ್ನ ಮಾತಿಗೆ ಬೆಲೆ ಕೊಡು" ಎಂದ. ಪ್ರಸಾದನ ಧ್ವನಿ ಸ್ಥಿರವಾಗಿ ಕಂಚಿನಂತೆ ಕೇಳಿಸಿತು.

ಒಂದು ಸಲ ಅವನ ಕಡೆ ನೀರಸವಾಗಿ ನೋಡಿ ರಭಸದಿಂದ ಒಳಗೆ

ಹೊರಟುಹೋದಳು ಮಧುಮತಿ. ಈ ಪ್ರಕರಣವನ್ನು ತಮಾಷೆಯಿಂದ ನೋಡುತ್ತಿದ್ದ ಹೆಂಗಸರೂ, ಗಂಡಸರೂ, "ಅಬ್ಬಾ !" ಎಂದು ಮೂಗಿನ ಮೇಲೆ ಬೆರಳಿಟ್ಟುಕೊಂಡರು.

ಬಾಲ ತುಳಿಸಿಕೊಂಡ ಹಾವಿನಂತೆ ಬುಸುಗುಟ್ಟುತ್ತಾ, ಲಜ್ಜಾಭಾವ ದಿಂದ ರಭಸದಿಂದ ಗೇಟುಗಳನ್ನು ತಳ್ಳುತ್ತಾ, ರಸ್ತೆಗೆ ನಡೆದ ಪ್ರಸಾದ್.

"ಹೋಗೋ, ಅಯೋಗ್ಯ ! ಹೋಗು......" ರೋಷದಿಂದ, ಅವಮಾನ ದಿಂದ ಕೂಗಿಕೊಂಡರು ವೆಂಕಟರಾಮಯ್ಯ. ಕೆನ್ನೆಯ ಮೇಲೆ ಕಣ್ಣೀರು ಬೊಟ್ಟುಬೊಟ್ಟಾಗಿ ಜಾರಿಹೋಗುತ್ತಿದ್ದರೆ ಅವನು ಕಾಣಿಸುವವರೆಗೂ ನೋಡಿ, ಪ್ರಜ್ಞಾವಿಹೀನರಾದರು ತಹಶೀಲ್‌ದಾರ್ ವೆಂಕಟರಾಮಯ್ಯ.

• • • •

ಹಿಂದಿನ ಸ್ಮೃತಿ ಹೃದಯವನ್ನು ಹಿಂಡಿತು. ಮುಖ ಕಳಾಹೀನ ವಾಯಿತು. ಕಣ್ಣುಗಳು ಕೆಂಪಾಗಿ ನೀರು ತುಂಬಿತು. ಕತ್ತಲು ಕೊಠಡಿ ಯನ್ನು ಆಕ್ರಮಿಸಿತು. ಥಟಕ್ಕನೆ ಎದ್ದು ನಿಂತು, ಸ್ವಿಚ್ ಹಾಕಿ ಕೈ ಜೋಡಿಸಿ ಬಾತ್‌ರೂಂ ಕಡೆ ನಡೆದರು ಪ್ರಸಾದರಾವ್.

ವಾಪಸ್ ಬರುವ ವೇಳೆಗೆ ಕೊಠಡಿಯಲ್ಲಿ ಕೂತಿದ್ದ ಗೋಪಾಲರಾವ್ ಕಡೆ ಆದರಪೂರ್ವಕವಾಗಿ ನೋಡುತ್ತಾ, "ಯಾಕೆ ಇಷ್ಟು ತಡಮಾಡ್ದೆ ? ಸ್ವಲ್ಪ ಕಾಫಿ ಕುಡಿ, ಮಾತಾಡೋಣ" ಎನ್ನುತ್ತಾ ಫ್ಲಾಸ್ಕಿನಿಂದ ಕಾಫಿ ಬಗ್ಗಿಸುತ್ತಿದ್ದ ಪ್ರಸಾದರಾವ್‌ರನ್ನು ತಡೆಯುತ್ತಾ "ನನಗೆ ಬೇಡ, ನೀವು ಕುಡೀರಿ" ಎಂದರು ಗೋಪಾಲರಾವ್.

ಸ್ವಲ್ಪ ಕಾಫಿ ಕುಡಿದ ನಂತರ "ಇನ್ನೇನು ವಿಶೇಷ ? ನಮ್ಮವನಿಗೆ ಈಗ ಸಧ್ಯದಲ್ಲೇನೂ ರಜ ಇರೋದಿಲ್ವಾ ?" ಎಂದರು ಪ್ರಸಾದ್‌ರಾವ್.

"ದಸರಾ ರಜೆ ಇರುತ್ತಲ್ಲಾ. ಅವನು ನೇರವಾಗಿ, ಯಾರಿಗೂ ತಿಳಿಸದೆ ನಿಮ್ಮನ್ನ ಹುಡುಕಿಕೊಂಡು ಬರ್ತಾನೆ ಅಂದ್ಕೊಳ್ಳಲಿಲ್ಲ" ಎನ್ನುತ್ತಾ ವಾಸು ತನ್ನ ಹತ್ತಿರಕ್ಕೆ ಬಂದ ವಿಷಯ, ಪ್ರಸಾದರಾವ್ ಅಡ್ರೆಸ್ ಕೇಳಿದ ವಿಷಯ ಹೇಳಿದರು ಗೋಪಾಲರಾವ್ ಆಗಾಗ ಮುಗುಳ್ನಗುತ್ತಾ

ಕೇಳುತ್ತಿದ್ದ ಪ್ರಸಾದರಾವ್ ಸಂತೋಷ ತಡೆಯಲಾರದೆ ಉಬ್ಬಿ ಹೋದರು. ಗೋಪಾಲರಾವ್ ಹೇಳಿ ಮುಗಿಸಿಯಾದ ನಂತರ "ನಿಜವಾಗ್ಲೂ

ಪುನಃ ಈ ಜನ್ಮದಲ್ಲಿ ಅವನನ್ನ ನೋಡ್ತೀನಿ ಅಂದ್ಕೊಂಡಿರಲಿಲ್ಲ. ಅವನು ಆ ರೀತಿ ನನ್ನನ್ನ ಹುಡುಕಿಕೊಂಡು ಬರ್ತಾನೆ ಅಂತ ಕನಸಿನಲ್ಲಿ ಸಹ ಊಹಿಸಿರಲಿಲ್ಲ. ನೋಡು, ಅನೇಕ ವಿಧದಲ್ಲಿ ಈಗ ಚಿಕ್ಕವರು, ದೊಡ್ಡವರು ಏನೇನೋ ಹೇಳಿ ಹಣ ಕಸ್ಕೊಂಡು ಹೋಗ್ತಾರೆ. ಆ ರೀತಿ ಅಂದ್ಕೊಂಡು ಹೋಗೂಂತ ಗದರಿಸಿದೆ. ಅಳೋದಕ್ಕೆ ಪ್ರಾರಂಭಿಸಿದ. ಛೆ! ಅವನೆಲ್ಲಾ ಹೇಳಿರ್ಬೇಕಲ್ವಾ. ದೈವ ಆ ರೀತಿ ಅವನನ್ನ ಪ್ರೋತ್ಸಾಹಿಸಿತೇನೋ" ಎಂದರು. ಪ್ರಸಾದರಾವ್ ತೃಪ್ತಿಯಿಂದ ನಗುತ್ತಾ.

"ಹೋಗ್ಲಿ, ಒಳ್ಳೆಯದೇ ಆಯ್ತಲ್ಲಾ. ತಂದೆ, ಮಗ ಭೇಟಿಯಾದ್ರಿ ಭಾವ ನನಗೊತ್ತಿಲ್ದೆ ಕೇಳ್ತೀನಿ ಅಕ್ಕ, ನೀವು ಅಪ್ಪಾ....ಎಲ್ಲರೂ ಅಷ್ಟು ಆತ್ಮೀಯವಾಗಿ ಇದ್ರಲ್ಲಾ. ಯಾಕೆ ವೈಮನಸ್ಯ ಬಂದದ್ದು? ನಾನು ಆಗ ಟ್ರೈನಿಂಗ್‌ಗೆ ಹೊರಟುಹೋಗ್ತಿದ್ದೆನಲ್ಲಾ! ಅದು ಮುಗಿಸಿಕೊಂಡು ಬಂದು ಹೋಲ್ಡಾಲ್, ಪೆಟ್ಟಿಗೆ ಒಳಗಿಟ್ಟಿದ್ದೆನೋ ಇಲ್ಲವೋ...... ಒಂದೇ ರಂಪಾಟ. ನೀವು ಮನೆಬಿಟ್ಟು ಹೋದದ್ದು ಆವತ್ತೆ" ಎಂದು ಹೇಳಿ ಆಸಕ್ತಿಯಿಂದ ಪ್ರಸಾದ್‌ರಾವ್‌ರ ಮುಖ ನೋಡಿದ.

ಒಮ್ಮೆ ಕದಲಿ ಕುಳಿತು, 'ಛೆ!' ಎನ್ನುತ್ತಾ ಶೂನ್ಯವನ್ನು ದಿಟ್ಟಿಸುತ್ತಾ ಮೌನವಾಗಿದ್ದುಬಿಟ್ಟರು ಪ್ರಸಾದರಾವ್ ಸ್ವಲ್ಪ ಹೊತ್ತು. ಎರಡು ಕ್ಷಣ ಕಳೆದ ನಂತರ "ನಿಮುಗೇನಾದರೂ ಅಭ್ಯಂತರವಿದ್ರೆ ಹೇಳ್ಬೇಡಿ. ಆದರೆ ನೀವು ಮನೆ ಬಿಟ್ಟು ಹೊರಟುಹೋದ ಮೇಲೆ ಕೆಲಸಕ್ಕೆ ರಾಜೀನಾಮೆ ಕೊಟ್ಬಿಟ್ರಿ ಅಲ್ವಾ! ಪುನಃ" ಎಂದು ನಿಲ್ಲಿಸಿ, "ನೀವು ಮದುವೆ ಮಾಡ್ಕೊಂಡ್ರಿ ಅಂತ ಕೇಳ್ಪಟ್ಟೆವು" ಎಂದು ಸಂಶಯದಿಂದ ಪ್ರಸಾದರಾವ್ ಮುಖ ನೋಡುತ್ತಾ ಸುಮ್ಮನಾದರು ಗೋಪಾಲರಾವ್.

"ಹೇಳ್ತೀನಿ, ಹದಿನಾರು ವರ್ಷಗಳು ಕಳೆದು ಹಳೇ ಕಥೆಯಾಗಿರುವಾಗ ಈಗ ಹೇಳೋದಕ್ಕೆ ಅಭ್ಯಂತರ ಏನು ಬಂತು? ನಾನು ಮನೆ ಬಿಟ್ಟು ಹೊರಟು ಬಂದಮೇಲೆ ಏನಂದ್ಕೋತಾ ಇದ್ರು? ನಿಮ್ಮ ತಂದೆಯವರು ಹೇಗೆ ಸತ್ತು ಹೋದರು? ವಾಸು ಐದು ವರ್ಷದವನಾಗಿದ್ದಾಗ ಬಸ್ಸಿನಲ್ಲಿ ಸಿಕ್ಕಿ ಹೇಳಿದ. ಅಲ್ಲಾ ಯಾವಾಗಲಾದ್ರೂ ಅವನ ವಿಷಯ ಕೇಳ್ತಿದ್ರಾ ವಾಸು?" ಕಣ್ಣಲ್ಲಿ ಏನೋ ವಿಚಿತ್ರ ಕೋರಿಕೆ ಪ್ರಕಾಶಿಸುತ್ತಿರಲು ಕೇಳಿದರು ಪ್ರಸಾದರಾವ್.

"ಚೆನ್ನಾಗಿದೆ ಈಗ. ಆದ್ರೆ ಸ್ವಲ್ಪ ದೊಡ್ಡವನಾಗಿರೋದರಿಂದ

ಕೊಂಚ ಅರ್ಥ ಮಾಡ್ಕೊಂಡು ಸುಮ್ಮನಿದ್ದಾನಾಗ್ಲೀ ಒಂದು ಸಲ ಸ್ಕೂಲಿನಿಂದ ಬಂದೊಡನೆ ಅಕ್ಕನ ಭುಜಗಳನ್ನು ಹಿಡಿದು ಅಲ್ಲಾಡಿಸುತ್ತಾ, "ನಮ್ಮ ಅಪ್ಪ ಎಲ್ಲಿದ್ದಾರೆ ಹೇಳು" ಎನ್ನುತ್ತಾ ಹಟ ಮಾಡಿದ. ಅಕ್ಕನಿಗೆ ಬೇಸರವಾಗಿ ಎರಡೇಟು ಕೊಟ್ಲು ನಮ್ಮ ತಾಯಿ. 'ಯುದ್ಧಕ್ಕೆ ಹೋಗಿದ್ದಾರೆ. ಒರ್ತ್ತಾರೆ. ಏತಕ್ಕೆ ಈವತ್ತು ನಿಮ್ಮ ತಂದೆ ವಿಷಯ ಕೇಳ್ತಿದ್ದೀ ಅಂತ ಲಾಲಿಸಿ ಕೇಳಿದ್ದಕ್ಕೆ ಅವನ ತಂದೇನ ಮನೆಯಿಂದ ಹೊರಗೋಡಿಸಿಬಿಟ್ರು ಅಂತ ಯಾರೋ ಅಂದಿದ್ದನ್ನ ಕೇಳಿ, ನಿಜವಾ, ಸುಳ್ಳಾ ಎನ್ನುತ್ತಾ ಎಲ್ಲರನ್ನೂ ಕೇಳ್ತಾ "ನಮ್ಮ ತಂದೇನ ದೇವರು ಕರ್ಕೊಂಡು ಹೊರಟುಹೋಗಿದ್ದಾನೆ ಅನ್ನೋ ವೇಳೆಗೆ ಅಕ್ಕ ಅವನ ಬಾಯಿ ಮುಚ್ಚಿ ಅಳೋದಕ್ಕೆ ಪ್ರಾರಂಭಿಸಿದಳು. ಅವತ್ತು "ನನಗೂ ಅಪ್ಪ ಬೇಕು" ಅಂತ ಹೇಳಿ ಒಂದೇ ರಗಳೆಮಾಡ್ದ, "ಹೀಗೆ ಸುಮ್ನೆ ನನಗೆ ಅಪ್ಪಾ ಬೇಕು ಅಂತ ಹೇಳ್ತಿದ್ರೆ ನಾನೂ ದೇವರ ಹತ್ರಕ್ಕೆ ಹೊರಟು ಹೋಗ್ತೀನಿ'' ಅಂತ ಅಕ್ಕ ಬೆದರಿಸಿದರು. ಅಂದಿನಿಂದ ಆ ವಿಷಯ ಕೇಳೋದು ಬಿಟ್ಟ" ಎಂದು ಹೇಳಿ ನಗುತ್ತಾ "ನೀವು ಮನೆ ಬಿಟ್ಟು ಹೊರಟು ಹೋದ್ಮೇಲೆ ಇನ್ನೇನಾಗುತ್ತೆ ? ಗೋಳು, ಬಯ್ಗಳು, ರಂಪಾಟ ಇದರಲ್ಲೇ ಕಳೀತು ಒಂದು ವಾರ. ನಮ್ಮ ತಂದೆಯವರು ಮಾತ್ರ ಮಾನಸಿಕವಾಗಿ ಪೆಟ್ಟು ತಿಂದರೇನೋ. ಹುಚ್ಚುಚ್ಚಾಗಿ ಮಾತಾಡ್ತಾ ಇದ್ರು. ಅಕ್ಕ ಬಹಳ ದಿವಸ ಕುಳ್ಳಿ ಕುಳ್ಳಿ ಅಳುತ್ತಿದ್ದಳು. ನೀವು ಹೊರಟುಹೋದ ಮೇಲೆ ಇಂದಿನವರೆಗೂ ನಮ್ಮಕ್ಕ ಔತಣಗಳಿಗೆ, ವಿನೋದಕೂಟಗಳಿಗೆ ಹೋಗಿದ್ದೇ ಇಲ್ಲ. ಅಷ್ಟೆಲ್ಲಾ ಯಾಕೆ, ಅಣ್ಣ, ತಮ್ಮ ನಮ್ಮ ಮದುವೆಗಳಿಗೆ ಬರ್ಲಿಲ್ಲಾ ಪಾಪ'' ಎಂದು ಹೇಳಿ ನೋವಿನಿಂದ ನಿಟ್ಟುಸಿರುಬಿಟ್ಟು "ಒಂದು ತಿಂಗಳ ನಂತರ ರಾಜಮ್ಮ ತಂದೆಯವರಿಗೆ ಪೇಟೆಬೀದಿಯಲ್ಲಿ ಸಿಕ್ಕಿದಳಂತೆ" ಎಂದರು ಗೋಪಾಲ್‌ರಾವ್. ಪಕ್ಕನೆ ನಕ್ಕರು ಪ್ರಸಾದರಾವ್.

ತಾನೂ ಮೆಲ್ಲಗೆ ನಕ್ಕು ಪುನಃ ಪ್ರಾರಂಭಿಸಿದರು ಗೋಪಾಲರಾವ್. "ಅಪ್ಪ ನಿಶ್ಚೇಷ್ಟರಾಗಿ ನಿಂತು, ಸ್ವಲ್ಪ ಹೊತ್ತು ಸಾವರಿಸಿಕೊಂಡ ನಂತರ ಮುಂದೆ ಹೋದ ರಾಜಮ್ಮನನ್ನು ಅವಸರದಿಂದ ಹಿಂಬಾಲಿಸಿ, ಅವಳನ್ನು ಹಿಡಿದು ನಿಲ್ಲಿಸಿ ನೀನು ನನ್ನ ಅಳಿಯನೊಂದಿಗೆ ಓಡಿ ಹೋಗಲಿಲ್ವಾ? ಎಂದು ಕೇಳಿದರಂತೆ. ಇನ್ನು ಅವಳ ಬಾಯಿಗೆ ಅಡ್ಡಿ ಏನು ? ಇಷ್ಟ ಬಂದಂತೆ ಬೊಗಳಿ, ನಿಮ್ಮಳಿಯ ಬೇರೆ ಮದುವೆ ಮಾಡ್ಕೊಂಡಿದ್ದಾರೆ. ನಾನು ತಿರುಪತೀಲಿ ನೋಡ್ದೆ

ಅಂತ ಹೇಳಿದಳಂತೆ. ''ನಿಜ ಅಂತೀಯ ರಾಜಮ್ಮ'' ಎಂದು ಕೇಳಿದರಂತೆ. ತಿರುಪತೀಲಿ ನೀವು ಮದುವೆ ಮಾಡ್ಕೊಂಡ್ರಿ ಅಂತ ಹೇಳಿದಳಂತೆ ರಾಜಮ್ಮ'' ಇಬ್ಬರೂ ಸೇರಿ ನಕ್ಕರು ಒಮ್ಮೆ.

"ಇನ್ನೇನಿದೆ ? ತಹಶೀಲ್ದಾರರ ಅಳಿಯ ತಿರುಪತೀಲಿ ಬೇರೆ ಮದುವೆ ಮಾಡ್ಕೊಂಡ ಅನ್ನೋ ಮಾತು ಊರೆಲ್ಲಾ ಹರಡಿ ನಮ್ಮ ಅಕ್ಕನ ಕಿವಿಗೂ ಬಿತ್ತು. ನೀವು ಮದುವೆ ಮಾಡ್ಕೊಂಡು ಬೇರೆಲ್ಲೋ ಸ್ಥಿರವಾಗಿ ನೆಲಸಿಬಿಟ್ರಿ ಅನ್ನೋ ನಿರ್ಧಾರಕ್ಕೆ ಬಂದು ಅಂದಿನಿಂದ ಪೂರ್ತಿಯಾಗಿ ನಿಮ್ಮ ಆಸೇನ ಬಿಟ್ಬಿಟ್ವಿ. ಅಪ್ಪ ಕುಗ್ಗಿಹೋದ್ರು. ಬಹುಶಃ ಒಂದು ಐದಾರು ತಿಂಗಳುಗಳ ಕಾಲ ಹಾಗೂ ಹೀಗೂ ಓಡಾಡ್ತಾ ಇದ್ರೇನೋ, ಆಮೇಲೆ ಹಾಸಿಗೆ ಹಿಡಿದು ಬಿಟ್ರು. ಅವರು ತೀರಿಹೋದ ಮೇಲೆ ಅಮ್ಮ, ಅಕ್ಕ ಬೇರೆ ಇದ್ದಾರೆ. ಉದ್ಯೋಗದ ಸಲುವಾಗಿ ನಾನು ಬೇರೆ ಊರಿಗೆ ಹೊರಟುಹೋದೆ. ಮನೆ ಬಾಡಿಗೆ ಜಮೀನಿನಲ್ಲಿ ಬರೋ ದವಸಧಾನ್ಯ ಅಮ್ಮನಿಗೆ, ಅಕ್ಕನಿಗೆ, ಬಿಟ್ಟು ಕೊಟ್ಟಿದ್ದೀವಿ" ಎಂದು ಹೇಳಿ ಮುಗಿಸಿದರು ಗೋಪಾಲರಾವ್.

''ಆದರೆ ವಾಸು ಚೆನ್ನಾಗಿ ಓದ್ತಾನೆ ಅಂತೀಯಾ? ಬುದ್ಧಿವಂತನೇನಾ ?" ಪ್ರಶ್ನಿಸಿದರು ಪ್ರಸಾದರಾವ್.

''ಅವನ ಮಾರ್ಕ್ಸ್ ಕಾರ್ಡ್ ನೋಡಿದ್ದಿದ್ರೆ ಹೀಗೆ ಹೇಳ್ತಿರಲಿಲ್ಲ ನೀವು'' ಎಂದು ನಕ್ಕರು ಗೋಪಾಲರಾವ್.

"ಅವನ ಬಾಬ್ತು ಏನು ಖರ್ಚಿದ್ದರೂ ಸಂಕೋಚಪಡಬೇಡ. ನನಗೆ ಬರಿ. ನೀನೂ ಮಕ್ಕಳೊಂದಿಗ. ಖರ್ಚುಗಳಿಗೆ ನಾನು ದುಡ್ಡು ಕಳಿಸ್ತೀನಿ. ಏನೂ ತಪ್ಪು ಭಾವಿಸದೆ ತಗೋ. ಆದರೆ ಈ ವಿಷಯ ಬೇರೆಯವರಿಗೆ ತಿಳಿಯೋದು ನನಗಿಷ್ಟವಿಲ್ಲ. ಆವತ್ತು ನನ್ನ ಜೀವನ ಹೇಗೆ ನಗೆಪಾಟಲಾಯ್ತೋ ನಿನಗೆ ಗೊತ್ತು. ಹೀಗೆ ಏಕಾಂತವಾಗಿ ಬದುಕೋದು ಕಷ್ಟ, ಆದರೂ ನನಗಿಷ್ಟ. ಸರಿ ಊಟ ಮಾಡೋಣ ಏಳು" ಎಂದರು ಪ್ರಸಾದರಾವ್ ಗಡಿಯಾರವನ್ನು ನೋಡಿಕೊಳ್ಳುತ್ತಾ.

ಅಡಿಕೆ ಪುಡಿಯನ್ನು ಅಗೆಯುತ್ತಾ ಸಿಗರೇಟ್ ಹತ್ತಿಸಿ ಮಂಚದ ಮೇಲೆ ಕೂತು, ''ಆದರೆ ಭಾವಾ ! ನಿಮಗೆ ಬೇಕಾದ ವಿಷಯಗಳನ್ನೆಲ್ಲಾ ಕೇಳಿ ತಿಳ್ಕೊಂಡುಬಿಟ್ರಿ. ನಿಮ್ಮ ಮಧ್ಯೆ ಹೀಗೆ ಬೇರೆ ಆಗೋ ಅಂತಹ ಜಗಳ ಏಕೆ ಬಂತು ? ಮನೆ ಬಿಟ್ಟು ಹೊರಟುಹೋದ್ಮೇಲೆ ಏನ್ಮಾಡಿದಿರಿ ? ಈಗ ನೀವು

ಏನ್ಮಾಡ್ತಿದ್ದೀರಿ ? ಹೇಳೋದಿಲ್ವಾ ? ಬಹಳ ಗಟ್ಟಿಗರು !" ಎಂದು ನಗುತ್ತಾ ಪ್ರಶ್ನಿಸಿದರು ಗೋಪಾಲರಾವ್.

''ಕೇಳೋದಕ್ಕೆ ತಾನೆ ಬಂದಿದ್ದೀ ? ಹೇಳ್ತೀನಿ ಕೇಳು, ಅದೇನೋಪ್ಪ, ಈಗ್ಲೂ ಹಿಂದಿನದೆಲ್ಲಾ ಜ್ಞಾಪಿಸಿಕೊಂಡ್ರೆ ಏನೋ ಆಯ್ತು ಅಂತ ಸಮಾಧಾನ ಪಡೋದಕ್ಕೆ ಆಗದೆ ಆಗಾಗ ಒದ್ದಾಡ್ತೀನಿ. ಹದಿನಾರು ವರ್ಷಗಳ ಕೆಳಗೆ ನಡೆದು ಹೋದ ಹಳೇ ಕಥೆ.....ಕೇಳು. ನಿನ್ನ ಹತ್ರ—ಹೇಳೋದರಿಂದ ಲಾಭ, ನಷ್ಟ ಎರಡೂ ಇಲ್ಲ.....'' ಎಂದು ಹೇಳಿ ಸ್ವಲ್ಪ ಕೆಮ್ಮಿ, ಈಸಿಛೇರಿನಲ್ಲಿ ಆರಾಮವಾಗಿ ಕಾಲುಚಾಚಿ ಮಲಗಿದ್ದವರು ಎದ್ದು ನೆಟ್ಟಗೆ ಕೂತು, ''ನಿಮ್ಮ ತಂದೆಯವರ ಬಳಿ ನಾನು ಗುಮಾಸ್ತೆಯಾಗಿದ್ದುದ್ದು ನಿನಗೆ ಗೊತ್ತಿದ್ದ ವಿಷಯ ತಾನೆ? ನಿಮ್ಮ ತಂದೆಯವರ ಇಷ್ಟದ ಪ್ರಕಾರ ಮತ್ತು ನಿಮ್ಮಕ್ಕನ, ನನ್ನ ಸಂಪೂರ್ಣ ಅಂಗೀಕಾರದಿಂದಲೇ ನಮ್ಮ ಮದುವೆ ನಡೆಯಿತು. ಐವತ್ತು ವರ್ಷ ಆಗ್ತಾ ಬಂತು.... ಇನ್ನು ನನಗೆ ನಾಚಿಗೆ ಎಂಥಾದ್ದು? ಒಂದು ವಿಧದಲ್ಲಿ ನಮ್ಮದು ಪ್ರೇಮವಿವಾಹ. ಒಬ್ಬರನ್ನೊಬ್ಬರು ನೋಡದೆ ಒಂದು ದಿನ ಸಹ ಇರ್ತಾ ಇರಲಿಲ್ಲ. ಐದು ವರ್ಷ ಕಾಲ ನಮ್ಮಿಬ್ಬರ ಮಧ್ಯೆ ಯಾವ ಭೇದಾಭಿಪ್ರಾಯಗಳೂ ಬರಲಿಲ್ಲ. ಜೀವನವೆಲ್ಲಾ ಹಾಗೇ ನಡೆದುಹೋಗುತ್ತೆ ಅಂತ ಭ್ರಮೆಪಟ್ಟೆ!... ಆದರೆ ಬಂತಪ್ಪ ಒಂದು ಕಾರಣ ! ಮೊದಲು ನಿಮ್ಮ ತಂದೆಯವರಿಗೂ, ನನಗೂ ಭೇದಾಭಿಪ್ರಾಯ. ಅಂದು ಮಾಮೂಲಿನಂತೆ ಆಫೀಸಿಗೆ ಹೊರಡೋವಾಗ ನಿಮ್ಮ ತಂದೆಯವರ ರೂಮಿನಿಂದ ಏನೇನೋ ಮಾತುಗಳು ಕೇಳಿಬರಲು ಯಾರೋ ನೋಡೋಣವೆಂದು ಸಲುಗೆಯಿಂದ ಕೊಠಡಿಯೊಳಗೆ ಹೋದೆ. ಜೂನಿಯರ್ ಗುಮಾಸ್ತೆ ಜೋಸೆಫ್ ನಿಮ್ಮ ತಂದೆಯವರ ಮುಂದೆ ಎರಡು ನೂರುರೂಪಾಯಿಗಳ ನೋಟುಗಳನ್ನಿಟ್ಟು ನಮಸ್ಕರಿಸಿದ. ಅವರು ಅದನ್ನ ಜೋಬಿನಲ್ಲಿ ತುರಕ್ಕೊಂಡು ಕೆಲವು ಗುಮಾಸ್ತೆಗಳ ಪೋಸ್ಟುಗಳನ್ನು ಕಿತ್ತುಹಾಕಿ ಅಂತ ಮೇಲಿಂದ ಆರ್ಡರ್ ಬಂದಿದೆ. ಇವನ ಉದ್ಯೋಗ ಹೋಗುವ ಸಂಭವವಿದೆ ! ನೋಡು ಪ್ರಸಾದ್ ಅದರ ಬದಲು ಜೋಗಯ್ಯನ ಉದ್ಯೋಗ ಹೋಗುತ್ತೆ ಎಂದರು, ಅದನ್ನು ಕೇಳಿ ನನ್ನ ಎದೆ ಡವಡವ ಹೊಡೆದುಕೊಂಡಿತು.

''ಇಲ್ಲಾ, ಅವನು ಸೀನಿಯರ್, ಅವನ ಕೆಲಸ ಯಾಕೆ ಹೋಗ್ಬೇಕು" ಎಂದೆ.

''ನನಗ್ಗೊತ್ತು'' ಎಂದರು ತೀಕ್ಷ್ಣವಾಗಿ ನನ್ನ ಕಡೆ ನೋಡುತ್ತಾ.

''ಅದು ಅನ್ಯಾಯ'' ಎಂದೆ.

''ಇರಬಹುದು, ನಾ ಹೇಳ್ತಿದ್ದೀನಿ. ಈ ವಿಷಯದಲ್ಲಿ ನೀನು ತಲೆ ಹಾಕ್ಬೇಡ'' ಎಂದರು.

ನಾನು ಮಾತನಾಡದೆ ಹೊರಗೆ ಬಂದೆ. ನನಗೆ ಜೋಗಯ್ಯನ ಕೆಲಸ ದಿಂದ ತೆಗೆದುಹಾಕದೆ ಇರುವಂತೆ ಮಾಡ್ಬೇಕು ಅನ್ನೋ ಹಟ ಬಂತು. ಅದಕ್ಕೆ ಬೇಕಾದ ಪ್ರಯತ್ನ ನಡೆಸಿದೆ. ಅದರಿಂದ ನಿಮ್ಮ ತಂದೆಯವರ ಪ್ರಯತ್ನ ವಿಫಲವಾಗಿ, ಅವರಿಗೆ ಮೇಲಿಂದ ಕೆಟ್ಟ ಹೆಸರೂ ಬಂತು ಜೋಗಯ್ಯನ ಪಕ್ಷ ಹಿಡಿದ ನಾನು ಜಯಶಾಲಿಯಾದೆ. ಆ ಜೋಗಯ್ಯನ ಅಕ್ಕನೇ ರಾಜಮ್ಮ. ಅವರದು ಬಹಳ ಬಡ ಸಂಸಾರ. ಜೋಗಯ್ಯನ ಸಂಪಾದನೆಯಿಂದಲೇ ಅವರ ಸಂಸಾರ ನಡೆಯುತ್ತಾ ಇದ್ದದ್ದು. ನನ್ನ ಮೇಲೆ ಅವರಿಗೆ ಗೌರವ, ಕೃತ ಜ್ಞತಾಭಾವ ಹುಟ್ಟುವುದು ಸಹಜವೇ ತಾನೆ ? ಅಂದಿನಿಂದ ಜೋಗಯ್ಯ ನನ್ನ ಆಪ್ತ ಸ್ನೇಹಿತನಾದ. ಆಫೀಸಿನಿಂದ ಬರುವಾಗ ಅವರು ನನ್ನನ್ನು ಆಹ್ವಾನಿ ಸುವುದು, ಅವರು ಮಾಡುವ ಅತಿಥಿ ಸತ್ಕಾರವನ್ನು ಸ್ವೀಕರಿಸುವುದೂ ಒಂದು ಅಭ್ಯಾಸವಾಗಿಹೋಯ್ತು. ಆ ಅಪಜಯವನ್ನು ಮನಸ್ಸಿನಲ್ಲಿಟ್ಕೊಂಡ್ರು ಗೋಪಿ. ನನ್ನೊಂದಿಗೆ ಮುಭಾವದಿಂದಲೇ ಇರುತ್ತಿದ್ದರು. ನಿಮ್ಮ ಅಕ್ಕ ಕೂಡ ಅವರ ತಂದೆ ಮಾಡೋ ಕೆಲಸದಲ್ಲಿ ತೊಂದರೆಕೊಟ್ಟೆ ಎಂದು ಮೆಲ್ಲಗೆ ದೂಷಿಸುತ್ತಿದ್ದಳು. 'ಹೇನಿಗೆ ಯಜಮಾನಿಕೆ ಕೊಟ್ಟರೆ ತಲೆ ಎಲ್ಲಾ ಕಿತ್ತ ತಂತೆ, ಇಷ್ಟೇರಿ, ಚಪ್ಪಲಿ ಎಲ್ಲಿಡಬೇಕೋ ಅಲ್ಲೇ ಇಡಬೇಕು' ಎಂದು ಇಂತಹ ಹೃದಯ ಚುಚ್ಚುವ ಮಾತುಗಳನ್ನು ನಿಮ್ಮ ತಾಯಿಯವರು ಆಡ್ತಾ ಇದ್ರು. ಇವೆಲ್ಲವನ್ನೂ ಸಹಿಸಿದೆ ಗೋಪಿ, ಆದರೆ......'' ಎನ್ನುತ್ತಾ ಒಮ್ಮೆ ಕಣ್ಣು ಮುಚ್ಚಿಕೊಂಡು ದೀರ್ಘವಾಗಿ ನಿಟ್ಟುಸಿರು ಬಿಟ್ಟರು ಪ್ರಸಾದರಾವ್.

ಒಮ್ಮೆ ವಿಷಾದದಿಂದ ತಲೆತಗ್ಗಿಸಿ ಪುನಃ ಪ್ರಸಾದರಾವ್ ಕಡೆ ನೋಡಿ ದರು ಗೋಪಾಲರಾವ್.

''ಹಾಗೆ ಜೀವನ ಸರಾಗವಾಗಿ ನಡೀತಾ ನಾನೊಬ್ಬ ನತದೃಷ್ಟ, ಗೋಪಿ, ಅಮ್ಮ, ಅಪ್ಪ ನನಗಿನ್ನೂ ವರ್ಷ ತುಂಬೋದಕ್ಕೆ ಮೊದಲೇ ಕಾಲರಾ ಬಂದು ಸತ್ತುಹೋದ್ರಂತೆ. ನನ್ನನ್ನ ನಮ್ಮಜ್ಜಿ ಬೆಳೆಸಿದರು. ನನ್ನ ಇಬ್ಬರು ಸೋದರ ಮಾವಂದಿರು, ಚಿಕ್ಕಮ್ಮ, ಆಗತಾನೆ ಬೇರು ಹಿಡ್ಕೋತಿದ್ದ ಗಿಡಗಳನ್ನ ಗಾಳಿ ಮಳೆ ಬೇರುಸಹಿತ ಕಿತ್ತುಹಾಕುವಂತೆ ನಾ ಬೆಳೀತಿರೋವಾಗ ಮೃತ್ಯುವು

ಒಯ್ದಿತು. ನನ್ನನ್ನು ಅಭಿಮಾನದಿಂದ, ಪ್ರೀತಿಯಿಂದ ನೋಡಿ ಕರುಣೆ ತೋರಿಸುತ್ತಿದ್ದ ಎಲ್ಲ ವ್ಯಕ್ತಿಗಳನ್ನು ಕಳೆದುಕೊಂಡೆ. ನನಗಾಗಿ ಎಣ್ಣೆ ಮುಗಿದುಹೋಗಿದ್ದು ಕಂಡಾಗ ಕರಡಾದ ಬತ್ತಿ ಉರಿಯುವ ದೀಪದಂತೆ ನನ್ನ ಅಜ್ಜಿಯೊಬ್ಬರು ಉಳಿದು ನನಗೆ ವಿದ್ಯಾಬುದ್ಧಿ ಕಲಿಸಿದರು. ಅಜ್ಜಿ ನನ್ನನ್ನು ಬಿಟ್ಟುಹೋದ ದಿನ ನಿಮ್ಮ ಅಕ್ಕ ನನಗೆ ಆಸರೆಕೊಟ್ಟಳು. ನಾನು ಒಬ್ಬಂಟಿಗ ನಲ್ಲ ಎಂದುಕೊಂಡೆ. ನಿಮ್ಮ ತಂದೆಯವರ ವಾತ್ಸಲ್ಯವನ್ನು ಸೂರೆಗೊಂಡ ನಂತರ ಪಿತೃಪ್ರೇಮ ಹೇಗಿರುತ್ತದೆ ಎಂದುಕೊಂಡೆ....." ಧ್ವನಿ ಗದ್ಗದ ವಾಯಿತು. ಕಣ್ಣುಗಳಲ್ಲಿ ನೀರು ಬಂತು.

"ನನ್ನ ಜೀವನ ತೆರೆದ ಪುಸ್ತಕವೆಂದು ತಿಳಿದಿದ್ದೆ. ನನ್ನ ಭವಿಷ್ಯ ಹೂವಿನ ಹಾಸಿಗೆಯಂತಾಗುತ್ತದೆಂದುಕೊಂಡು ಸುಂದರವಾದ ಊಹಾಸೌಧ ವನ್ನು ನಿರ್ಮಿಸಿಕೊಂಡೆ. ಆದರೆ......ನನ್ನ ಜೀವನದಲ್ಲಿ ಊಟಕ್ಕೇ ಮಾರ್ಗ ವಿಲ್ಲದ ದಿನಗಳಿವೆಯೆಂದೂ, ಮುಂದಿನ ಹಾದಿಯಲ್ಲಿ ಬರೀ ಕಲ್ಲು, ಮುಳ್ಳುಗಳೇ ಹರಡಿವೆಯೆಂದೂ, ನನ್ನ ಊಹಾಸೌಧ ಗಾಳಿಗೆ ಹಾರಿಹೋಗುವ ಮಾಳಿಗೆ ಎಂದೂ, ಸಹಾನುಭೂತಿ, ಪ್ರೀತಿ ಇಲ್ಲದೆ ಒಂಟಿ ಜೀವನ ಕಳೆಯುತ್ತೇನೆಂದು ತಿಳಿದುಕೊಂಡಿರಲಿಲ್ಲ ಗೋಪಿ.

ಕೆಲವು ಘಟನೆಗಳು ಜ್ಞಾಪಕ ಬಂದರೆ ಈಗಲೂ ಹೃದಯ ದ್ರವಿಸಿ ಹೋಗುತ್ತದೆ. ನನ್ನ ಮದುವೆಯಾದ ಎರಡು ವರ್ಷಗಳ ನಂತರ ಇರಬೇಕು. ಆ ಆಫೀಸ್ ಇನ್ಸ್‌ಪೆಕ್ಷನ್ ಇದೆಯೆಂದು ಒಂದು ವಾರದ ಮೊದಲಿನಿಂದ ರೆಕಾರ್ಡುಗಳನ್ನು ಅಪ್‌ಟು ಡೇಟ್ ಮಾಡುತ್ತಿದ್ದೆವು. ಬೆಳಗ್ಗೆ ಮನೆ ಬಿಟ್ಟು ರಾತ್ರಿ ಎಂಟು ಗಂಟೆಗೆ ಮನೆ ಸೇರುತ್ತಿದ್ದೆ. ವಾರದ ಹಿಂದೆ ಕ್ಯಾಂಪ್‌ಗೆ ಹೋಗಿದ್ದ ನಿಮ್ಮ ತಂದೆ ವಾಪಸ್ ಬಂದರು. ಮಧು ಹೇಳಿರಬೇಕು, ಆಫೀಸಿಗೆ ಹೊರಟಿದ್ದನ್ನು ನೋಡಿ 'ಪ್ರಸಾದ್' ಎಂದು ಗಟ್ಟಿಯಾಗಿ ಕರೆ ದರು. ಆಗತಾನೆ ನಿದ್ದೆಯಿಂದ ಎದ್ದ ಅವರು "ನೀವು ನಿದ್ದೆ ಮಾಡಿದ್ರಿ ನಾನು ಬರೋ ವೇಳೆಗೆ" ಎಂದೆ ಅವರನ್ನುಮಾತನಾಡಿಸದಿದ್ದುದಕ್ಕೆ ಕಾರಣ ವಿವರಿ ಸುತ್ತಾ.

"ನೋಡು, ಊಟ ಮಾಡಿ ಹತ್ತು ಘಂಟೆಗೆ ಹೋಗು" ಎಂದು ಆಜ್ಞಾ ಪಿಸಿದರು.

"ಅಲ್ಲಾ, ಕೆಲಸ ಇದೆ, ಹೋಗ್ಬೇಕು" ಎಂದೆ.

"ಅಲ್ಲಾ, ರಾತ್ರಿ-ಹಗಲೂ ಹೀಗೆ ಕೆಲಸ ಮಾಡಿದ್ರೆ ಆರೋಗ್ಯ ಹಾಳಾಗೋದಿಲ್ವೇನು ? ನಡಿ, ಒಳಗೆ ಹೋಗು" ಎಂದರು ನಗುತ್ತಾ.

"ನಮ್ಮ ಹೆಡ್ ಕ್ಲಾರ್ಕ್"......ಎಂದೆ.

"ಊಂ ಏನ್ಮಾಡ್ತಾನೆ ? ನಾನಿರೊವರೆಗೂ ನೀನು ಕಷ್ಟಪಟ್ಟು ಸಂಪಾದಿಸಬೇಕಾಗಿಲ್ಲ.... ("ಉದ್ಯೋಗಂ ಪುರುಷ ಲಕ್ಷಣಂ" ! ಅನ್ನೋದರಿಂದ ಕೆಲಸಕ್ಕೆ ಹೋಗಬೇಕೆ ವಿನಃ) ಈವತ್ತು ಆಫೀಸಿಗೆ ಹೋಗದೆ ಊಟಮಾಡಿ ಮಧ್ಯಾಹ್ನ ಹಾಯಾಗಿ ನಿದ್ದೆಮಾಡು. ಸಾಯಂಕಾಲ ಇಬ್ಬರೂ ಸಿನಿಮಾಗೆ ಹೋಗಿಬನ್ನಿ. ನಿನ್ನ ಹೆಂಡತಿ ಗೋಳಾಡ್ತಾ ಇದ್ರೆ ಕೇಳ್ಬೇಕಾಗಿಲ್ವಾ ?" ಎಂದರು.

ಹಾಗೇ ಮೌನವಾಗಿ ನಿಂತಿದ್ದೆ. ಕೆಲವು ಕ್ಷಣಗಳನಂತರ ಈವತ್ತು ಮಾಡಬೇಕಾದ ಕೆಲಸ ತುಂಬ ಇದೆ" ಅಂತ ಹೇಳ್ದೆ.

"ಪರ್ವಾಗಿಲ್ಲ. ನಿನ್ನನ್ನ ಏನಾದ್ರೂ ಅನ್ನೋದಕ್ಕೆ ಯಾರಿಗೆ ಗುಂಡಿಗೆ ಇದೆ ? ಹೋಗು ಈವತ್ತು ಆಫೀಸಿಗೆ ಲೀವ್ ಲೆಟರ್ ಕಳಿಸು" ಎಂದರು ನಗುತ್ತಾ, ಅಂತಹ ವ್ಯಕ್ತಿ ನನ್ನನ್ನ ಮನೆಯಿಂದ ಓಡಿಸಿದರು ಎಂದರೆ ಅದಕ್ಕಿಂತ ದುರದೃಷ್ಟ ಇನ್ನೇನಿದೆ ಗೋಪಿ ? ಅದಕ್ಕೇ ವಯಸ್ಸು ಬಂದ ಮೇಲೆ ಎಂದೂ ಹಾಗೆ ಅಳದಿದ್ದ ನಾನು ಅಂದು ಅತ್ತೆ" ಎಂದು ಹೇಳುತ್ತಾ ಮುಖವನ್ನು ಟವಲಿನಿಂದ ಒರೆಸಿಕೊಂಡು ಪುನಃ ಮುಂದುವರೆಸಿದರು.

ಅಂತಹ ಘಟನೆಗಳೆಷ್ಟೊ ? ನನ್ನ ಶರೀರಕ್ಕೆ ಯಾವ ಬಣ್ಣ ಮ್ಯಾಚ್ ಆಗುತ್ತದೋ ಆ ಬಣ್ಣದ ಸೂಟನ್ನು ಹೊಲಿಸುತ್ತಿದ್ದರು. ಆ ಸೂಟನ್ನು ನಾನು ಹಾಕಿಕೊಂಡಾಗ "ಎಲ್ಲಿ ಪ್ರಸಾದ್, ಹೀಗೆ ಬಾ" ಎಂದು ಕರೆದು ನನ್ನ ಕಡೆ ತೃಪ್ತಿಯಿಂದ ನೋಡುತ್ತಿದ್ದರು. ಒಂದು ಸಲ ನನಗೆ ಜ್ವರ ಬಂತು. ನಾಲ್ಕು ದಿನ ತಾನೂ ರಜಹಾಕಿ ಮನೆಯಲ್ಲಿಯೇ ಇದ್ದರು. ಚಿಕ್ಕ ಮಗುವಿನಂತೆ ನನ್ನ ಮಂಚದ ಬಳಿಯೇ ಓಡಾಡುತ್ತಿದ್ದ ನಿಮ್ಮ ತಂದೆಯವರನ್ನು ಅತ್ತೆಯವರು– "ಅದೇನು ನೀವು ಹಾಗೆ ಅವನನ್ನು ಒಂದು ಕ್ಷಣ ಒಂಟಿಯಾಗಿ ಬಿಡದೆ ಇದ್ದೀರಿ ? ಅವಳಿಗೆ ಅವನ ಕೈಕಾಲು ಹಿಸುಕಲು ಕೂಡ ಅವಕಾಶಕೊಡದೆ." ಎಂದರು ಆಕ್ಷೇಪಿಸುತ್ತಾ. ನಕ್ಕು ಹೊರಗೆ ಹೋದರು. ನಾನು ಪಕ್ಕನೆ ನಕ್ಕೆ.

ಹಿಂದಿನ ಘಟನೆಗಳ ಪುನರಾವಲೋಕನದಿಂದ ಪ್ರಸಾದ್‌ರಾವ್ ತುಟಿಗಳ ಮೇಲೆ ಕಿರುನಗೆ ಮೂಡಿ ಮಾಯವಾದವು.

"ಮಗೂ, ಪ್ರಸಾದ್, ಅನ್ನುವ ಕರೆ, ನೆನ್ನೆಗಿಂತ ಇವತ್ತು ವಾಸಿ ಅಲ್ವಾ" ಎನ್ನುತ್ತಾ ನನಗಾಗಿ ಕಳವಳಪಡುವ ಹೃದಯ. ಪಕ್ಕದಲ್ಲಿ ಕೂತು ತಲೆ ನೇವರಿಸಿ "ಏನೂ ಗಾಬರಿಪಡಬೇಡ. ನಾಳೆ ನಾರ್ಮಲ್ ಬಂದ್ಬಿಡುತ್ತೆ" ಎಂದು ಧೈರ್ಯ ಹೇಳುತ್ತಾ, ಕೆನ್ನೆ, ಕುತ್ತಿಗೆ ಮುಟ್ಟಿ ನೋಡುತ್ತಿದ್ದರು. ಆ ಸ್ಪರ್ಶದಲ್ಲಿನ ಅಭಯ–ನನಗೆಲ್ಲಿ ಲಭ್ಯವಾಗುತ್ತೆ ಗೋಪಾಲ? ಭಾರವಾಗಿ ಕಣ್ಣುಗಳನ್ನು ಮುಚ್ಚಿಕೊಂಡು ಸಂಕಟದಿಂದ ನಿಟ್ಟಿಸಿರು ಬಿಟ್ಟು, ಎರಡು ಕ್ಷಣ ಕಳೆದ ನಂತರ ಪುನಃ ಹೇಳಿದರು ಪ್ರಸಾದ್‌ರಾವ್.

ಯಾವ ಕೆಟ್ಟ ಘಳಿಗೆಯಲ್ಲಿ ಜೋಗಯ್ಯನ ಉದ್ಯೋಗದ ವಿಷಯದಲ್ಲಿ ನಮ್ಮಲ್ಲಿ ಭೇದಾಭಿಪ್ರಾಯ ಬಂತೋ, ದಿನೇ ದಿನೇ ನಮ್ಮ ಮಧ್ಯೆ ಮನಸ್ಪರ್ಧೆ ಏರ್ಪಟ್ಟಿತು. ವಿಧಿಯಿಲ್ಲದಿದ್ದಾಗ ಮಾತ್ರ ಒಂದೆರಡು ಮಾತುಗಳನ್ನಾಡುತ್ತಿದ್ದರು.

ಹಾಗೆ ಅವರು ಮಾತನಾಡದೆ ನನ್ನಿಂದ ದೂರ ಸರಿಯುತ್ತಿದ್ದುದು ನನಗೆ ಬಹಳ ಸಂಕಟವಾಗುತ್ತಿತ್ತು. ಅದಕ್ಕಿಂತ ರೂಮಿನಲ್ಲಿ ಹಾಕಿ ನಾಲ್ಕೇಟು ಬಿಗಿದು, ಮಾಮೂಲಿನಂತೆ "ಮಗು, ಪ್ರಸಾದ್" ಎಂದು ಕರೆದರೆ ಚೆನ್ನಾಗಿರುತ್ತದೆ ಎನಿಸುತ್ತಿತ್ತು. ಅವರೂ ಮಾನಸಿಕವಾಗಿ ಸಂಕಟಪಡುತ್ತಿದ್ದಾರೆಂದು ಗ್ರಹಿಸಿದೆ. ಆವಾಗಲೇ ನೋಡು! ಉರಿಯುವ ಬೆಂಕಿಗೆ ಆಜ್ಯ ಹುಯ್ದಂತೆ ನನಗೂ, ರಾಜಮ್ಮನಿಗೂ ಏನೋ ಅಕ್ರಮ ಸಂಬಂಧವಿದೆಯೆಂದೂ, ಅದರಿಂದಲೇ ಜೋಗಯ್ಯನ ಪರವಾಗಿ ಮಾವನೊಂದಿಗೆ ಜಗಳವಾಡಿದೆನೆಂದೂ ಕಲ್ಪಿಸಿದರು ಯಾರೋ. ಆ ಮಾತು ನಿಮ್ಮಕ್ಕನ ಕಿವಿಗೆ ಮುಟ್ಟಿತು. ಆಗ ಅವಳು ಒಂಟಿ ಜೀವವಲ್ಲ. ವಾಸು ಹೊಟ್ಟೆಯಲ್ಲಿದ್ದ. ಅಮೃತಮಯವಾದ ನಮ್ಮ ಅನುರಾಗದಲ್ಲಿ, ಸ್ವರ್ಗವೇ ಎಂದುಕೊಂಡಿದ್ದ ನಮ್ಮ ದಾಂಪತ್ಯ ಜೀವನದಲ್ಲಿ ಕಾಲಸರ್ಪ ವಿಷ ಕಕ್ಕಿತು. ನಿಮ್ಮಕ್ಕ ನನ್ನನ್ನು ಗಾಢವಾಗಿ ಪ್ರೇಮಿಸಿದ್ದಳು. ಗೋಪಿ! ಆ ಪ್ರೇಮ ದ್ವೇಷವಾಗಿ ಬದಲಾದಾಗ ಆ ವ್ಯಕ್ತಿ ತಾನೂ ಪತನವಾಗಿ ಸಂಬಂಧಪಟ್ಟ ವ್ಯಕ್ತಿಯನ್ನೂ ಹಿಂಸಿಸುವುದು ಸಹಜ. ಹೆಜ್ಜೆಹೆಜ್ಜೆಗೂ ಬೇಸರ, ನನ್ನನ್ನು ನೋಡಿದರೆ ಮೈ ಉರಿದುಹೋಗುತ್ತಿತ್ತು ನಿಮ್ಮಕ್ಕನಿಗೆ.

"ಏನೂ ಕಾರಣವಿಲ್ಲದೆಯೋ ಅಕ್ಕ ನಿಮ್ಮನ್ನ ಅಪಾರ್ಥ ಮಾಡಿಕೊಂಡ್ಳಾ?" ಅವರ ಮಾತಿನ ಮಧ್ಯೆ ಆಶ್ಚರ್ಯ ವ್ಯಕ್ತಪಡಿಸುತ್ತಾ ಕೇಳಿದರು ಗೋಪಾಲರಾವ್.

''ಹೇಳಿಕೆ ಮಾತುಗಳನ್ನು ಅವಳು ನಂಬಲಿಲ್ಲವೆಂದೇ ನನ್ನ ಭಾವನೆ. ಆಗಾಗ ಮಾತಿನ ಮಧ್ಯೆ ರಾಜಮ್ಮನ ಪ್ರಸಕ್ತಿ ತಂದು ಟೀಕಿಸುತ್ತಿದ್ದಳು. ನನಗೆ ಬಹಳ ಸಂಕಟವಾಗುತ್ತಿತ್ತು. "ನಿನ್ನ ಹೃದಯದಲ್ಲಿ ಅಂತಹ ಅನುಮಾನಕ್ಕೆ ಎಡೆ ಕೊಡಬೇಡ ಮಧೂ'' ಎಂದು ಮೃದುವಾಗಿ ಗದರಿಸುತ್ತಿದ್ದೆ. ನಿಮ್ಮಕ್ಕ ನಿಗೆ ಹೆರಿಗೆಯ ದಿನಗಳಾಗಿದ್ದವು. ಅವಳು ಹೇಗೋ ಬರುವುದಿಲ್ಲವೆಂದು ನಾನು, ಜೋಗಯ್ಯ, ರಾಜಮ್ಮ ಸಿನಿಮಾಗೆ ಹೋದೆವು. ಸೀಟ್ ನಂಬರ್ ಪ್ರಕಾರ ನಾನು, ರಾಜಮ್ಮ ಒಬ್ಬರ ಪಕ್ಕದಲ್ಲೊಬ್ಬರು ಕೂತೆವು. ರಾಜಮ್ಮ ಸಲುಗೆಯಿಂದ ಮಾತನಾಡುವ ವ್ಯಕ್ತಿ. ನಾವು ಪಿಕ್ಚರ್ ಪ್ರಾರಂಭವಾಗುವ ವರೆಗೂ ನಗುತ್ತಾ ಫ್ರೀಯಾಗಿ ಏನೇನೋ ಹರಟುತ್ತಾ ಇದ್ದೆವು. ಇಂಟರ್ ವಲ್‌ನಲ್ಲಿ ದೀಪಗಳು ಹೊತ್ತಿದವು. ಹಾಗೆಯೆ ಒಮ್ಮೆ ಹಿಂದಿನ ಸೀಟಿನಲ್ಲಿ ದೃಷ್ಟಿ ಹಾಯಿಸಿದೆ. ನಿಮ್ಮ ಅಕ್ಕ, ರಾಜು ಕುಳಿತಿದ್ದರು. ರಾಜು ನನ್ನನ್ನು ಕೆಂಗಣ್ಣಿನಿಂದ ನೋಡಿದ, ನಿಮ್ಮಕ್ಕ ಉದಾಸೀನದಿಂದ ತಲೆ ಬಗ್ಗಿಸಿ ''ಮನೆಗೆ ಹೇಗೋಣ ನಡಿ, ರಾಜು'' ಎನ್ನುತ್ತಾ ಎದ್ದು ನಿಂತಳು. ನನ್ನ ಹೃದಯದಲ್ಲಿ ಆಗ ಆದ ಆಂದೋಲನ ವರ್ಣನಾತೀತ. ಯಾಂತ್ರಿಕವಾಗಿ ಎದ್ದು ನಾನೂ ಅವರ ಹಿಂದೆಯೇ ಹೊರಗೆ ಬಂದೆ.

''ನೀವೇಕೆ ಬಂದಿರಿ ? ರೋಷದಿಂದ ಕೆಂಪಾದ ಕಣ್ಣುಗಳಲ್ಲಿ ನೀರು ಬರುತ್ತಿದ್ದರೆ ನನ್ನ ಕಡೆ ಕೋಪದಿಂದ ನೋಡುತ್ತಾ ಕೇಳಿದಳು ನಿಮ್ಮಕ್ಕ. ನನಗೆ ಮಾತುಗಳೇ ಹೊರಡಲಿಲ್ಲ. ತಪ್ಪುಮಾಡಿ ಸಿಕ್ಕಿಹಾಕಿಕೊಂಡಂತವ ನಾಗಿ ಏನೂ ತೋಚಲಿಲ್ಲ.'' ಎಂದು ಹೇಳುತ್ತ ಎರಡು ಕ್ಷಣಗಳ ನಂತರ ವಿಷಾದದ ನಗೆ ನಕ್ಕು ಹೇಳಿದರು. "ಇನ್ನೇನಿದೆ. ನಿಮ್ಮಕ್ಕನ ಅನುಮಾನ ದೃಢಪಟ್ಟಿತು. ಅವಳು ರೋಷದಿಂದ ಹದ್ದುಮೀರಿ ಮಾತನಾಡುವುದು, ನಾನು ಅವಳ ಮೇಲೆ ಕೈ ಎತ್ತುವುದೂ ಮನೆ ನರಕಪ್ರಾಯವಾಯಿತು. ಗೋಪಿ ! ಎಷ್ಟಾದರೂ ಆಗಲಿ ತಾಯಿ, ತಂದೆ ಸಹಿಸಬಲ್ಲರಾ ? ಅವರ ಎಮನಿನಲ್ಲೇ ಅವರು ಪ್ರೀತಿಸಿ, ಲಾಲಿಸುವ ನಿಮ್ಮ ಅಕ್ಕನ ನೋವು, ಸಂಕಟ, ಗೋಳು ಕೇಳಿ ಸಹಿಸಲಾರದೆ ಹೋದರು. ನಮಗೆ ಬುದ್ಧಿ ಹೇಳಲು ಆರು ತಿಂಗಳ ಕಾಲ ವೃಥಾ ಶ್ರಮಪಟ್ಟು ಆ ನಿರ್ಣಯಕ್ಕೆ ಬಂದರು. ನನ್ನನ್ನು ನಿಮ್ಮ ಅಕ್ಕ, ಎಲ್ಲರೂ ತುಂಬಾ ಅಸಹ್ಯಿಸಿಕೊಂಡರು, ಗೋಪಿ ! ನನ್ನ ಹಟವೂ ಹಾಗೇ ಮುಂದುವರಿಯಿತು."

"ಆದರೆ ಸುಮ್ಮನೇ ಅನುಮಾನಪಟ್ರಿ ಅಂತೀರಾ ?" ಒಂದು ವಿಧವಾಗಿ ನಗುತ್ತಾ ಕೇಳಿದರು ಗೋಪಾಲರಾವ್.

"ಇಲ್ಲ" ಸಾವಧಾನವಾಗಿ ಹೇಳಿದರು ಪ್ರಸಾದರಾವ್.

"ಮತ್ತೆ ?" ಆಶ್ಚರ್ಯದಿಂದ ಅವರ ಮುಖವನ್ನೆ ದಿಟ್ಟಿಸುತ್ತಾ ಕೇಳಿದರು ಗೋಪಾಲರಾವ್.

"ನಿಮ್ಮ ಅಕ್ಕ ಎಂದು ನನ್ನ ಮೇಲೆ ಅಸಹ್ಯಪಟ್ಟು ಹೀಯ್ಯಾಳಿಸಿ ನಾನು ಅವಳನ್ನು ಮುಟ್ಟೋದಕ್ಕೆ ಬಿಡಲಿಲ್ವೋ ಅಂದಿನಿಂದ ರಾಜಮ್ಮನೊಂದಿಗೆ ಸಂಬಂಧ ಬೆಳೆಸಿದೆ. ನಾನಂತಹವನು ಎಂದು ಎಲ್ಲರೂ ಅನುಮಾನಪಡುತ್ತಿದ್ದುದನ್ನ ಕಾರ್ಯರೂಪಕ್ಕೆ ತಂದೆ" ಆ ಮಾತಿನಲ್ಲಿ ಭಂಡತನ.

ಇಬ್ಬರ ಮಧ್ಯೆ ಕೆಲಕ್ಷಣ ಮೌನವಾಗಿ ಕಳೆಯಿತು. ಸುಮ್ಮನೆ ಸಿಗರೇಟ್ ಸುಟ್ಟುಹಾಕುತ್ತಿದ್ದರು ಗೋಪಾಲರಾವ್.

ಉಪಾದ್ಘಾತವೆಂಬಂತೆ ಸಣ್ಣಗೆ ಕೆಮ್ಮಿ ಮುಂದುವರೆಸಿದರು ಪ್ರಸಾದ್ ರಾವ್, "ಮಾನಸಿಕವಾಗಿ ಬೇಸರಹೊಂದಿದ ಮನುಷ್ಯ ಏನೋ ಸುಖ, ವಿಶ್ರಾಂತಿ ಬೇಕೆಂದು ತಪಿಸುತ್ತಾ, ಅದಕ್ಕಾಗಿ ಯಾವ ಕೆಲಸವನ್ನಾದರೂ, ಎಂತಹ ತಪ್ಪನ್ನಾದರೂ ಸರಿ ಎಂದೇ ಭಾವಿಸಿ ಮಾಡುತ್ತಾನೇನೋ ! ನಾನೂ ತಪ್ಪುದಾರಿಯಲ್ಲಿ ನಡೆಯುತಾ ಪ್ರತಿ ಕ್ಷಣದಲ್ಲಿ ಬೇಡವೆಂದು ಅಡ್ಡಪಡಿಸುತ್ತಿದ್ದ, ನಿಮ್ಮ ಅಕ್ಕನನ್ನು ಹಿಂಸೆಪಡಿಸುತ್ತಿದ್ದೆ, ಗೋಪಿ. ಅಂದಿನ ನನ್ನಲ್ಲಿನ ಬಲಹೀನತೆ ಅಷ್ಟು ಕುರುಡಾಗಿತ್ತು."

ಮತ್ತೆ ಕೆಲವು ಕ್ಷಣ ಮೌನ, ಚರ್ಚಿನ ಗಂಟೆ ಹತ್ತು ಹೊಡೆಯಿತು.

"ಬಹಳ ಹೊತ್ತಾಯ್ತು......ಮನೆ ಬಿಟ್ಟು ಹೊರಟುಹೋದ್ಮೇಲೆ ನಾನೇನ್ಮಾಡ್ದೆ ಅನ್ನೋದಲ್ವ ನಿನ್ನ ಪ್ರಶ್ನೆ ? ನಿಮ್ಮ ಮನೆಯಿಂದ ನೇರವಾಗಿ ರಾಜಮ್ಮನ ಮನೆಗೆ ಹೋದೆ. ಅಷ್ಟು ಹೊತ್ತಿಗಾಗಲೇ ಏನೋ ಗುಸಗುಸ ಅಂತಿದ್ರು ಅವರು. ಅವರ ಮನೆಯಲ್ಲಿ ನನಗೆ ಸಲುಗೆ ಇತ್ತಲ್ಲಾ, ರೂಮಿನಲ್ಲಿ ಕೂತು ರಾಜೀನಾಮೆ ಕಾಗದ ಬರೆದೆ. ಪ್ರಾವಿಡೆಂಟ್ ಫಂಡ್, ಆ ತಿಂಗಳು ನನಗೆ ಬರಬೇಕಾದ ಸಂಬಳ ನಿಮ್ಮ ಅಕ್ಕನ ಹೆಸರಿಗೆ ಬರೆದೆ. ಜೋಬು ಹುಡುಕಿ ನೋಡಿಕೊಂಡೆ. ಮೂರು ರೂಪಾಯಿ ಮಾತ್ರ ಇತ್ತು. ನನಗೆ ಹುಚ್ಚು ಹಿಡಿದಂತಾಯ್ತು. ಸತ್ತುಹೋಗ್ಬೇಕು ಎಂದುಕೊಂಡೆ. ನಿಮ್ಮನ್ನೆಲ್ಲಾ ಕೊಲೆಮಾಡಿಬಿಡಬೇಕು ಎನ್ನಿಸಿತು. ಆ ಆವೇಶದಲ್ಲಿ ಎಷ್ಟೋ ಆಲೋಚನೆಗಳು

ಬಂದನಂತರ ರಾಜಮ್ಮನನ್ನು ಮದುವೆಮಾಡಿಕೊಂಡು ನಿಮ್ಮಕ್ಕನ್ನ ಗೋಳಾಡಿಸ ಬೇಕು ಅಂತ ನಿರ್ಧರಿಸಿದೆ." ಸುಸ್ತಾದಂತೆ ಉಸಿರ್ರೆದರು ಪ್ರಸಾದರಾವ್.

"ಜೋಗಯ್ಯ" ಅಂತ ಗಟ್ಟಿಯಾಗಿ ಕೂಗಿದೆ. ಭಯಪಡುತ್ತಾ ಬಂದ ಜೋಗಯ್ಯ. "ಈ ಕಾಗದವನ್ನು ಆಫೀಸಿನಲ್ಲಿ ಕೊಟ್ಟಿಡು, ನಿಮ್ಮ ಅಕ್ಕ, ನಾನು ಈವತ್ತು ಹೊರಟುಹೋಗ್ತಿದ್ದೀವೆ" ಎಂದೆ. ಒಡನೆಯೇ, "ಅದು ಹೇಗೆ ಸಾಧ್ಯ ?" ಎಂದ ಜೋಗಯ್ಯ ತಡವರಿಸುತ್ತ ಧ್ವನಿಯನ್ನು ಸರಿಪಡಿಸಿ ಕೊಳ್ಳುತ್ತಾ, "ಯಾವುದು ಸಾಧ್ಯ ಇಲ್ಲ ?" ಎಂದು ಅಸಹನೆಯಿಂದ ಕೂಗಿ ಕೊಂಡೆ. "ಯಾವುದು ಸಾಧ್ಯವಿಲ್ಲ" ನಿರ್ಲಕ್ಷ್ಯದಿಂದ ಜವಾಬುಕೊಟ್ಟ ಜೋಗಯ್ಯ, ಆ ಧ್ವನಿ ಧೃಢವಾಗಿತ್ತು. ಅವನನ್ನು ಖೂನಿ ಮಾಡಬೇಕೆನ್ನಿಸು ವಷ್ಟು ಕೋಪ ಬಂತು ನನಗೆ. ಅವನ ಕನ್ನೆಗೆ ಬಲವಾಗಿ ಹೊಡೆದೆ. "ನಿನ್ನಿಂದ ಅಲ್ವೇನೋ ನಾನು ನಾಶವಾದದ್ದು ಎನ್ನುತ್ತಾ." "ಮರ್ಯಾದೆಯಿಂದ ಮಾತಾಡಿ. ಮೈಮೇಲೆ ಎಚ್ಚರವಿರಲಿ, ಈ ಮನೇಲಿ ನಿಮ್ಮನ್ನೇನು ಮಾಡಿದ್ರೂ ಅಡ್ಡಿಪಡಿಸೋವ್ರು ಯಾರೂ ಇಲ್ಲ, ಹುಷಾರ್" ಎಂದ ಜೋಗಯ್ಯ. ಕೋಪ ದಿಂದ, ನನ್ನನ್ನು ಈ ಜನ್ಮದಲ್ಲಿ ಬಿಡೋದಿಲ್ಲ ಎಂದು ಹೇಳಿದ ರಾಜಮ್ಮ, "ಹೊರಗೆ ಕಳಿಸಿಬಿಡೋ" ಎಂದಳು. ನನ್ನ ಕಣ್ಣಿಗೆ ಬಂದಿದ್ದ ಪೊರೆ ತೊಲಗಿತು. ನಿಶ್ಚೇಷ್ಟವಾಗಿ, ಏನುಮಾಡಲೂ ತೋಚದೆ ಬಿಳುಚಿಹೋಗಿ ನಿಂತಿದ್ದ ನನ್ನ ಭುಜ ಹಿಡಿದು, ಹೊರಗೆ ಕರೆದೊಯ್ಯುತ್ತಾ, "ನಮ್ಮನ್ನ ಬದುಕೋದಕ್ಕೆ ಬಿಡಿ. ಪುನಃ ನಮ್ಮ ಮನೆ ಹೊಸಿಲು ತುಳೀಬೇಡಿ, ನಿಮ್ಮ ರಾಜೀನಾಮೇನ ಪೋಸ್ಟ್‌ನಲ್ಲಿ ಕಳಿಸಿ, ದಯವಿಟ್ಟು ನಮ್ಮ ಅಕ್ಕನ ತಂಟೆಗೆ ಬರಬೇಡಿ. ಇಷ್ಟು ದಿನದ ವಿಷಯಾನೆ ಬೇರೆ. ಈವತ್ತು ಇಷ್ಟು ರಂಪಾಟ ಆದ್ಮೇಲೆ ನಿಮ್ಮ ಮಾವ ನಮ್ಮ ಅಕ್ಕನ್ನ ಏನು ಬೇಕಾದ್ರೂ ಮಾಡ್ತಾರೆ" ಎನ್ನುತ್ತಾ ಬೀದಿ ಯಲ್ಲಿ ಬಿಟ್ಟು ಧಡಾರನೆ ಬಾಗಿಲುಗಳನ್ನು ಹಾಕಿಕೊಂಡ. ನನ್ನನ್ನ ನೋಡಿದ ಕೂಡಲೆ ಬಗ್ಗಿ ನಮಸ್ಕರಿಸುತ್ತಿದ್ದ ಜೋಗಯ್ಯ, ಹೆಂಡತಿ, ಪ್ರೇಯಸಿ, ಅವರ ಆತ್ಮೀಯರು ನನ್ನನ್ನ ಒಂದೇರೀತಿ ಸನ್ಮಾನಿಸಿದರು. ಇನ್ನೇನು ಬೇಕು ಗೋಪಿ, ನನ್ನ ಜನ್ಮಕ್ಕೆ ? ಆತ್ಮಾಭಿಮಾನ ಇರುವ ಮನುಷ್ಯನ ಮನಸ್ಸು ಕಲ್ಲಾಗಲು ಇನ್ನೆಂತಹ ಅವಮಾನ ಆಗಬೇಕು ? ಸಾಂಸಾರಿಕ ಜೀವನವೆಂದರೆ ಅಸಹ್ಯ ವಾಯಿತು ರೆಸಿಗ್ನೇಷನ್ ಲೆಟರ್ ಪೋಸ್ಟ್ ಮಾಡಿದೆ. ಬೆರಳಲ್ಲಿದ್ದ ಉಂಗುರ ಮಾರಿ ತಿರುಪತಿಗೆ ಹೊರಟೆ." ಎನ್ನುತ್ತಾ ಆಕಳಿಸಿ "ಇನ್ನು ಸ್ವಲ್ಪ ಇದೆ, ಕೇಳು" ಎಂದರು ಪ್ರಸಾದರಾವ್.

ಮುಂದೇನು ಎಂದು ತೋಚದೆ ತಿರುಪತಿಯಲ್ಲೇ ಕೆಲವು ದಿನ ಕಳೆಯು ತ್ತಿದ್ದಾಗ ಒಂದು ದಿನ ಒಂದು ಹೋಟೇಲಿನ ಮುಂದೆ "ಇಲ್ಲಿದ್ದೀರಾ ?" ಎಂದು ನಗುತ್ತಾ ಪ್ರಶ್ನಿಸಿದಳು ರಾಜಮ್ಮ, ಹೌದು ಮದುವೆ ಮಾಡ್ಕೊಂಡೆ. ಅದ ಕ್ಕೋಸ್ಕರನೆ ಇಲ್ಲಿಗೆ ಬಂದೆ, ಮದುವೆ ಇಲ್ಲೇ ಆಯ್ತು" ಎಂದು ಹೇಳಿದೆ. ಈ ಮಾತು ಹೇಳಿದ ಉದ್ದೇಶ, ರಾಜಮ್ಮನನ್ನು ಗೋಳಾಡಿಸಬೇಕು, ಈ ಮಾತು ಅವಳ ಮುಖಾಂತರ ನಿಮ್ಮಕ್ಕನ ಕಿವಿಗೆ ಬಿದ್ದು ಅವಳು ಗೋಳಾಡಬೇಕು ಎಂಬುದೇ. ನನಗೆ ಆಗ ಎಲ್ಲರ ಮೇಲೂ ಕ್ರೋಧ. ಏನು ತಿನ್ನುತ್ತಿದ್ದೆನೋ, ಎಲ್ಲಿ ಸುತ್ತಾ ಡುತ್ತಿದ್ದೆನೋ ಜ್ಞಾಪಕ ಇಲ್ಲ, ಗೋಪಿ ! ಕೊಳೆಯಾದ ಬಟ್ಟೆ, ಕ್ಷೌರವಿಲ್ಲದ ಗಡ್ಡ–ಭಿಕಾರಿಯಂತಿದ್ದ ನನ್ನನ್ನ ಯಾತ್ರೆಗೆ ಬಂದಿದ್ದ ಚಿಕ್ಕಂದಿನ ಸ್ನೇಹಿತ ನೊಬ್ಬ ಗುರುತಿಸಿದ. ಅಂದಿನ ನನ್ನ ಪರಿಸ್ಥಿತಿ ಹೇಗಿತ್ತು ಗೊತ್ತಾ ? ಯಾರಾ ದರೂ ನನ್ನ ಆತ್ಮೀಯರು ಸಿಕ್ಕಿದರೆ ಅವರ ಎದೆಯಲ್ಲಿ ಮುಖ ಹುದುಗಿಸಿ ಗೊಳೋ ಎಂದು ಅಳಬೇಕೆನ್ನಿಸುತ್ತಿತ್ತು. ಹಾಗೇ ಮಾಡಿದೆ. ಅವನು ನನ್ನನ್ನ ಏಕಾಂತವಾಗಿ ಕರೆದೊಯ್ದು ವಿವರಗಳನ್ನೆಲ್ಲಾ ಕೇಳಿ ತಿಳಿದುಕೊಂಡು, ಸಹಾನುಭೂತಿಯಿಂದ ನನಗೆ ಸಹಾಯ ಮಾಡುವುದಾಗಿ ವಾಗ್ದಾನ ಮಾಡಿದ. ನನ್ನ ಹೊಟ್ಟೆ ಹೊರೆಯುವ ಸಲುವಾಗಿ ಯಾವ ಉದ್ಯೋಗವನ್ನಾದರೂ ಮಾಡುತ್ತೇನೆ ಎಂದೂ, ನನ್ನ ಡಿಗ್ರಿಯ ವಿಷಯವನ್ನೇ ಹೇಳಬೇಡಿ ಎಂದೆ. ನಮ್ಮ ಷಾಪ್ ಓನರ್‌ಗೆ ರೆಕಮೆಂಡ್ ಮಾಡಿದ. ಅವರಿಗೆ ಕೆಲವು ಬಸ್ ಲೈನುಗಳಿವೆ. ಅವರ ಬಳಿ ಐದು ವರ್ಷ ಬಸ್ ಕಂಡಕ್ಟರ್ ಕೆಲಸ ಮಾಡಿದೆ. ಆರೋಗ್ಯ ಹಾಳಾಯಿತು. ನಮ್ಮ ಓನರ್ ನನಗೆ ಸ್ನೇಹಿತರಾದರು. ಒಂದು ದಿನ ಅರ್ಜೆಂಟಾಗಿ ಏನೋ ಲೆಕ್ಕಪತ್ರಗಳನ್ನು ಡಿಪಾರ್ಟ್‌ಮೆಂಟಿಗೆ ಸಬ್ ಮಿಟ್ ಮಾಡಬೇಕಾಗಿ ಬಂದಾಗ ಆ ಗುಮಾಸ್ತೆ ಇಲ್ಲದ್ದರಿಂದ ಆ ಕೆಲಸವೆಲ್ಲ ವನ್ನೂ ಒಪ್ಪವಾಗಿ ನಾನು ಮಾಡಿದಾಗ ಇದನ್ನು ನೋಡಿದ ನಮ್ಮ ಓನರ್ ಆಶ್ಚರ್ಯದಿಂದ ? "ಎಲ್ಲಿಯವರೆಗೂ ಓದಿದ್ದೀರಿ ?" ಎಂದು ಕೇಳಿದರು. ಹೇಳಿ ದಾಗ ಅವರು ತಮಗೆ ಆ ವಿಷಯ ತಿಳಿಯದುದಕ್ಕಾಗಿ ಬೇಸರಪಟ್ಟು ಕೊಂಡು, ಇನ್ನು ಮುಂದೆ ಕಂಡಕ್ಟರ್ ಕೆಲಸ ಬೇಡ, ಅಕೌಂಟೆಂಟ್ ಕೆಲಸ ಮಾಡು ಎಂದು ಹೇಳಿದರು. ಅಂದಿನಿಂದ ಅವರ ಆಫೀಸಿನಲ್ಲಿ ಅಕೌಂಟೆಂಟ್ ಆದೆ. ನಾಲ್ಕು ವರ್ಷಗಳ ಕೆಳಗೆ ಒಂದು ಲಾಟರಿ ಟಿಕೆಟ್ ಕೊಂಡೆ, ಹತ್ತು ಸಾವಿರ ರೂಪಾಯಿ ಬಹುಮಾನ ಬಂತು." ಎಂದು ಹೇಳುತ್ತ ಒಡನೆಯೇ

ಏನೋ ಜ್ಞಾಪಕ ಬಂದಂತೆ "ನಾನು ಮನೆ ಬಿಟ್ಟು ಬಂದ ನಂತರ ಪ್ರಾವಿಡೆಂಟ್ ಫಂಡ್ ಹಣ, ನನ್ನ ಸಾಮಾನು ಎಲ್ಲವನ್ನೂ ದಾನ ಮಾಡಿದರಂತೆ, ನಿಜವೇನಾ ಗೋಪಿ?" ಎಂದು ಕೇಳಿದರು ಪ್ರಸಾದರಾವ್. ಆ ಧ್ವನಿಯಲ್ಲಿ ಕಾಠಿಣ್ಯವಿತ್ತು.

"ಹೌದು, ಅದೆಲ್ಲಾ ತಂದೆಯವರ ಅವಿವೇಕ" ಸಂಕೋಚದಿಂದ ಉತ್ತರ ಕೊಟ್ಟರು ಗೋಪಾಲರಾವ್.

"ಅವಿವೇಕವಲ್ಲದೆ ಇನ್ನೇನು, ನನ್ನ ಮಗ ಮಾತ್ರ ಬೇಕಾಯ್ತು, ನಿಮ್ಮ ಅಕ್ಕನಿಗೆ ನನ್ನ ಹಣ ಅಗತ್ಯವಿಲ್ಲದೆ ಹೋಯ್ತು. ಆ ಮಾತ್ಯಾಕೆ, ಏನೋ ಆಗೋಯ್ತು. ಲಾಟರಿಯಲ್ಲಿ ಬಂದ ಹಣವನ್ನ ಡಿಫೆನ್ಸ್ ಫಂಡ್‌ಗೆ ಕೊಡ್ತೀನಿ ಅಂತ ಓನರ್‌ಗೆ ಹೇಳ್ದೆ. ತಾನು ನಂಬಲಾರೆ ಎಂದು ಸ್ವಲ್ಪ ಹೊತ್ತೂ, ಏಕೆ ಹಾಗೆ ಮಾಡಬೇಕು ಎಂದು ಸ್ವಲ್ಪ ಹೊತ್ತು ನನ್ನೊಂದಿಗೆ ವಾದಿಸಿದರು. 'ನನಗ್ಯಾರೂ ಇಲ್ಲ. ನನಗೆ ಹಣ ಯಾಕೆ ಎಂದೆ. ನೀವು ಬದುಕಿದಷ್ಟು ದಿನ ಹಣ ಬೇಕು, ನೀವು ಸಾಯ್ತೀರಿ ಅನ್ನೋವಾಗ ಹಾಗೆ ಮಾಡ್ತೀರಂತೆ. ಆ ಹಣ ನನಗೆ ಕೊಟ್ಟು ನನ್ನ ವ್ಯಾಪಾರದಲ್ಲಿ ಭಾಗಸ್ಥರಾಗಿ ಎಂದು ಕೇಳಿದರು. ಎರಡು ಸಾವಿರ ರಕ್ಷಣಾ ನಿಧಿಗೆ ಕೊಟ್ಟು ಮಿಕ್ಕದ್ದನ್ನ ಬಂಡವಾಳವಾಗಿ ಹಾಕ್ದೆ. ಸನ್ಯಾಸಿ ಸಂಸಾರ ಕಟ್ಕೊಂಡಂತೆ ಹಣ ಸಂಪಾದಿಸಬೇಕು, ಅನ್ನೋ ಬುದ್ಧಿ ಹುಟ್ತು. ನಮ್ಮ ಓನರ್ ಬಹಳ ಒಳ್ಳೇವ್ರು. ಅವರ ರೈಸ್‌ಮಿಲ್‌ನಲ್ಲಿ, ಬಟ್ಟೆ ಅಂಗಡಿಯಲ್ಲಿ ನನ್ನನ್ನ ಭಾಗಸ್ಥನನ್ನಾಗಿ ಮಾಡ್ಕೊಂಡಿದ್ದಾರೆ. ಮೊನ್ನೆ ಒಂದು ಬಿಲ್ಡಿಂಗ್ ಕಂಟ್ರಾಕ್ಟ್ ತಗೊಂಡಿದ್ದೀನಿ. ಸಧ್ಯಕ್ಕೆ ಇರೋ ಈ ಮನೆ ಬಾಡಿಗೇದೇ.

ಇದು ನನ್ನ ಕಥೆ ಮಲಗೋಣ್ವಾ ? ಇದುವರೆಗೂ ಇದ್ದದ್ದು ಇದೊಂದೇ ಮಂಚ. ಇನ್ಮೇಲೆ ಮಗ ಬಂದುಹೋಗಿ ಮಾಡ್ತಾನಲ್ಲ ಅಂತ, ನೀನು ಕೂತಿರೋ ಮಂಚ, ಹಾಸಿಗೆ ಹಾಕಿಕೊಂಡೆ. ಯಾವುದಾದರೂ ರಜ ಇದ್ದರೆ ಬರಹೇಳು, ಗೋಪಿ. ಆವತ್ತು ಸರಿಯಾಗಿ ನೋಡ್ಲೇ ಇಲ್ಲ ಅವನ್ನ" ಎನ್ನುತ್ತಾ ಮಂಚದ ಮೇಲೆ ಉರುಳಿದರು ಪ್ರಸಾದರಾವ್.

"ನೀವು ಒಂದು ಸಲ ನಮ್ಮೂರಿಗೆ ಬರಬಾರ್ದ ಭಾವ ?" ಎಂದರು ಗೋಪಾಲರಾವ್, ತಾನೂ ಮಲಗುತ್ತಾ.

ತಲೆ ಅಲ್ಲಾಡಿಸಿ, "ಬರಲಾರೆ......ಏನೂ ತಿಳ್ಕೋಬೇಡ. ಹೀಗೆ ಎಲ್ಲ ಇದ್ರೂ ದೂರ ಇದ್ದೇ ನನ್ನ ಕಥೆ ಮುಗಿದುಹೋಗ್ಬೇಕು. ವಾಸು ಓದಿಗೆ

ನಾನು ಹಣ ಕೊಡ್ತಿದ್ದೀನಿ ಅನ್ನೋ ವಿಷಯ ನಿಮ್ಮ ಅಕ್ಕನಿಗೆ ತಿಳಿದ ದಿನ ನನ್ನ ಹಣ ಆಗ್ಲೀ, ನನ್ನ ಮುಖ ಆಗ್ಲೀ ಯಾರೂ ನೋಡಲಾರಿರಿ" ಎಂದರು ಪ್ರಸಾದರಾವ್, ಆ ಧ್ವನಿಯಲ್ಲಿ ಹಟ, ಕ್ರೋಧ ಇದ್ದವು.

"ಹೋಗ್ಲಿ ಬಿಡಿ ಭಾವ, ನಮ್ಮ ಅಕ್ಕನ ಸಮಾಚಾರ ಯಾಕೆ ? ನಿಮ್ಮ ಮಗನ ಪ್ರಯೋಜಕನನ್ನಾಗಿ ಮಾಡಿ. ಅಷ್ಟೇ ನನ್ನ ಪ್ರಾರ್ಥನೆ" ನೋವಿನಿಂದ ನುಡಿದರು ಗೋಪಾಲರಾವ್.

ಮಾರನೆಯ ದಿನ ಗೋಪಾಲರಾವ್ ಜೊತೆಯಲ್ಲಿ ಸ್ಟೇಷನ್‌ವರೆಗೂ ಹೋದರು ಪ್ರಸಾದರಾವ್. "ನಮ್ಮ ವಾಸೂನ ಇಷ್ಟರಲ್ಲೇ ಒಂದು ಸಲ ಕಳಿಸ್ತೀ ತಾನೆ ?" ಕದಲುತ್ತಿದ್ದ ರೈಲು ಪೆಟ್ಟಿಗೆಯಲ್ಲಿದ್ದ ಗೋಪಾಲ್‌ರಾವ್ ನನ್ನು ನೋಡುತ್ತಾ ಕೇಳಿದರು.

"ಆಗ್ಲಿ, ಅವನಿಗೆ ಹೇಳ್ತೀನಿ. ನೀವು ನಿಲ್ಲಿ" ನಕ್ಕರು ಗೋಪಾಲರಾವ್.

"ತನ್ನ ಜೀವನ ಇನ್ನೊಂದು ದಾರಿಯಲ್ಲಿ ತಿರುಗಿ ಪ್ರಯಾಣ ಮುಂದುವರಿಸುತ್ತಿದೆ" ಎಂದು ಮನಸ್ಸಿನಲ್ಲೇ ನಕ್ಕು ಮನೆಯ ಹಾದಿ ಹಿಡಿದರು ಪ್ರಸಾದರಾವ್.

ಂ ಂ ಂ ಂ

"ನಾವಿಬ್ಬರೂ ಊಟ ಮಾಡಿಬಿಡೋಣ ಬರ್ತಿಯಾ, ವಾಸು ?" ಪದ್ಮಜ ಕರೆದಳು. ಹತ್ತು ಹದಿನೈದು ದಿನಗಳಿಂದ ಒಂದೆರಡು ಮಾತುಗಳನ್ನಾಡಿ ಏರ್ಪಟ್ಟ ಸಲುಗೆ ಅಷ್ಟೇ. ಇನ್ನೂ ಕೆಲವು ವರ್ಷಗಳು ಒಂದೇ ಕಡೆ ಇರಬೇಕಾದವರಲ್ಲ ? ಆ ಹುಡುಗಿಯ ಬಳಿ ತನಗೆ ಸಂಕೋಚವೇಕೆ ? "ಮಾವನ ಮಗಳು" ತಾನೆ ಎಂದು ಮನಸ್ಸಿಗೆ ಬಂದೊಡನೆ ಅವನಲ್ಲಿ ಏನೋ ಒಂದು ರೀತಿಯ ಆತ್ಮೀಯತೆ ಬಗ್ಗಿ ನೋಡಿತು.

"ಅತ್ತೆ ಇಲ್ವಾ ?" ಅಪ್ರಯತ್ನವಾಗಿ ಪ್ರಶ್ನಿಸಿದ.

"ಅಮ್ಮಾ, ಸೀನು ಸಿನಿಮಾಗೆ ಹೋಗಿದ್ದಾರೆ, ಅಪ್ಪ ಊಟ ಮಾಡೋದಿಲ್ವಂತೆ" ಆ ಹುಡುಗಿಯ ಜವಾಬು.

ಮಾವನ ಮಗಳು ತಾನೆ ಎಂಬಭಾವನೆ ಬಂದರೂ ಅವನಿಗೇನೋ ಸಂಕೋಚವೇ. ರಾಜಶೇಖರ್ ಮಗಳು ಜಯ ಸಹ ಇದೇ ವಯಸ್ಸಿನವಳು, ಜಯ ಜೊತೆಯಲ್ಲಿ ಸಲುಗೆಯಿಂದ ಓಡಾಡುವ ತಾನು ಪದ್ಮಜಾನ ನೋಡಿದರೆ ಏಕೋ

ಹಿಂದೇಟು ಹಾಕ್ತಾನೆ ? ಜಯ ತಾನು ಮೊದಲಿನಿಂದ ಒಂಟೇ ಕಡೆ ಬೆಳೆದವರು. ಪದ್ಮಜ ಪರಿಚಯ ಈಗತಾನೆ ಆಗುತ್ತಿರುವುದು. ಅದಕ್ಕೇ ಇರಬೇಕು ಸಂಕೋಚ ಪ್ರಶ್ನೆ. ಅದಕ್ಕೆ ಉತ್ತರ ತನ್ನಷ್ಟಕ್ಕೆ ತಾನೇ ಹೋಚಿತು.

ಮೌನವಾಗಿ ಎರಡು ಕ್ಷಣ ಕಳೆದ ನಂತರ, "ನೀ ಯಾಕೆ ಹೋಗ್ಲಿಲ್ಲ ಸಿನಿಮಾಗೆ ?" ಎಂದು ಪ್ರಶ್ನಿಸಿದ.

"ನನಗೆ ಪರೀಕ್ಷೆ, ಓದ್ಕೋಬೇಕು ! ಬರ್ತೀರೋ ಇಲ್ವೋ ? ಅವರು ಬರೋ ವೇಳೆಗೆ ನಿಮ್ಮಿಬ್ಬರನ್ನೂ ಊಟಮಾಡಿ ಎಂದು ಹೇಳಿದ್ದಾರೆ ಅಮ್ಮ" ಪದ್ಮಜಳ ಧ್ವನಿಯಲ್ಲಿ ಬೇಸರ.

"ನೀ ಏನು ಓದಿದ್ದೀಯಾ ?" ಅವಳ ಹಿಂದೆ ಕೂಗುತ್ತಾ ಕೇಳಿದ ವಾಸು.

"ಫೋರ್ತ್ ಫಾರಂ ! ಬಹಳ ಹಿಂದೆ ನೋಡಿದ್ದ ಜಯಾನ. ನನಗೆ ಜ್ಞಾಪಕವೇ ಇಲ್ಲ, ಅವಳು ಯಾವ ಕ್ಲಾಸಿನಲ್ಲಿ ಓದ್ತಾ ಇದ್ದಾಳೆ ವಾಸು ?" ಎಂದು ಕೇಳಿದಳು ಪದ್ಮಜ. "ಅವಳೂ ಫೋರ್ತ್‌ಫಾರಂನಲ್ಲೇ ಓದ್ತಾ ಇರೋದು. ಬೆಳ್ಳಗೆ,ದಪ್ಪಗೆ ಚೆನ್ನಾಗಿ ಮಾತೂ ಆಡ್ತಾಳೆ." ತಟ್ಟೆಯ ಮುಂದೆ ಕೂಡುತ್ತಾ ಹೇಳಿದ ವಾಸು.

ಅವನು ಹಾಗೆ ಹೇಳಿದುದು ಪದ್ಮಜಾಗೆ ಹಿಡಿಸಲಿಲ್ಲ. ಮೌನವಾಗಿ ಇಬ್ಬರಿಗೂ ಬಿಡಿಸಿಕೊಂಡು ಅವನ ಪಕ್ಕದಲ್ಲೇ ಕೂತಳು. 'ಚೆನ್ನಾಗಿದ್ದಾಳೆ ಜಯ, ಚೆನ್ನಾಗಿ ಮಾತೂ ಆಡ್ತಾಳೆ' ಈ ಮಾತ್ರಗಳು ಪದ್ಮಜಳ ಎಳೆಯ ಹೃದಯದಲ್ಲಿ ಏನೋ ನೋವು, ಅಸೂಯೆಯನ್ನುಂಟುಮಾಡಿದವು. ವಾಸುವಿನ ತಟ್ಟೆಯಲ್ಲಿದ್ದ ಅನ್ನದ ಮೇಲೆ ಮೊಸರು ಬಡಿಸುತ್ತಾ, "ಅವರ ಮನೇಲಿ ಊಟ ಕೂಡ ಬಹಳ ಚೆನ್ನಾಗಿರುತ್ತಲ್ವಾ ?" ಎಂದಳು ಕೋಪದಿಂದ.

"ಯಾರ ಮನೇಲಿ ?" ಬಿಳುಚಿಹೋದ ವಾಸು.

"ಜಯ ಅವರ ಮನೇಲಿ !"

"ಯಾಕೆ ಹಾಗಂತಿದ್ದೀ ? ನಾನೇನಾದ್ರೂ ತಪ್ಪು ಮಾತನ್ನ ಹೇಳಿದೆನಾ ಪದ್ಮಜಾ ?" ಕಳವಳದಿಂದ ಆ ಹುಡುಗಿಯ ಮುಖ ನೋಡುತ್ತಾ ಕೇಳಿದ.

ತಾನೂ ಊಟ ಮುಗಿಸಿ, ಅವನ ಮಾತು ಕಿವಿಗೆ ಬೀಳಲಿಲ್ಲವೆಂಬಂತೆ ತಟ್ಟೆ, ಪಾತ್ರೆ ಸವರಿಸುತ್ತಿದ್ದಳು ಪದ್ಮಜಾ.

"ಹೇಳು ಪದ್ಮಜಾ, ಯಾಕೆ ಹಾಗಂದೆ? ನನಗೆ ದೊಡ್ಡ ಮಾವನ

ಮನೇಲಿ ಇಷ್ಟು ಸಲಿಗೆ ಇಲ್ವಲ್ಲಾ ! ಚಿಕ್ಕ ಮಾವ ಅಂದ್ರೆ ನನಗೆ ಬಹಳ ಇಷ್ಟ. ನಾ ಯಾವಾಗ್ಲೂ ಊಟ, ಮತ್ತು ಇನ್ನೇನೂ ಚೆನ್ನಾಗಿಲ್ಲ ಅಂತ ಹೇಳ್ಲಿಲ್ಲವಲ್ಲಾ ! ನೀ ಯಾಕೆ ಹಾಗೆ ಹೇಳ್ದೆ ? ನಿಮ್ಮ ತಾಯಿ ತಂದೆ ಏನಾದ್ರೂ ಮಾತಾಡಿಕೊಂಡ್ರಾ ನನ್ನ ವಿಷಯ ?" ಆತುರದಿಂದ ಕಳವಳ ತುಂಬಿದ ಧ್ವನಿಯಲ್ಲಿ ಪ್ರಶ್ನಿಸಿದ. ತನ್ನ ವರ್ತನೆಯಲ್ಲಿ ಏನಾದರೂ ಲೋಪವಿದೆಯೆ ? ಎಂದು ಹೆದರಿಬಿಟ್ಟ ವಾಸು.

"ನಮ್ಮ ತಾಯಿ ಅಂದ್ಕೊಂಡ್ರೆ ನಾನು ನಿನಗೆ ಹೇಳಬೇಕೇನು ? "ಮುಖ ತಿರುಗಿಸಿದಳು ಪದ್ಮಜ.

"ನಿಜವಾಗ್ಲೂ ಅಂದ್ಕೊಂಡ್ರಾ ? ಏನಂದ್ಕೊಂಡ್ರು ?" ವಾಸು ಹೃದಯ ಡವಡವನೆ ಹೊಡೆದುಕೊಂಡಿತು.

"ದೊಡ್ಡ ಮಾವನ ಮಗಳು ಜಯಾಂದ್ರೆ, ವಾಸೂಗೆ ಬಹಳ ಇಷ್ಟಾಂತ" ಬರುತ್ತಿದ್ದ ನಗುವನ್ನು ತಡೆದು ಹೇಳಿದಳು ಪದ್ಮಜ.

"ಫಕ್ಕನೆ ನಕ್ಕು, ಅಬ್ಬಾ ! ಬದುಕಿಸಿದೆ, ಇದೆಲ್ಲಾ ನಿನ್ನ ಊಹೇನಾ?" ಎಂದ ವಾಸು.

"ನಿಜವಾಗ್ಲೂ ನಿನಗೆ ಜಯ ಅಂದ್ರೆ ಇಷ್ಟ ಇಲ್ವಾ ?" ಕೇಳಿಬಿಟ್ಟಳು ಮನಸ್ಸು ಹಗುರವಾದಂತೆ.

"ನನಗೆ ಇಷ್ಟ ಇಲ್ದೇ ಇರೋವ್ರು ಯಾರು ? ಎಲ್ಲರೂ ಇಷ್ಟವೇ, ಇಷ್ಟ ಅಂದ್ರೆ ಪ್ರತ್ಯೇಕವಾದ ಅರ್ಥ ಇರುತ್ತೇನು ?" ಎಂದುಕೊಳ್ಳುತ್ತಾ ಗೋಪಾಲ ರಾವ್ ಕೊಠಡಿಗೆ ಹೋದ ವಾಸು.

ಪೇಪರ್ ಓದುತ್ತಿದ್ದ ಗೋಪಾಲರಾವ್, "ಬಾ. ಮಧ್ಯಾಹ್ನ ಮೂರು ಗಂಟೆಗೆ ಬಂದೆ, ನೀನು ಕಾಲೇಜಿಗೆ ಹೋಗಿದ್ದೆ'' ಎಂದರು ಪೇಪರ್ ಮಡಿಸುತ್ತಾ.

ಅವರು ಹೇಳುವ ಮಾತುಗಳನ್ನು ಕೇಳುವ ಸಲುವಾಗಿಯೇ ಬಂದಂತೆ ಗೋಪಾಲರಾವ್ ಪಕ್ಕದಲ್ಲಿ ಮೌನವಾಗಿ ಕುಳಿತ ವಾಸು.

"ವಿಶೇಷ ಏನಿಲ್ಲ. ರಜ ಬಂದಮೇಲೆ ನಿಮ್ಮ ತಂದೆಯವರನ್ನ ಹೋಗಿ ನೋಡಿದ ಮೇಲೆ ನಿಮ್ಮ ತಾಯಿಯ ಬಳಿ ಹೋಗು ಅಷ್ಟೆ. ನಿಮ್ಮ ತಂದೆಗೆ

ನಿನ್ನನ್ನ ನೋಡಬೇಕು ಅನ್ನಿಸಿದೆಯಂತೆ. ಕಾಗದ ಬರಿ, ರಜ ಬಂದಕೂಡ್ಲೆ ಬರ್ತೀನಿ ಅಂತ'' ಎಂದರು ಗೋಪಾಲರಾವ್.

○ ○ ○ ○

ಆವಸರ ಅವಸರವಾಗಿ ಬಟ್ಟೆಗಳನ್ನು ಜೋಡಿಸಿಕೊಳ್ಳುತ್ತಿದ್ದ ವಾಸು ವನ್ನು "ರಜ ಮುಗಿದೊಡನೆ ಬಂದ್ಬಿಡ್ತಿಯಲ್ಲಾ !'' ಎಂದು ಕೇಳಿದಳು ಪದ್ಮಜ. ಜಯಾನ ನೋಡ್ತಾನೆ ವಾಸು..... ''ದೊಡ್ಡ ಮಾವನ ಹತ್ತಿರವೇ ಇದ್ಬಿಡು ! ಪುನಃ ನಮ್ಮ ಮನೆಗೆ ಬರಬೇಡ. ಜಯ ಚೆನ್ನಾಗಿದ್ದಾಳೆ, ಚೆನ್ನಾಗಿ ಮಾತಾ ಡ್ತಾಳೆ. ಅವರೆಲ್ಲಾ ಒಳ್ಳೆವ್ರು, ನಿನಗಿಷ್ಟವಾದವರು. ಪುನಃ ನಮ್ಮ ಮನೆಗೆ ಬರಬೇಡ'' ಎಂದು ಹೇಳಿಬಿಡಬೇಕು ಎನಿಸಿತು ! ಅವನ ಕಡೆ ನೋಡಿದರೆ ತನ್ನ ಕಣ್ಣಿ ನೀರು ಬರುವಂತಿದೆ. ಅತ್ತೇನ ಬಾ ಅಂದ್ರೆ ಅವರೇ ಬರ್ತಾರೆ. ಇವನು ಯಾಕೆ ಹೋಗ್ಬೇಕೋ ಈಗ ? ಅವನು ಹೋಗುವಿಕೆಯನ್ನು ಆ ಹುಡುಗಿ ಸಹಿಸಲಾರದಾದಳು.

"ಇನ್ಯಾಕೆ ಇಲ್ಲಿಗೆ ಬರ್ತೀನಿ ? ಪುನಃ ಬರೋದಿಲ್ಲವಲ್ಲಾ ! ಅಲ್ಲೇ ಕಾಲೇಜ್‌ನಲ್ಲೇ ಸೀಟು ಸಿಕ್ಕಿದೆ ಬಾ ಅಂತ ದೊಡ್ಡ ಮಾವ ಕಾಗದ ಬರೆ ದಿದ್ದಾರಲ್ಲಾ ? ಅಲ್ಲೇ ಹಾಯಾಗಿ ಓದ್ಕೋತೀನಿ !" ಆ ಹುಡುಗಿಯ ಕಡೆ ತುಂಟತನದಿಂದ ನೋಡುತ್ತಾ ರೇಗಿಸಿದ ವಾಸು !

"ನಿಜವಾಗ್ಲೂ !'' ನಂಬಲಾಗದಂತೆ ನೋಡಿದಳು ಅವನ ಕಡೆ.

"ಸುಳ್ಳು ಹೇಳಬೇಕಾದ ಅಗತ್ಯ ನನಗೇನು ?"

"ಹಾಗಾದ್ರೆ ಮತ್ತೆ......ಇಲ್ಲಿಗೆ ಯಾಕೆ ಬಂದೆ ?" ಧ್ವನಿ ನಡುಗಿತು.

"ಚೆನ್ನಾಗಿದೆ ! ಬಂದೆ, ಪುನಃ ಹೊರಟುಹೋಗ್ತಿದೀನಿ, ಅದು ನನ್ನಿಷ್ಟ" ಬರುತ್ತಿದ್ದ ನಗುವನ್ನು ತಡೆಯುತ್ತಾ ಮುಖ ಪಕ್ಕಕ್ಕೆ ತಿರುಗಿಸಿದ ಪದ್ಮಜಳಿಗೆ ಕಾಣಿಸದಂತೆ.

''ನನ್ನ ಆಣೆ.''

"ತಾತನ ಆಣೆ !'' ನಕ್ಕುಬಿಟ್ಟ ವಾಸು, ತಾನೂ ನಕ್ಕಳು ಪದ್ಮಜ.

ಹೊರಟುಹೋಗುತ್ತಿದ್ದ ಅವನ ಕಡೆ ನೋಡುತ್ತಿದ್ದ ಪದ್ಮಜ ಏನೋ

ಕಳೆದುಕೊಂಡವಳಂತೆ ಹೆದರಿ ನಿಶ್ಚೇಷ್ಟಳಾಗಿ ನಿಂತುಬಿಟ್ಟಳು ಕೆಲ ಕ್ಷಣ. ಆ ನಿರ್ಮಲವಾದ ಕಣ್ಣುಗಳಲ್ಲಿ ಏನೋ ಒಂದು ವಿಧವಾದ ಆರಾಧನಾ ಭಾವನೆ.

೦ ೦ ೦ ೦

ಪ್ಲಾಟ್‌ಫಾರಂಗೆ ಬರುತ್ತಿದ್ದ ರೈಲಿನ ಪೆಟ್ಟಿಗೆಗಳನ್ನು ಆಸೆಯಿಂದ ವೀಕ್ಷಿಸಿದವು ಪ್ರಸಾದರಾವ್ ಕಣ್ಣುಗಳು.

''ಅಪ್ಪಾ, ಮುಂದೆ ಬನ್ನಿ" ಮೃದುಮಧುರವಾದ ಧ್ವನಿ.

ಬೆಚ್ಚಿದವರಂತೆ ಮುಂದೆ ನಡೆದರು ಪ್ರಸಾದರಾವ್..... ''ಅಪ್ಪಾ !" ಪುನಃ ಅದೇ ಕರೆ. ಆ ಕರೆ ಕೇಳುವ ದಿನಗಳು ಹತ್ತಿರವಾಗುತ್ತಿದೆ ಎನ್ನುವಾಗ, ಕೈಗೆ ಕೊಟ್ಟ ಹಣ್ಣನ್ನು ತಿನ್ನಲು ಬಿಡದೆ ಕಿತ್ತುಕೊಂಡಂತೆ, ಹಸು ಮಗುವಿನ ಬೋಸಿ ನಗುವನ್ನು ಮಾತ್ರವೇ ನೋಡಿ, ಆ ಮಗುವಿನ ನಾಲಿಗೆ ಮಾತು ಕಲಿಯುವ ವೇಳೆಗೆ ವಿಧಿ ಆತನನ್ನು ದೂರ ಬಿಸುಟಿತ್ತು. "ನನಗೆ ಮನೆ ಗೊತ್ತಿಲ್ಲಾ ? ಬಂದ್ಬಿಡ್ತಿದ್ದೆ ಬಿಸಿಲಲ್ಲಿ ಸ್ಟೇಷನ್‌ಗೆ ಯಾಕೆ ಬಂದ್ರಿ ?" ಆ ಧ್ವನಿ ಪ್ರಸಾದ್ ರಾವ್ ಕಿವಿಗಳಿಗೆ ಅತಿ ಹಿತವಾಗಿ ಕೇಳಿಸಿದವು. ಆಪ್ಯಾಯತೆಯಿಂದ ಪ್ರಶ್ನಿಸಿದ ವಾಸು.

"ನನಗೇನು ಬಿಸಿಲು ! ಈವತ್ತು ಬಹಳ ಲೇಟಾಯ್ತು ರೈಲು ಬರೋದು" ಎನ್ನುತ್ತಾ ವಾಸುವಿನ ಕೈಲಿದ್ದ ಬ್ಯಾಗನ್ನು ಅವನು ಬೇಡವೆನ್ನುತ್ತಿದ್ದರೂ ತೆಗೆದುಕೊಂಡರು ಪ್ರಸಾದರಾವ್.

"ನಿಮಗೆ ಗೊತ್ತಾಗ್ಲೀ ಅಂತ ಇಂತಹ ರೈಲಿನಲ್ಲಿ ಬರ್ತಿದ್ದೀನಿ ಅಂತ ಬರೆದೆನಾಗ್ಲೀ, ನೀವು ಸ್ಟೇಷನ್‌ಗೆ ಬರ್ಬೇಕು ಅಂತಾ ? ಯಾತಕ್ಕೋಸ್ಕರ ತೊಂದರೆ ತಗೊಂಡು ಬಂದ್ರಿ, ಅಪ್ಪಾ ?'

ಆ ಮಾತು ಯಾವುದೋ ದಿವ್ಯಲೋಕಕ್ಕೆ ಕೊಂಡೊಯ್ದಿತು, ಪ್ರಸಾದ ರಾವ್‌ರನ್ನು. ಅವರ ಹೃದಯ ಪುತ್ರವಾತ್ಸಲ್ಯದಿಂದ ತುಂಬಿಹೋಯಿತು. ವಾಸುವಿನ ಭುಜದ ಸುತ್ತಲೂ ಕೈಹಾಕಿ ನಡೆಯುತ್ತಾ, "ಎಲ್ಲಾ ಚೆನ್ನಾಗಿದಾರಾ ? ನಿನ್ನ ಆರೋಗ್ಯ ಚೆನ್ನಾಗಿದೆಯಾ ? ಚೆನ್ನಾಗಿ ಓದ್ತಾ ಇದ್ದೀಯಾ? ಹಣ ಸಾಕಾಗುತ್ತಾ ? ಮಾವನ ಮನೇಲಿ ಅವರೇನೂ ಬೇಸರಪಟ್ಕೊಳ್ಳೋದಿಲ್ವಾ ?' ಎಂದು ಒಂದೇ ಸಮನಾಗಿ ಆತುರದಿಂದ ಪ್ರಶ್ನಿಸುತ್ತಿದ್ದರೆ ವಾಸು ಮುಗುಳ್ನಗುತ್ತಾ, ''ನನ್ನ ಆರೋಗ್ಯ ಚೆನ್ನಾಗೇ ಇದೆ, ಬರಿ ಅಂತ ಹೇಳಿದ್ದಿ

ರಲ್ಲಾ. ಕ್ಲಾಸ್ ಬರಬೇಕು ಅಂತ ಆಸೆ ಇರೋವಾಗ ಕಷ್ಟಪಟ್ಟು ಓದದೇ ಇದ್ರೆ ಹೇಗೆ? ಮಾವ ಅವರು......ಅವರ‍್ಯಾಕೆ ಬೇಸರಪಡ್ತಾರೆ? ಬೇಸರ ಪಡ್ಕೊಂಡ್ರೂ ಹೋಗ್ತಿರಲಿಲ್ವಾ ಆಗ?" ಎಂದ ವಾಸು.

ಪ್ರಸಾದರಾವ್ ವದನ ವಿವರ್ಣವಾಯಿತು.

ಪ್ರಸಾದರಾವ್ ಮನಸ್ಸು ನೊಂದಿತೆಂದು ಗ್ರಹಿಸಿದ ವಾಸು ಒಡನೆಯೇ, "ಚಿಕ್ಕಮಾವ, ಅತ್ತೆ, ಮಕ್ಕಳು ಬಹಳ ಒಳ್ಳೇವ್ರು, ಅಪ್ಪಾ!" ಎಂದ.

"ಅವರೆಲ್ಲಾ ಒಳ್ಳೆಯವರಾದ್ದರಿಂದ್ಲೇ ಅವರ ಆಶ್ರಯದಲ್ಲಿ ಇಷ್ಟು ದೊಡ್ಡವನಾಗಿ ಬೆಳೆದೆ. ಅವರಲ್ಲದೆ ಇಂದು ನೀನು ಹುಡುಕಿಕೊಂಡ ತಂದೆ ಒಳ್ಳೇಯವನಾ? ಅದಲ್ಲ ನಾ ಹೇಳಿದ್ದು....ನನ್ನ ಹತ್ತಿರವೇ ಇದ್ದು ಓದಿ ಕೊಂಡ್ರೆ......?"

ಅವರು ಏಕೆ ಹಾಗೆ ಹೇಳಿದರೋ, ಆ ಮಾತಿನ ಅರ್ಥವೇನೋ ಗ್ರಹಿಸ ಲಾರದ ವಾಸು ಮೌನವಾಗಿ ತಲೆತಗ್ಗಿಸಿ ನಡೆಯುತ್ತಿದ್ದ. ಇಬ್ಬರೂ ಪ್ಲಾಟ್ ಫಾರಂನಿಂದ ಹೊರಬಂದು ರಿಕ್ಷಾ ಹತ್ತಿದರು.

ತನ್ನ ಮಗ ಎಂದೂ, ಕಾಲೇಜಿನಲ್ಲಿ ಓದುತ್ತಿದ್ದಾನೆಂದೂ, ತನ್ನ ಸ್ನೇಹಿತ ರಿಗೆ ಜೊತೆಯ ವ್ಯಾಪಾರಸ್ಥರಿಗೆ ಪರಿಚಯ ಮಾಡಿಕೊಟ್ಟರು ಪ್ರಸಾದರಾವ್. ಎಲ್ಲರಿಗೂ ವಿನಯದಿಂದ ನಮಸ್ಕರಿಸಿದ ವಾಸು.

ತಂದೆ ಎರಡು ದಿನ ತೋರಿಸಿದ ಆದರ ಅಭಿಮಾನದಿಂದ ವಾಸು ಮುಗ್ಧ ನಾಗಿದ್ದ. ಸೋದರ ಮಾವಂದಿರ ಪ್ರೀತಿಯಲ್ಲಿ ಲಭಿಸದಿದ್ದ ಏನೋ ಆತ್ಮೀ ಯತೆ ಪ್ರಸಾದರಾವ್‌ನಲ್ಲಿ ದ್ಯೋತಕವಾಯಿತು ವಾಸುವಿಗೆ. ಅಂತರ್ಗತ ವಾಗಿದೆ ರಕ್ತಸಂಬಂಧ ವಾಸುವಿನ ಬಾಯಲ್ಲಿ 'ಅಪ್ಪಾ' ಎಂದು ಪ್ರೀತಿಯಿಂದ ಕರೆಯುವಂತೆ ಮಾಡಿತ್ತು. ಆ ಕರೆಯಿಂದ ಪ್ರಸಾದರಾವ್ ವಾತ್ಸಲ್ಯಪರವಶ ರಾದರು, "ಮಗೂ! ವಾಸೂ!" ಎಂದು ಅತ್ಯಂತ ಪ್ರೀತಿಯಿಂದ ಸಂಭೋದಿ ಸುತ್ತಿದ್ದರು ವಾಸುವನ್ನು.

"ಈವತ್ತು ಸಾಯಂಕಾಲ ಹೋಗ್ತೀನಿ ಅಪ್ಪಾ?" ತನ್ನನ್ನಾವರಿಸಿದ್ದ ಯಾವುದೊ ಮತ್ತು ಬಿಟ್ಟಂತಾಗಿ ಬೆಚ್ಚಿ, "ಹೊರಟುಹೋಗ್ತೀಯಾ? ಆಗ್ಲೇ? ಇನ್ನೂ ರಜೆ ಇದೆ ಅಲ್ವಾ?" ಎಂದರು ಪ್ರಸಾದರಾವ್.

"ನೋಡಬೇಕೆನ್ನಿಸಿದೆ ಅಂತ ಅಮ್ಮ ಕಾಗದ ಬರೆದಿದ್ದಾರೆ" ಸಾವಧಾನ ದಿಂದ ಹೇಳಿದ ವಾಸು.

ಎರಡು ನಿಮಿಷ ಏನೋ ಆಲೋಚಿಸುತ್ತಿರುವಂತೆ ಮೌನವಾಗಿದ್ದು ಬಿಟ್ಟು "ಸರಿ, ಇವತ್ತು ದಿನ ಚೆನ್ನಾಗಿಲ್ಲ. ನಾಳೆ ಸಂಜೆ ಗಾಡಿಗೆ ಹೋಗು !" ಎಂದು ಹೇಳಿ ಕ್ಷಣಕಾಲ ವಾಸುವಿನಿಂದ ಜವಾಬೇನೂ ಬಾರದಿರಲು, "ಏನ್ ಮಗೂ ! ಪುನಃ ರಜ ಸಿಗೋವರೆಗೂ ನೀನು ಇಲ್ಲಿಗೆ ಬರೋದಿಲ್ಲ ಅಲ್ವಾ ? ಅದ ಕ್ಕೋಸ್ಕರ......! ಎನ್ನುತ್ತಾ ವಾಸುವಿನ ಮುಖ ನೋಡಿದರು ಪ್ರಸಾದರಾವ್.

"ಸರಿ, ನಿಮ್ಮಿಷ್ಟ. ಹಾಗೇ ಆಗಲಿ. ನಾಳೇನೇ ಹೋಗ್ತೀನಿ" ಎಂದ ವಾಸು.

೦ ೦ ೦ ೦

"ವಾಸು ಏನಂತ ಬರೆದಿದ್ದ ಕಾಗದದಲ್ಲಿ ?" ಮಗಳನ್ನು ಕೇಳಿದರು ಜಾನಕಮ್ಮ.

"ರಜ ಬಂದ್ಮೇಲೆ ಬರ್ತೀನಿ ಅಂತ ಬರೆದಿದ್ದಾನೆ. ಕಾಲೇಜಿಗೆ ರಜ ಬಂದು ನಾಲ್ಕು ದಿವಸ ಆಯ್ತೇನೋ ? ಗೋಪಿ ಏನು ಹೇಳಿದನೋ ?" ಎಂದಳು ಮಧುಮತಿ.

"ಏನೋ ? ಬೇಡಾ ಅಂದ್ರೇನೋ, ಫೀಜು, ಪುಸ್ತಕಗಳು, ಊಟ, ತಿಂಡಿ ಅಲ್ದೆ ರೈಲ್ ಛಾರ್ಜ್ ಕೂಡ ಕೊಡಬೇಕು ಅಂದ್ರೆ ಕಷ್ಟ ಅಲ್ವಾ ? ಹೋಗ್ಲಿ ಬಿಡು. ಬಂದಾಗ್ಲೇ ನೋಡೋಣ, ಎಲ್ಲಾ ಬೇಕೂಂದ್ರೆ ಹೇಗೆ ?"

ಜಾನಕಮ್ಮನ ಮಾತುಗಳು ನಗ್ನಸತ್ಯವೇ ಆಗಿದ್ರೂ ಮಧುಮತಿಯ ಹೃದಯವನ್ನು ಛಿದ್ರಗೊಳಿಸಿತು. ಥಟ್ಟನೆ ಕಣ್ಣುಗಳಲ್ಲಿ ನೀರು ತುಂಬಿತು. ತನ್ನ ದುರದೃಷ್ಟಕ್ಕೆ ಮೌನವಾಗಿ ರೋದಿಸಿದಳು ಮಧುಮತಿ.

೦ ೦ ೦ ೦

ಹಬ್ಬದ ದಿವಸಗಳಾದ್ದರಿಂದ ಅಂಗಡಿಯಲ್ಲಿ ರಷ್ ಇತ್ತು. ಟೆರಿಲಿನ್, ಉಲ್ಲನ್, ಟೆರ್ರಿಕಾಟ್ ಇನ್ನೂ ಯಾವ್ಯಾವುದೋ ಹೆಚ್ಚಿನ ಬೆಲೆಯ ಪ್ಯಾಂಟ್, ಷರ್ಟ್ ಬಟ್ಟೆಗಳನ್ನು ತೋರಿಸುತ್ತಾ, ''ನಿನಗೆ ಇಷ್ಟವಾದದ್ದನ್ನ ಒಂದು ನಾಲ್ಕು ಜೊತೆ ತಗೋ" ಎಂದರು ಪ್ರಸಾದರಾವ್.

ಚಕಿತನಾಗಿ ನೋಡಿದ ವಾಸು ಅಪ್ರತಿಭನಾದ ಅವನ ಮನಸ್ಸೆಲ್ಲೆಲ್ಲೋ ಓಡಿತು. ತಾನೆಂದೂ ಮಾವಂದಿರ ಜೊತೆಯಲ್ಲಿ ಅಂಗಡಿಗೆ ಹೋಗಿ ತನಗಿಷ್ಟ ವಾದ ಬಟ್ಟೆಗಳನ್ನು ಆರಿಸಿರಲಿಲ್ಲ. ''ನಿನಗೆ ಈ ಬಟ್ಟೆ ಬೇಕಾ ?" ಎಂದು

ಯಾರೂ ತನ್ನನ್ನು ಪ್ರಶ್ನಿಸಿರಲಿಲ್ಲ. ದಯಾಧರ್ಮ ಭಿಕ್ಷೆಯಾಗಿ ಅಜ್ಜಿಯೋ, ಮಾವಂದಿರೋ ಅವರಿಗೆ ತೋಚಿದ್ದನ್ನು ಹೊಲಿಸುವುದೂ, ತಾನು ಅವನ್ನೇ ಹಾಕಿಕೊಳ್ಳುವುದೂ ಪದ್ಧತಿಯಾಗಿತ್ತು. ದೊಡ್ಡ ಮಾವ, ಅತ್ತೆ, ಅವರ ಮಕ್ಕಳು, ಹಬ್ಬಕ್ಕೆ ಬಟ್ಟೆ ಕೊಳ್ಳಲು ಅಂಗಡಿಗೆ ಹೋಗುತ್ತಿದ್ದರೆ ಹೊಸ್ತಿಲು ಬಳಿ ನಿಂತು, ಅವರ ಅದೃಷ್ಟವನ್ನು ಮೆಚ್ಚುತ್ತಾ, ಅವರನ್ನೇ ನೋಡುತ್ತಿದ್ದರೆ, ಅವರ ಅಮ್ಮ, ''ವಾಸು, ಇಲ್ಲಿ ಬಾ, ಯಾಕೆ ಹಾಗೆ ನೋಡೋದು ಅವರು ಹೋಗ್ತಿದ್ರೆ" ಎಂದು ಗದರಿಸುತ್ತಿದ್ದರು. ಕಣ್ಣೊರಸಿಕೊಳ್ಳುತ್ತಾ ಜಯ, ಚಂದ್ರ ಅವರು ಬಟ್ಟೆಗಳನ್ನು ತೋರಿಸಿದರೆ, ಎಷ್ಟು ಚೆನ್ನಾಗಿದೆ ಎಂದು ಆಶ್ಚರ್ಯದಿಂದ ನೋಡುತ್ತಿದ್ದ ತಾನು, ಚಂದ್ರ ಹಾಕಿಕೊಂಡು ಹಳೆಯದಾದ ಬಟ್ಟೆಗಳನ್ನು ತನಗೆ ಕೊಡುತ್ತಿದ್ದರು ಅತ್ತೆ. ಚಿಕ್ಕಮಾವ ಬಂದಾಗ ತನಗೆ, ಅಮ್ಮನಿಗೆ, ಅಜ್ಜಿಗೆ ಬಟ್ಟೆಗಳನ್ನು ಕೊಂಡುತರುತ್ತಿದ್ದರು.

''ವಾಸು, ಬೇಗ ತಗೋ !" ಪ್ರಸಾದರಾವ್ ಧ್ವನಿ ಕೇಳಿ ಹಿಂದಿನ ಸ್ಮರಣೆ ಚೆದುರಿಹೋಯಿತು.

''ಬಟ್ಟೆಗಳಿವೆ ಅಪ್ಪಾ ! ಈಗ್ಯಾಕೆ ?" ತನಗರಿವಿಲ್ಲದೆಯೇ ವಾಸುವಿನ ಧ್ವನಿ ನಡುಗಿತು.

''ಅಲ್ಲಾ ! ಅಪ್ಪ ಕೇಳಿದಾಗ ಯಾವ ರೀತಿ ಬಟ್ಟೆ ಆರಿಸಬೇಕು ಅನ್ನೋದು ನಿನಗೆ ಗೊತ್ತಿದ್ರೆ ತಾನೆ ?" ಎನ್ನುತ್ತಾ ತಾನೇ ಕೆಲವು ಒಟ್ಟೆಗಳನ್ನು ಆರಿಸಿ ಪ್ಯಾಕ್ ಮಾಡಿಸಿದರು ಪ್ರಸಾದರಾವ್.

o o o o

"ಅಬ್ಬಾ ! ಕಣ್ಣುಗಳು ಕಾಯಿಕಟ್ಟಿ ಹೋದವು" ಎರಡು ಕೈಗಳಿಂದಲೂ ವಾಸುವಿನ ತಲೆ ಹಿಡಿದು ಮುತ್ತುಕೊಟ್ಟಳು ಮಧುಮತಿ.

"ನನ್ನ ಕಾಗದ ಬಂತಾ ?" ಅಜ್ಜಿ ಎಲ್ಲಿ ?" ಕೇಳಿದ ವಾಸು.

''ರಜ ಬಂದ ಒಡನೆಯೇ ಬರ್ಲ್ಲಿ ಅಂದ್ಕೊಂಡಿದ್ದೆ. ಬರೋವ್ನು ಹೇಗೋ ಬಂದೆ. ಇಷ್ಟು ದಿನ ಯಾಕೆ ತಡಮಾಡ್ದೆ ? ವಾಸೂ !" ಎನ್ನುತ್ತಾ ಅವನ ಕೈಯಲ್ಲಿದ್ದ ಬ್ಯಾಗ್ ತೆಗೆದುಕೊಂಡು, ''ಪೆಟ್ಟಿಗೆ, ಹೋಲ್ಡಾಲ್ ತಂದಿದ್ದೀ. ಎಷ್ಟು ದಿನ ರಜ ಇದೆ ?" ಎಂದಳು ಮಧುಮತಿ ವಾಸುವಿನ ಕಡೆ ಆಶ್ಚರ್ಯದಿಂದ ನೋಡುತ್ತಾ.

ಇಂತಹ ಪ್ರಶ್ನೆಗಳು ಬಂದೆ ಬರುತ್ತೆ ಅನ್ನೋದು ಊಹಿಸಿ ಮೊದಲೇ ಪ್ರಿಪೇರ್ ಆಗಬೇಕಿತ್ತು. ಏನು ಹೇಳಬೇಕೋ ತೋಚದೆ ಬಾತ್ ರೂಂ ಕಡೆ ನಡೆದ ವಾಸು.

ರಾಜಶೇಖರ್ ಮಕ್ಕಳು ಜಯ, ಚಂದ್ರ 'ವಾಸು......ವಾಸು ಬಂದ' ಎನ್ನುತ್ತಾ ಓಡಿ ಬಂದರು "ಅಬ್ಬಾ ! ಎಷ್ಟು ದಿವಸ ಆಗಿಹೋದಂತಿದೆ ! ನೀನು ಬರೋದೇ ಇಲ್ಲವೇನೋ ಅಂದುಕೊಂಡ್ವಿ" ಎನ್ನುತ್ತಾ ಅಗಲವಾದ ಕಣ್ಣು ಗಳನ್ನು ಬಿಟ್ಟು ಆಪ್ಯಾಯತೆಯಿಂದ ವಾಸುವಿನ ಕಡೆ ನೋಡಿದಳು ಜಯ.

"ಬರದೇ ಏನು ? ನನಗೆ ಮಾತ್ರ ಎಲ್ಲರನ್ನೂ ನೋಡಬೇಕು ಅನ್ನಿಸೋ ದಿಲ್ವಾ ?'' ಮುಗುಳ್ನಗುತ್ತಾ ಉತ್ತರಿಸಿದ ವಾಸು.

ರಾಜಶೇಖರ್ ಹೆಂಡತಿ ಸುಂದರಮ್ಮ ಬಂದು ವಾಸುವಿನ ಕಡೆ ಪರಿ ಶೀಲನಾ ದೃಷ್ಟಿಯಿಂದ ನೋಡುತ್ತಾ ''ಲಕ್ಷ್ಮಿಯ ಮಕ್ಕಳು ಎಲ್ಲಾ ಚೆನ್ನಾ ಗಿದ್ದಾರಾ ವಾಸು ?" ಎಂದು ಕೇಳಿದರು.

"ಎಲ್ಲಾ ಚೆನ್ನಾಗಿದ್ದಾರತ್ತೆ ! ಮಾವ ಇದ್ದಾರಾ, ಕ್ಯಾಂಪಿಗೆ ಹೋಗಿ ದ್ದಾರಾ ?" ಇದುವರೆಗೂ ಹೆದರಿಕೆ ಇರುತ್ತಿದ್ದ ಆ ಧ್ವನಿಯಲ್ಲಿ ಏನೋ ಧೈರ್ಯ ಕಂಡುಬರುತ್ತಿತ್ತು.

ಅವನನ್ನು ನಖಶಿಖಪರ್ಯಂತ ಪರಿಶೀಲಿಸಿ ನೋಡಿದ ಸುಂದರಮ್ಮ, 'ಅಬ್ಬಾ ! ಎಷ್ಟು ಬದಲಾಯಿಸಿಬಿಟ್ಟಿದ್ದಾನೆ. ಈ ಚುರುಕು, ಈ ಧೈರ್ಯ ಹೇಗೆ ಬಂತು ? ಆ ಮಾವ ಏನು ಭರವಸೆ ಕೊಟ್ಟಿದ್ದಾನೋ !' ಎಂದು ಮನಸ್ಸಿನಲ್ಲಿ ಅಂದುಕೊಳ್ಳುತ್ತಾ, 'ಊರಲ್ಲೇ ಇದ್ದಾರೆ. ಚೆನ್ನಾಗಿ ಆಗಿದ್ದಿ. ಆ ಊರಿನ ಗಾಳಿ, ನೀರು ಚೆನ್ನಾಗಿ ಒಗ್ಗಿದಂತಿದೆ !' ಎಂದು ನಕ್ಕರು, ಒಂದು ಮಾಧರಿಯಾಗಿ ನೋಡುತ್ತಾ.

ಅಡಿಗೆ ಮನೆಯಲ್ಲಿದ್ದ ಜಾನಕಮ್ಮನ ಎರಡು ಕಣ್ಣುಗಳನ್ನೂ ಹಿಂದಿ ನಿಂದ ಹೋಗಿ ಮುಚ್ಚಿ ಮುಗುಳ್ನಕ್ಕ ವಾಸು.

''ಲೋ ಚಂದ್ರಿ, ಒದೀತೀನಿ ! ಕೈ ತೆಗಿ !" ಅಂಗಡಿಯಿಂದ ತಂದ ತರ ಕಾರಿ ಚೀಲವನ್ನು ಕೆಳಗೆ ಹಾಕಿ, ತನ್ನ ಕಣ್ಣುಗಳನ್ನು ಮುಚ್ಚಿದ್ದ ಎರಡು ಕೈ ಗಳನ್ನು ಹಿಡಿದುಕೊಂಡರು ಜಾನಕಮ್ಮ.

''ನೀನು ತರಕಾರಿ ತರೋಕೆ ಹೋಗಿದ್ಯಾ ಅಜ್ಜೀ ?" ಎಂದ ವಾಸು, ಒಡನೆಯೇ ಕೈಬಿಟ್ಟು ಅವರ ಕಡೆ ನೋವಿನಿಂದ ನೋಡುತ್ತಾ.

"ನನ್ನ ಕಂದ! ನೀ ಯಾವಾಗ ಬಂದೆ?....ನೀ ಹೊರಟುಹೋದೆ ಯಲ್ಲಾ! ಮತ್ತೆ ಯಾರು ತರ್ತಾರೆ, ಮಗು!" ವಾಸುವನ್ನು ಹತ್ತಿರಕ್ಕೆಳೆದು ಕೊಂಡರು. ಆಪ್ಯಾಯಮಾನದಿಂದ ತಲೆ ನೇವರಿಸುತ್ತಾ ಕಣ್ಣೊರಸಿಕೊಂಡರು ಜಾನಕಮ್ಮ.

"ಛೆ! ಮಾವನ ಮನೆ ಆಳಿನ ಕೈಲಿ ತರಿಸ್ಕೋಬಾರದಾಗಿತ್ತಾ?" ಎಂದ ಖಿನ್ನನಾಗಿ. ಮನೋವ್ಯಥೆಯಿಂದ ಕುಗ್ಗಿ ಇನ್ನೂ ಹತ್ತು ವರ್ಷ ಹೆಚ್ಚು ವಯಸ್ಸಾದಂತೆಯೇ ಕಾಣುತ್ತಿದ್ದರು, ಬಾಗಿದ್ದ ನಡುವಿಗೆ ಕೈಕೊಟ್ಟು ನಿಂತಿದ್ದ ಜಾನಕಮ್ಮ.

"ನನ್ನ ಕಂದ! ನೀನು ಕಲೆಕ್ಟರ್ ಆದ ದಿನ ಪುನಃ ಆಳು, ಕಾಳು-ತಾತನ ಕಾಲದಲ್ಲಿ ಹೇಗೆ ಭರ್ಜರಿಯಾಗಿ ನಡೀತೋ ಹಾಗೆ ನಡೆದುಹೋಗುತ್ತೆ. ತಹಶೀಲ್ದಾರರು ಕೀಳು ಕೆಲಸಗಳೇನೂ ಮಾಡದೆ ದಾಟಿಕೊಂಡರು. ಅದೃಷ್ಟ ವಂತರು. ನೋವು, ಕಷ್ಟ ಎಲ್ಲವನ್ನೂ ಭರಿಸೋದಕ್ಕೆ ನಾ ಉಳಿದಿದ್ದೀನಿ."

ಇನ್ನೂ ಹಾಗೆಯೇ ಸಾಗುತ್ತಿದ್ದ ಅವರ ಧೋರಣೆಗೆ ಅಡ್ಡಿ ಬರುತ್ತಾ, "ಅಮ್ಮಾ" ಎಂದು ಕರೆದಳು ಮಧುಮತಿ ಗಟ್ಟಿಯಾಗಿ.

ವಾಸುವಿನ ಪ್ರತಿ ಹೆಜ್ಜೆಯಲ್ಲೂ ಏನೋ ಹೊಸ ರೀತಿಯನ್ನು ಕಂಡ ಮಧುಮತಿಯ ಮನಸ್ಸು ಪಾದರಸದಂತೆ ಎಲ್ಲ ಕಡೆಗೂ ಓಡಿದವು. ಏನು ಇಷ್ಟು ಚುರುಕಾಗಿ ತೋರುತ್ತಿದ್ದಾನೆ. ಭಯದಿಂದ ಬೆದರುವ ಕಣ್ಣುಗಳು ತೀಕ್ಷ್ಣ ವಾಗಿ ಮೆರೆಯುತ್ತಿವೆಯಲ್ಲಾ? ಒಂದೇ ಸಲ ಮನುಷ್ಯನಲ್ಲಿ ಇಷ್ಟು ಬದಲಾವಣೆ ಆಗಿದೆ ಎಂದರೆ ಏನೋ ಸಾಕಷ್ಟು ಕಾರಣ ಇರುತ್ತೆ!" ಅವನನ್ನು ನೋಡು ತ್ತಿದ್ದ ಮಧುಮತಿಗೆ ತನ್ನಿಂದ ತನ್ನ ಮಗನನ್ನು ಯಾರೋ ಬೇರೆ ಮಾಡು ತ್ತಿದ್ದಂತೆ ಭಾಸವಾಯಿತು. ಏನೋ ಬಲವಾದ ಅನುಮಾನ. ಸರಸರನೆ ಅವನು ತಂದ ಸಾಮಾನಿನ ಮೇಲೆ ಅವಳ ದೃಷ್ಟಿ ಹರಿಯಿತು.

ಜಾನಕಮ್ಮ, ಜಯಾ, ಚಂದ್ರ ಇವರ ಜೊತೆಯಲ್ಲಿ ಹರಟುತ್ತಾ, ನಗುತ್ತಾ ಅಡಿಗೆಯ ಮನೆಯಲ್ಲಿ ಊಟ ಮಾಡುತ್ತಿದ್ದ ವಾಸು.

ಎಲ್ಲರೂ ಹೇಳುತ್ತಿದ್ದ ಮಾತುಗಳಲ್ಲಿ ವಿಶ್ವಾಸವಿಡದೆ ಕುರುಡು ನಂಬಿಕೆ ಯಿಂದ ಅಂದು ಗಂಡನ ಪತನಕ್ಕೆ ದಾರಿ ಮಾಡಿಕೊಟ್ಟ ಬುದ್ಧಿಹೀನೆ ತಾನು.

ಇಂದು ತನ್ನ ಮಗ?.....ಅವಳಿಗೆ ನಿಲ್ಲಲಾಗದೆ ಹೋಲ್ಡಾಲ್ ಬಿಚ್ಚಿದಳು. ಬೆಲೆಬಾಳುವ ಹೊಸ ಬಟ್ಟೆಗಳು "ವಾಸು!" ಅವಳ ಧ್ವನಿ ತೀವ್ರವಾಗಿತ್ತು.

ಕೈ ತೊಳೆದು ಟವಲ್‌ನಿಂದ ಒರೆಸಿಕೊಳ್ಳುತ್ತಾ, "ಏನಮ್ಮಾ! ಕರೆದೆಯಾ?" ಎಂದು ನಕ್ಕ ವಾಸು.

ಆ ಧ್ವನಿಯಲ್ಲಿದ್ದ ಆಪ್ಯಾಯತೆ, ಅವನ ಮುಖದಲ್ಲಿನ ಸೌಮ್ಯತೆ ನೋಡಿದ ಮಧುಮತಿ ಕರಗಿಹೋದಳು. "ಪಾಪ, ಯಾರದೋ ಹೋಲ್ಡಾಲ್ ತಂದಿರಬೇಕು. ವಾಸೂ! ಮಾವನ ಹೋಲ್ಡಾಲ್ ಇದಕ್ಕಿಂತ ದೊಡ್ಡದಲ್ವಾ? ಅಷ್ಟು ಗೊತ್ತಾಗಲಿಲ್ವಾ? ನೋಡು, ಈ ಬಟ್ಟೆಗಳು? ಪಾಪ, ಅವರೆಷ್ಟು ಒದ್ದಾಡ್ತಿದ್ದಾರೋ!" ಎಂದಳು ಥಟಕ್ಕನೆ ಏನೋ ಅರ್ಥವಾದಂತೆ ನಗುತ್ತಾ.

ಮೊದಲನೆಯ ಸಲ ಅಮ್ಮನೊಂದಿಗೆ ಸುಳ್ಳು ಹೇಳಬೇಕು! ಅವರನ್ನು ವಂಚಿಸಬೇಕು, ತನಗಾಗಿಯೇ ಜೀವಿಸುತ್ತಿರುವ ತಾಯಿಗೆ ಸುಳ್ಳು ಹೇಳಬೇಕು! ತನ್ನ ತಾಯಿ ಸಂತೋಷವನ್ನೇ ಮರೆತುಹೋಗಿರುವ ತನ್ನ ತಾಯಿ..........ಆ ಎಳೆಯ ಮನಸ್ಸು ನಲುಗಿಹೋಯಿತು. ಕಾಲೇಜ್ ಓದು.... ತನ್ನ ಭವಿಷ್ಯತ್ತು...... ಫೀಜು, ಪುಸ್ತಕಗಳು.....ಇವಕ್ಕೆ ಬೇಕಾದ ಹಣ.....ವಿಕಸಿಸಲಿರುವ ತನ್ನ ಭವಿಷ್ಯತ್ತು......ಆ ಭವಿಷ್ಯತ್ತಿಗೆ ಬಲವಾದ ಪಾಯ ಹಾಕುತ್ತಿರುವ ತಂದೆ...... ಅವರ ಆದೇಶ......ಅವರಿಗಿತ್ತ ವಾಗ್ದಾನ–ಇವೆಲ್ಲಾ ಯೋಚಿಸಿ ಸುಸ್ತಾದ ವಾಸುವಿನ ಮುಖ ಕಳಾಹೀನವಾಯಿತು. ಮಧುಮತಿಯನ್ನು ನೋಡುತ್ತಿದ್ದ ಕಣ್ಣುಗಳು ಹೋಲ್ಡಾಲ್ ಕಡೆ ತಿರುಗಿದವು. ನಾಲ್ಕು ಪ್ಯಾಂಟ್ ಬಟ್ಟೆಗಳು, ಷರ್ಟ್ ಬಟ್ಟೆಗಳು, ಟವಲುಗಳು, ಬನಿಯನ್ಸ್, ಎರಡು ದುಪ್ಪಟಿ, ಹೋಲ್ಡಾಲ್ ಹಿಡಿಸುವಂತಹ ಹಾಸಿಗೆ, ದಿಂಬು ಇವೆಲ್ಲವನ್ನೂ ಕಂಡ ವಾಸುವಿನ ಕಣ್ಣುಗಳು ಚಿದುರಿಹೋದವು. "ಅಪ್ಪಾ" ಎಂದು ಆಕ್ರೋಶಿಸಿತು. ಮನಸ್ಸು, ಪುತ್ರ ವಾತ್ಸಲ್ಯ ಪ್ರೇಮ ವಾಸುವಿನ ಕಣ್ಣುಗಳಲ್ಲಿ ನೀರಿನ ಪೊರೆ ತರಿಸಿತು.

"ಏನು ಹಾಗೆ ನೋಡ್ತಿದ್ದೀ! ಹುಚ್ಚನ ಹಾಗೆ! ಯಾರದೋ ಹೋಲ್ಡಾಲ್ ತಂದುಬಿಟ್ಟಿದ್ದೀ ಅಲ್ವಾ?...." ಅವನು ಹಾಗೆ ಹೇಳುವುದನ್ನು ಕೇಳಬೇಕೆಂದಿತ್ತು ಅವಳ ಮನಸ್ಸು.

"ಇಲ್ಲಾ, ನನ್ನದೇ ಅಮ್ಮ!" ಗುಂಡಿಗೆಯಲ್ಲಿ ಧೈರ್ಯವನ್ನು ತುಂಬಿಕೊಳ್ಳುತ್ತಾ ಏನಾದರೂ ಆಗಲಿ ಎಂಬಂತೆ ತಲೆ ತಗ್ಗಿಸಿದ.

ಕ್ಷಣದಲ್ಲಿ ಮಧುಮತಿಯ ವದನ ಉದಾಸೀನವಾಗಿ ಬದಲಾಯಿಸಿತು. ಒಂದು ಸಲ ವಾಸುವಿನೆಡೆ ಚುರುಕಾಗಿ ನೋಡಿ, ಮಾವ ಇಷ್ಟು ಬಟ್ಟೆಗಳನ್ನ ಕೊಡಿಸಿದ ಅಂದ್ರೆ ನಾನು ನಂಬಲಾರೆ. ಈವತ್ತಲ್ಲದಿದ್ರೂ, ಎಂದಾದ್ರೂ ನನಗೆ ನೀನು ನಿಜ ಹೇಳಬೇಕು. ಯಾರು ತೆಗೆಸಿಕೊಟ್ರೊ ಈ ಬಟ್ಟೆಗಳನ್ನ ? ಇದು ನನಗೆ ಗೊತ್ತಾಗಬೇಕು. ನೀನೇನೋ ಭಯಪಡುತ್ತಿರುವಂತೆ ತೋರುತ್ತಿದೆ. ಮತ್ತೆ......ಮತ್ತೆ ಜೀವನದಲ್ಲಿ ಮೋಸಹೋಗಲಾರೆ......ನೀನೂ ಮೋಸ ಮಾಡಿದರೆ ! ನಾನು ಬದುಕುವುದಿಲ್ಲ......"

ಇನ್ನೂ ಹೀನವಾದ ಬದುಕು ನನಗೆ ಬೇಕಿಲ್ಲ–ಎಂದು ತೀವ್ರವಾಗಿ ಎಚ್ಚರಿಸುವಂತೆ ಹೇಳಿದಳು ಮಧುಮತಿ.

"ಅಮ್ಮಾ !" ಅಪ್ರತಿಭನಾದ ವಾಸು. ಉದಾಸೀನದಿಂದ ಸರಸರನೆ ಆ ಬಟ್ಟೆಗಳನ್ನು ಸರಿಪಡಿಸಲು ಹೊರಟುಹೋದಳು ಮಧುಮತಿ.

ಆಫೀಸಿನಿಂದ ಬಂದ ರಾಜಶೇಖರ್, "ಏನೋ ? ಯಾವಾಗ ಬಂದೆ ? ಹೇಗಿದೆ ಕಾಲೇಜ್ ಓದು ?" ಎಂದು ಮುಸಿ ಮುಸಿ ನಗುತ್ತಾ ಕೇಳಿದರು.

"ಈಗಲೇ ಆಫೀಸಿನಿಂದ ಬಂದೆಯಾ ? ಓದಿಗೇನು, ಕಾಲೇಜಿಗೇನು ? ಚೆನ್ನಾಗೇ ಇವೆ" ಎಂದ ತಾನೂ ಮುಗುಳ್ನಗುತ್ತಾ.

ಮೊಮ್ಮಗನಿಗೆ ಪ್ರೀತಿಯಿಂದ ಬಡಿಸುತ್ತಾ ದೊಡ್ಡ ಮಾವ "ಮಕ್ಕಳಿಗೆಲ್ಲಾ ಬಟ್ಟೆ ತಂದಿದ್ದಾನೆ, ಕೆಟ್ಟ ಬುದ್ಧಿ. ನಿನಗೊಂದು ಜೊತೆ ತಂದುಕೊಟ್ಟರೆ ತಪ್ಪಾ ! ಹೋಗಲಿ ಬಿಡು, ನಾಳೆ ಕಾಮಯ್ಯನ ಅಂಗಡಿಗೆ ಹೋಗಿ ಯಾವುದಾದರೂ ಸಾಧಾರಣವಾಗಿರೋದನ್ನ ಒಂದು ಜೊತೆ ತಗೋ, ಹೇಗೋ ಹಣ ಸರಿಮಾಡಿ ಬಾಕಿ ತೀರಿಸಿಬಿಡ್ತೀನಿ" ಎಂದರು ಜಾನಕಮ್ಮ ವಾಸುವಿನ ಕಡೆ ಕರುಣೆಯಿಂದ ನೋಡುತ್ತಾ.

"ನನ್ನ ಹತ್ತಿರ ಹೊಸ ಬಟ್ಟೆಗಳಿವೆ ಅಜ್ಜಿ ! ಅಮ್ಮ, ನೀನು ಒಂದೊಂದು ಸೀರೆ ತಗೊಂಡ್ರೆ ನನಗೆ ಸಂತೋಷ !" ಕೈ ತೊಳೆಯುತ್ತಾ ಹೇಳಿದ ವಾಸು.

"ವಾಸೂ......! ಮಹಡಿಯ ಮೇಲೆ ಹೋಗಿ ಸ್ವಲ್ಪ ಹೊತ್ತು ಹರಟೋಣ, ಬರೋದಿಲ್ವಾ ?" ಜಯಳ ಕರೆಗೆ ಮುಗುಳ್ನಕ್ಕು, 'ನಡಿ ಬರ್ತೀನಿ' ಎನ್ನುತ್ತಾ ಅವಳನ್ನು ಅನುಸರಿಸಿದ ವಾಸು. ಚಿಕ್ಕಂದಿನಿಂದ ಒಂದು ವಿಶೇಷವಾದ ಸಲುಗೆ, ಸ್ನೇಹ ಇತ್ತು ಇಬ್ಬರ ಮಧ್ಯೆ ! ವಾಸುವಿನ ದೃಷ್ಟಿಯಲ್ಲಿ ಜಯ ಅಂದವಾಗಿರುವ

ಒಳ್ಳೆಯ ಹುಡುಗಿ. ವಾಸು ಬುದ್ಧಿವಂತನಾದ ಬಡ ಹುಡುಗ ಎನ್ನುವ ಕರುಣೆ, ಅಭಿಮಾನ ಜಯಳ ಹೃದಯದಲ್ಲಿ ವಾಸುವಿನ ಬಗ್ಗೆ.

"ವಾಸು, ಇಲ್ಲಿ ಇದ್ದುದಕ್ಕಿಂತ ಈಗ ಏನೋ ಬದಲಾಯಿಸಿರುವಂತೆ ಕಾಣುತ್ತಿರುವೆಯಲ್ಲಾ. ಕಾಲೇಜಿನಲ್ಲಿ ಓದ್ತಿದ್ದೀ ಅಂತ್ಲಾ ?" ಮುಗ್ಧಳಂತೆ ಪ್ರಶ್ನಿಸಿದಳು ಜಯ.

"ಕಾಲೇಜಿನಲ್ಲಿ ಓದಿದರೆ ಮನುಷ್ಯರೇ ಬದಲಾಯಿಸಿಬಿಡ್ತಾರಾ ?" ನಕ್ಕ ವಾಸು.

"ಅದಲ್ಲ ವಾಸೂ !"

"ಮತ್ತೆ ?"

"ಅದೇನೋ ನನಗೊತ್ತಿಲ್ಲ" ಇಬ್ಬರೂ ಫಕ್ಕನೆ ನಕ್ಕರು. ನಂತರ ಓದು, ಸ್ಕೂಲು, ಸಿನಿಮಾಗಳೂ, ತನ್ನ ಸಂಗೀತ ಕುರಿತು ಮಾತನಾಡಿದಳು ಜಯ.

ತನ್ನ ಕಾಲೇಜು, ಅಲ್ಲಿ ಹೇಗೆ ಪಾಠ ಹೇಳುತ್ತಾರೋ, ಪದ್ಮಜ, ಶೀನು ಅಲ್ಲಿಯ ವಿಷಯಗಳನ್ನೆಲ್ಲಾ ಹೇಳಿದ ವಾಸು.

"ಸಂಗೀತ ಎಲ್ಲಿಯವರೆಗೆ ಬಂದಿದೆ? ನಾಚಿಕೆ ಬಿಟ್ಟು ಹಾಡುವುದಕ್ಕೆ ಇನ್ನೂ ಬರೋದಿಲ್ವಾ ?" ಕೇಳಿದ ವಾಸು.

"ಈಗ ಕೀರ್ತನೆಗಳನ್ನು ಹೇಳ್ಕೊಡ್ತಾ ಇದ್ದಾರೆ. ನಾನು ಈಗ ಹಾಡೋದಿಲ್ಲ..... ನಾಳೆ " ನಾಚಿ ನುಡಿದಳು ಜಯ.

"ಮತ್ತೆ ಹೋಗಿ ಮಲಕ್ಕೋತೀನಿ. ಪ್ರಯಾಣ ಅಲ್ವಾ ? ಮೈ ಪಚ್ಚಡಿ ಆಗಿಹೋಗಿದೆ !" ಎದ್ದು ನಿಂತ ವಾಸು.

o o o o

ದೂರದಲ್ಲಿದ್ದ ಚರ್ಚಿನಲ್ಲಿ ಹತ್ತು ಗಂಟೆ ಹೊಡೆಯಿತು. ನಿಶ್ಶಬ್ದ ಆವರಿಸಿತ್ತು ಮನೆಯನ್ನು. ಆ ಮನೆಯಲ್ಲಿನ ವ್ಯಕ್ತಿಗಳೆಲ್ಲಾ ನಿದ್ರೆ ಹೋಗಿದ್ದಾರೆಂದು ಸೂಚಿಸುತ್ತಾ, ಆದರೆ ಬಿಸಿ ಉಚ್ವಾಸ, ನಿಶ್ವಾಸಗಳಿಂದ ತೀವ್ರವಾಗಿ ಯಾವುದೋ ಆಲೋಚನೆಯಲ್ಲಿ ಮುಳುಗಿದ ವ್ಯಕ್ತಿಗಳಿಬ್ಬರು ವಾಸು, ಮಧುಮತಿ.

"ಅಮ್ಮಾ !" ಮೆಲ್ಲಗೆ ಕರೆದ ವಾಸು, ಆ ಕರೆಯಲ್ಲಿ ನೋವು.

"ಏನಪ್ಪಾ ! ನಿದ್ದೆ ಮಾಡಲಿಲ್ವಾ ?" ವಾತ್ಸಲ್ಯಪೂರಿತವಾದ ಪ್ರಶ್ನೆ.

"ಇಲ್ಲಮ್ಮಾ! ನಿನ್ನ ಹತ್ರ ಮಾತಾಡ್ಬೇಕೂಂತ....." ಎನ್ನುತ್ತಾ ಅವಳ ಪಕ್ಕದಲ್ಲಿ ಕೂತ ವಾಸು.

ಇಬ್ಬರ ಮಧ್ಯೆ ಮೌನ ಸಾಮ್ರಾಜ್ಯವಾಳಿತು ಎರಡು ಕ್ಷಣ. ಪ್ರೀತಿ ಯಿಂದ ವಾಸುವಿನ ಬೆನ್ನು ನೇವರಿಸುತ್ತಾ, "ಏನು ಮಾತಾಡಬೇಕು ವಾಸೂ!" ಎಂದು ಕೇಳಿದಳು ಮಧುಮತಿ. ಆ ಬಟ್ಟೆಗಳನ್ನು ಅವನಿಗೆ ಯಾರು ಕೊಡಿ ಸಿದರೆಂಬ ವಿಷಯವೇ ಅವನು ಹೇಳಬೇಕೆಂದಿರುವುದೆಂದು ಅವಳಿಗೆ ಗೊತ್ತು.

"ಅಮ್ಮಾ, ನನ್ನನ್ನು ಕೆಟ್ಟವನೆಂದೂ, ನಿನಗೆ ಅನ್ಯಾಯ ಮಾಡುವವ ನೆಂದೂ ಅಂದ್ಕೋಬೇಡಮ್ಮಾ!" ವಾಸುವಿನ ಧ್ವನಿ ಸ್ವಲ್ಪ ನಡುಗಿತು.

"ತಾಯಿಯಾಗಿ ನಾ ಏಕೆ ಹಾಗಂದ್ಕೊತೀನಿ? ಮಗನ ತಪ್ಪುಗಳನ್ನು ಮುಚ್ಚಿಟ್ಟು ಅವನ ಕ್ಷೇಮವನ್ನು ಕೋರೋದೇ ಅಲ್ವಾ ತಾಯಿಯ ಕರ್ತವ್ಯ......" ಆ ಧ್ವನಿಯಲ್ಲಿ ನಿಷ್ಠುರ, ನೋವು.

"ನಾನು ದೊಡ್ಡ ಓದು ಓದೋದೂ, ಒಳ್ಳೇ ಬಟ್ಟೆಗಳನ್ನು ಹಾಕ್ಕೊ ಳ್ಳೋದು ನಿನಗಿಷ್ಟವೇ ಅಲ್ವಾ?" ಆ ಎಳೆಯನ ಧ್ವನಿಯಲ್ಲಿ ಏನೋ ಸ್ಥಿರ ಗಾಂಭೀರ್ಯ. ಅವನು ಹೇಳುವ ಮಾತಿಗೆ ಪೀಠಿಕೆಯಂತಿರುವ ಅವನ ಪ್ರಶ್ನೆ ಗಳನ್ನು ಕೇಳಿ ಕಳವಳಪಟ್ಟು ಬೆಚ್ಚಿದಳು ಮಧುಮತಿ. ವಯಸ್ಸಿನಲ್ಲಿ ಚಿಕ್ಕವ ನಾದ ಅವನ ವಾಕ್ಚಾತುರ್ಯ ನೋಡಿ ಕೆಲವು ಕ್ಷಣ ಯಾವ ಮಾತನ್ನೂ ಆಡದೆ ಮೌನ ವಹಿಸಿದಳು ಮಧುಮತಿ – "ಯಾಕೆ ಇಷ್ಟವಿಲ್ಲ, ಇಷ್ಟವೇ. ನನ್ನ ಮಗ ಅಸ್ವತಂತ್ರನಾಗೋದನ್ನ ಹಕ್ಕಿಲ್ಲದ ಹಣವನ್ನ ಅನುಭವಿಸುವುದನ್ನ ಸಹಿಸ ಲಾರೆ. ನನ್ನನ್ನ ಬಿಟ್ಟು ಹಣಕ್ಕೆ ತನ್ನನ್ನೇ ತಾನೇ ಮಾರಿಕೊಳ್ಳೋ ಅಳಿಯ ನಾಗೋದಾಗ್ಲೀ, ದತ್ತುಪುತ್ರನಾಗಿ ಹೋಗೋದು ನನ್ನ ಪ್ರಾಣವಿರೋವರ್ಗೂ ನಾನು ಒಪ್ಪುವುದಿಲ್ಲ. ಹಾಗೆ ತನ್ನನ್ನ ತಾನೇ ಮಾರ್ಕೊಂಡು ಕಲೆಕ್ಟರ್ ಉದ್ಯೋಗ ಮಾಡೋದಕ್ಕಿಂತ, ಈ ಸ್ಕೂಲ್ ಫೈನಲ್‌ಗೆ ಓದು ನಿಲ್ಲಿಸಿ ಒಂದು ಗುಮಾಸ್ತೆ ಕೆಲಸ ಮಾಡಿದ್ರೂ ನಿನ್ನ ಆಶ್ರಯದಲ್ಲಿ ಗರ್ವದಿಂದ ಬದುಕಬಲ್ಲಳು ಈ ತಾಯಿ....." ಎಂದಳು. ಆ ಧ್ವನಿಯಲ್ಲಿ ದುಃಖಾವೇಶವಿತ್ತು.

"ಅಬ್ಬ! ಹೇಗೆ ಹೇಳಬೇಕೋ ನನಗೆ ಅರ್ಥವಾಗಿಲ್ಲಮ್ಮ! ನಾನು...... ನಾನು ನಿನ್ನ ರಕ್ತ ಹಂಚ್ಕೊಂಡು ಹುಟ್ಟಿದ್ದೀನಿ......ನನಗೆ ಮಾತ್ರ ಅಭಿಮಾನ ಇಲ್ವಾ? ನಿಜವಾಗ್ಲೂ ನನ್ನನ್ನ ನಾನು ಆ ರೀತೀಲಿ ಮಾರಿಕೊಂಡು ಓದ್ತಾ ಇಲ್ಲ. ಈ ಒಂದು ಮಾತನ್ನು ನಂಬು. ನಿನ್ನ ಮೇಲೆ ಪ್ರಮಾಣ ಮಾಡಿ

ಹೇಳ್ತಿದ್ದೀನಿ. ಹೆಚ್ಚು ಪ್ರಶ್ನೆಗಳನ್ನು ಕೇಳಿದರೆ ನಾನು ಸುಳ್ಳು ಹೇಳ್ಬೇಕು...... ಯಾವಾಗಲಾದ್ರೂ ನಿನಗೆ ಸುಳ್ಳು ಹೇಳಿದ್ದೀನಾ ? ನೀನು ಬೇಡ ಎಂದ ಕೆಲಸ ಮಾಡಿದ್ದೀನಾ ? ಅಮ್ಮಾ, ಈಗಲೂ ಅಳಿಯನಾಗಿಯೋ, ದತ್ತುಪುತ್ರನಾಗಿಯೋ ನನ್ನನ್ನು ನಾನು ಮಾರಿಕೊಂಡಿಲ್ಲ......ಹಾಗೆ ಮಾರಿಕೊಳ್ಳೋದೂ ಇಲ್ಲ. ನನಗೆ ತುಂಬಾ ದುಡ್ಡಿರೋವರು ಓದೋ ಹಾಗೆ ಓದಬೇಕೂಂತ ಆಸೆ, ತುಂಬಾ ಓದ್ಬೇಕು ಅಂತಿದೆ ಅಮ್ಮ, ನನ್ನ ಮನಸ್ಸಿನಲ್ಲಿ......ಏನೇನೋ ಆಸೆ !" ಕಂಪಿಸುವ ಸ್ವರದಲ್ಲಿ ಹೇಳಿ, ಒಂದು ಕ್ಷಣ ಸುಮ್ಮನಿದ್ದು ಪುನಃ......"ಈ ವಿಷಯವನ್ನ ನಿನ್ನಿಂದ ಬಹಳ ದಿನ ಮುಚ್ಚಿಡೋದಿಲ್ಲ. ಓದು ಮುಗಿಯೋವರೆಗೂ ಅಷ್ಟೆ ! ಆಮೇಲೆ......ಆಮೇಲೆ......ಈ ಸಮಸ್ಯೆಗೆ ಪರಿಹಾರ ಹುಡುಕ್ತೀನಿ. ನಿನಗೆ ಗೊತ್ತಿಲ್ಲದಂತೆ ಮದುವೆ .. ದತ್ತು......ಅಷ್ಟು ಬುದ್ಧಿ ಇಲ್ಲದವನೇನಮ್ಮ ನಾನು ಹೇಳಮ್ಮ !" ಎಂದ

ಮಾನಸಿಕವಾಗಿ ಮಗ ಇಷ್ಟು ಬೆಳೆದಿರುವ ವಿಷಯ ಅಂದೇ ತಿಳಿದುಕೊಂಡ ಮಧುಮತಿ ಆಶ್ಚರ್ಯದಿಂದ ಅವನ ಕಡೆ ನೋಡುತ್ತಾ, "ನಾನು ದೇಹಕ್ಕೆ ಅನ್ನ, ನೀರು ಕೊಟ್ಟು ಬೆಳೆಸಿದರೆ ಪರಿಸ್ಥಿತಿಗಳು ಅವನನ್ನು ಮಾನಸಿಕವಾಗಿ ಬೆಳೆಸಿದೆ" ಎಂದುಕೊಂಡು ಬೇಗ ಬೇಗ ಏನೋ ನಿಶ್ಚಯಕ್ಕೆ ಬಂದಂತೆ ಎದ್ದು ಕೂತು, "ಹೋಗ್ಲಿ. ಚಿಕ್ಕ ಮಾವನಿಗೆ ಎಲ್ಲ ವಿಷಯಗಳೂ ಗೊತ್ತು ತಾನೇ ? ರಾಜು ಒಂದು ತರಹ ಜಂಬದ ಮನುಷ್ಯ, ಕುತ್ಸಿತ. ಆದರೆ, ಗೋಪಿ ಬಹಳ ಒಳ್ಳೆಯವನು, ನಾವು ಅಂದರೆ ಅಭಿಮಾನ ಇರುವ ವ್ಯಕ್ತಿ" ಎನ್ನುತ್ತಾ ಆತುರದಿಂದ ವಾಸುವಿನ ಮುಖವನ್ನು ಪರಿಶೀಲಿಸಿದಳು ಮಧುಮತಿ.

"ಗೊತ್ತು."

"ನಿಜವಾಗ್ಲೂ ?" ಅವಳ ಕಣ್ಣುಗಳು ಸಂತೋಷದಿಂದ ಮಿನುಗಿದವು.

"ನಿಜವಾಗ್ಲೂಮಾ ! ಮಾವ ತನ್ನ ಹತ್ರವೇ ಇಟ್ಕೊಂಡಿದ್ದಾರೆ."

"ಅಂದ್ರೆ ?" ಅವಳ ಹುಬ್ಬು ಗಂಟಿಕ್ಕಿದವು.

"ಮುಗೀತು ಅವರ ಮಗಳ ಮೇಲೆ ಹೋಯ್ತು ನಿನ್ನ ದೃಷ್ಟಿ !" ನಕ್ಕ.

ಎರಡು ನಿಮಿಷ ಪುನಃ ಮೌನವಾಗಿ ಕಳೆದ ನಂತರ ಕಿರುನಗೆ ನಗುತ್ತಾ "ಹೋಗ್ಲಿ ಬಿಡು, ನಂಗೊತ್ತಿಲ್ಲದಿದ್ರೂ ಪರವಾಗಿಲ್ಲ, ಗೋಪಿಗೆ ಗೊತ್ತಲ್ಲಾ ! ಅವನು ನಮ್ಮ ಕ್ಷೇಮ ಬಯಸೋವನು, ಕೀಳು ರೀತಿ, ವ್ಯವಹಾರ ಅವನಿಗೆ

ನಂಬೀಳೋದಿಲ್ಲ. ತಾತ ಹೋದಮೇಲೆ ಇಲ್ಲಿಗೆ ಬಂದ ಗೋಪಿ ನನಗೆ ನಮ್ಮ ಅಲ್ಪ ಸ್ವಲ್ಪ ಆಸ್ತಿ ಬರಿಯದೆ ಇದ್ದದ್ದಕ್ಕೆ ತುಂಬಾ ಬೇಸರಪಟ್ಟ. ದೊಡ್ಡ ಮಾವ ತಿಂಗಳಿಗೆ ಐವತ್ತು ರೂಪಾಯಿ ಕೊಟ್ಬಿಡೋಣ ಅಂದ್ರೆ ಗೋಪಿ ಏನು ಹೇಳಿದ ಗೊತ್ತಾ? ಅಕ್ಕನಿಗೂ ಸಮಭಾಗ ಕೊಡಬೇಕು ಅಂತ ರಾಜು ಹತ್ರ ವಾದಿಸಿ. ಕೊನೆಗೆ ಮನೆ ಬಾಡಿಗೆ, ಬೆಳೀಲಿ ವರ್ಷಪೂರ್ತಿ ಬೇಕಾಗುವಷ್ಟು ಧಾನ್ಯ ಕೊಡೋ ಏರ್ಪಾಡು ಮಾಡಿದ. ಏನಾದರೂ ಸರಿ, ಅವನ ಇಷ್ಟವೇ ನನ್ನಿಷ್ಟ. ಹೋಗಿ ಮಲಕ್ಕೋ....ನೀನೂ, ಮಾವ, ನನ್ನನ್ನ ಸಸ್ಪೆನ್ಸ್‌ನಲ್ಲಿಟ್ಟದ್ದೀರಿ" ಎನ್ನುತ್ತಾ ಹಾಯಾಗಿ ನಕ್ಕಳು ಮಧುಮತಿ ಮಲಗುತ್ತಾ.

"ಬಹಳ ಥ್ಯಾಂಕ್ಸ್, ಅಮ್ಮಾ! ನನಗೆ ಬಹಳ ಸಂತೋಷವಾಗಿದೆ. ನಿನ್ನ ಆಶೀರ್ವಾದ ಇದ್ದರೆ ಅಮ್ಮಾ ನಿನ್ನ ಮಗ ಕಲೆಕ್ಟರ್ ಆಗ್ತಾನೆ" ನಿರಾಳ ವಾಗಿ ಉಸಿರಾಡಿದ ವಾಸು. ಈ ಸಮಸ್ಯೆ ಇಷ್ಟು ಸುಲಭವಾಗಿ ಪರಿಷ್ಕಾರ ವಾಗುತ್ತದೆಂದು ಊಹಿಸದಿದ್ದ ವಾಸು, ನೈಮರೆತು ನಿದ್ರಿಸಿದ. ಆ ನಿದ್ರೆಯಲ್ಲಿ ಅವನ ಕಾಲೇಜು, ಓದು, ಪರೀಕ್ಷೆಯಲ್ಲಿ ತಾನು ಫಸ್ಟ್‌ಕ್ಲಾಸಿನಲ್ಲಿ ಪಾಸಾ ದಂತೆಯೂ ತನ್ನನ್ನು ಎಲ್ಲರೂ ಅಭಿನಂದಿಸುತ್ತಿರುವಂತೆಯೂ ಮಧುರವಾದ ಕನಸುಗಳನ್ನು ಕಂಡ.

೦ ೦ ೦ ೦

ಬೆಳಗಿನ ಜಾವ ಜಯ ಸಂಗೀತ ಸಾಧನೆ ಮಾಡುತ್ತಿದ್ದಳು. ಕನಸಿ ನಲ್ಲೇನೋ ಎಂಬಂತೆ ಕೇಳಿಸಿದ ವಾಸು ಕಣ್ಣುಜ್ಜಿಕೊಳ್ಳುತ್ತಾ ಎದ್ದು, 'ಅಬ್ಬಾ! ಜಯ ಧ್ವನಿ ಎಷ್ಟು ಚೆನ್ನಾಗಿದೆ! ಎಷ್ಟು ಚೆನ್ನಾಗಿ ಹಾಡ್ತಿದ್ದಾಳೆ' ಎಂದುಕೊಳ್ಳುತ್ತಾ ನಿಧಾನವಾಗಿ ಎದ್ದು ಮಹಡಿ ಹತ್ತಿ ಹೋದ ಆ ಹಾಡಿನ ಧ್ವನಿಯನ್ನನುಸರಿಸುತ್ತಾ.

ಅರ್ಧ ಮುಚ್ಚಿದ ಕಣ್ಣುಗಳಿಂದ, ಗಾಳಿಗೆ ಎಗರುತ್ತಿರುವ ಮುಂಗುರುಳಿ ನಿಂದ ಲಂಗ, ಜಾಕೆಟ್ ಹಾಕಿ ಬೆಳ್ಳಗೆ ಅಪರ ಸರಸ್ವತಿಯಂತೆ ವೀಣೆ ಮೀಟುತ್ತಾ, ಸುಶ್ರಾವ್ಯವಾದ ಧ್ವನಿಯಲ್ಲಿ ಹಾಡುತ್ತಾ ಆ ಹಾಡಿನಲ್ಲಿ ಲೀನ ವಾದ ಜಯಳ ಎದುರಿಗೆ ಪದ್ಮಾಸನ ಹಾಕಿ ಗದ್ದಕ್ಕೆ ಕೈ ಕೊಟ್ಟು ರೆಪ್ಪೆ ಹಾಕದೆ ಆ ಹುಡುಗಿಯನ್ನೇ ನೋಡುತ್ತಾ ಕುಳಿತ ವಾಸು. ಥಟಕ್ಕನೆ ಅವನ ಕಡೆ

ನೋಡಿದ ಆ ಹುಡುಗಿಯ ತುಟಿಗಳು ಮುಗುಳ್ನಕ್ಕವು "ಜಯ ಎಷ್ಟು ಚೆನ್ನಾಗಿ ಹಾಡ್ತಾಳೆ" ಎಂದುಕೊಂಡ ವಾಸು.

ಪ್ರಶಾಂತವಾದ ಸಮಯ. ಹಾಲಿನಂತಹ ಬೆಳದಿಂಗಳು. ಮಧುರವಾದ ಗಾನ ವೈಮರೆತು ತನ್ಮಯನಾಗಿ ಆ ಗಾನವನ್ನು ಆಸ್ವಾದಿಸುತ್ತಿದ್ದ ವಾಸು.

ಯಾವಾಗ ಸೂರ್ಯಕಿರಣ ಪ್ರಕೃತಿಯನ್ನು ಪ್ರವೇಶಿಸುತ್ತೋ ಗೊತ್ತಾಗದಿದ್ದ ಗಾಯಕಿ, ಶ್ರೋತೃ...."ವಾಸು ಅಬ್ಬ ಇಲ್ಲಿದ್ದೀಯಾ? ಎದೆ ಒಡೆದು ಹೋಯ್ತು" ಎಂದಳು ಮಧುಮತಿ, ಅವರನ್ನು ಎಚ್ಚರಿಸುವಂತೆ ಗಟ್ಟಿಯಾಗಿ ಮಾತನಾಡುತ್ತಾ.

ವೀಣೆಯನ್ನು ಕೆಳಗಿಳಿಸುತ್ತಾ, "ಯಾಕತ್ತೆ ಎದೆ ಒಡೆದುಹೋಗೋದು? ವಾಸು ಮನೆ ಬಿಟ್ಟು ಓಡಿಹೋದ ಅಂದ್ಕೊಂಡ್ಯಾ?" ಎಂದು ಕಿಲಕಿಲನೆ ನಕ್ಕಳು ಜಯ.

"ಏನೋಮ್ಮ! ನನ್ನ ಮನಸ್ಸು ಯಾವಾಗಲೂ ಕೆಟ್ಟದ್ದನ್ನೇ ಯೋಚಿಸಿ ಹೆದರುವಂತಾಗುತ್ತದೆ. ನನ್ನ ನೆರಳಿಗೆ ನಾನೇ ಹೆದ್ರುತ್ತೇನಿ. ನಿನಗೆ ಹಾಡೂಂದ್ರೆ ಅಷ್ಟು ಇಷ್ಟಾನಾ ವಾಸು!" ನಗುತ್ತಾ ಕೇಳಿದಳು ಮಧುಮತಿ.

"ಜಯ ಬಹಳ ಚೆನ್ನಾಗಿ ಹಾಡ್ತಾಳಮ್ಮ! ಇಷ್ಟು ಚೆನ್ನಾಗಿ ಹಾಡ್ತಾಳೆ ಅಂತ ನಾನೆಂದುಕೊಂಡಿರಲಿಲ್ಲ. ಇನ್ನೂ ಸಾಧನೆ ಮಾಡಿದ್ರೆ......ಸಿನಿಮಾಗಳಲ್ಲಿ ರೇಡಿಯೋಲಿ ಹಾಡಿ ರೆಕಾರ್ಡ್‌ಗಳನ್ನು ಕೊಡಬಹುದು" ಮೆಚ್ಚುತ್ತಾ ನುಡಿದ ವಾಸು.

ಆ ಇಬ್ಬರ ಕಡೆಯೂ ಒಮ್ಮೆ ಗರ್ವದಿಂದ ನೋಡಿದಳು ಜಯ.

o o • •

ಸಂಜೆಯ ಸೂರ್ಯನ ತಂಪಾದ ಕಿರಣಗಳು ಪ್ರಕೃತಿಯನ್ನು ಶೋಭಾಯಮಾನವನ್ನಾಗಿ ಮಾಡಿ ಒಂದು ವಿಚಿತ್ರವಾದ ಸೌಂದರ್ಯವನ್ನು ಸೃಷ್ಟಿಸಿತ್ತು. ಹಿತ್ತಲಿನಲ್ಲಿ ಮಾವಿನ ಗಿಡದ ನೆರಳಲ್ಲಿದ್ದ ಕಲ್ಲಿನ ಮೇಲೆ ಕೂತು ನಗುತ್ತಾ ಸಂತೋಷದಿಂದ ಹರಟುತ್ತಿದ್ದರು ಇಬ್ಬರೂ. ಅಂದು ವಿಜಯದಶಮಿ, ಬ್ಲೂ ಕಲರ್ ಟೆರ್ರಿಕಾಟ್ ಡ್ರೆಸ್ ಹಾಕಿದ್ದ ವಾಸುವಿನ ಸೌಂದರ್ಯ ದ್ವಿಗುಣೀಕೃತವಾಗಿತ್ತು. ಬೆಂಗಳೂರು ಸಿಲ್ಕ್ ಜರಿ ಲಂಗ, ಅದೇ ಕಲರ್ ಗುಲಾಬಿ

ಬಣ್ಣದ ಜಾಕೆಟ್, ಉದ್ದವಾದ ಜಡೆ, ಅವನ ಮುತ್ತು ಸೌಂದರ್ಯವನ್ನು ಸವಾಲ್ ಮಾಡುವಂತಿತ್ತು ಜಯಳ ಸೌಂದರ್ಯ.

ಮೊಮ್ಮಕ್ಕಳಿಬ್ಬರನ್ನು ಬಾವಿಯ ಕಲ್ಲಿನ ಮೇಲೆ ನಿಂತು ಮೂಗಿನ ಮೇಲೆ ಬೆರಳಿಟ್ಟು ಆಶ್ಚರ್ಯದಿಂದ, ತೃಪ್ತಿಯಿಂದ ನೋಡುತ್ತಾ, "ನೀವಿಬ್ಬರೂ ನನ್ನ ಮೊಮ್ಮಕ್ಕಳೇನಾ ...! ಒಂದು ಸಲ ಮುತ್ತು ಕೊಡಲಾ ಜಯ!" ಎಂದರು ಜಾನಕಮ್ಮ ಅವರೆಡೆ ಬರುತ್ತಾ.

"ನಾವು ನಿಮ್ಮ ಮೊಮ್ಮಕ್ಕಳಲ್ಲಾರಿ ಜಾನಕಮ್ಮನೋರೆ !" ಚಪ್ಪಾಳೆ ಹೊಡೆದು ಕಿಲಕಿಲನೆ ನಕ್ಕಳು ಜಯ. "ಅವಳು ನಿನ್ನ ಮೊಮ್ಮಗಳಲ್ಲವೇನೋ ! ನಾನು ಮಾತ್ರ ನಿನ್ನ ಮಗಳ ಮಗ. ನಿನ್ನ ಮೊಮ್ಮಗ, ಬಾ ಮುತ್ತು ಕೊಡು" ಹತ್ತಿರ ಬಂದು ಕೆನ್ನೆ ತೋರಿಸಿದ ವಾಸು. ಅವನ ಕೆನ್ನೆಗಳನ್ನು ಮೃದುವಾಗಿ ನೇವರಿಸಿ, 'ನನ್ನ ಕಂದ' ಎಂದು ಆ ಕೈಗಳಿಗೆ ಮುತ್ತಿಟ್ಟು, "ನೋಡು, ಕೆಟ್ಟ ಹುಡುಗಿ ಹೇಗೆ ಓಡ್ತಾಳೊ, ಲೇ, ನಿನ್ನ ಲಂಗ ತೋರಿಸೇ. ಹೊಸ ಬಟ್ಟೆಗಳನ್ನ ಹಾಕ್ಕೊಂಡಿದ್ದೀ. ನನಗೆ ನಮಸ್ಕಾರ ಮಾಡೋದಿಲ್ವಾ ?" ಎಂದು ಕರೆದರು ಜಾನಕಮ್ಮ.

"ಮುತ್ತು ಕೊಡಿಸ್ಕೊಳ್ತೀನಿ, ನಮಸ್ಕಾರಾನೂ ಮಾಡ್ತೀನಿ ಏನು ಕೊಡ್ತೀ ? ಒಂದು ಹತ್ತು ರೂಪಾಯಿ ಕೊಡ್ತೀಯಾ ?" ಜಾನಕಮ್ಮನ ಹತ್ತಿರಕ್ಕೆ ಬರುತ್ತಾ ತುಂಟುನಗೆ ನಗುತ್ತಾ ಕೇಳಿದಳು ಜಯ.

"ನಾ ಕೊಡ್ತೀನಿ ಬಿಡು" ಥಟ್ಟನೆ ಹೇಳಿದ ವಾಸು.

"ಛೆ, ಹೋಗು !" ನಾಚಿದಳು ಜಯ ವಾಸುವಿನ ಕಡೆ ಏನೋ ಒಂದು ರೀತಿಯಲ್ಲಿ ನೋಡುತ್ತಾ.

ಲಂಗದ ನೆರಿಗೆಗಳನ್ನು ಕೈಲಿ ಹಿಡಿದು ಬಟ್ಟೆಯ ಮೃದುತ್ವ, ಬಾರ್ಡರ್‌ನ ಅಂದ ನೋಡುತ್ತಾ, "ಎಷ್ಟೇ ಬೆಲೆ, ಜಯಾ ?" ಎಂದು ಕೇಳಿದಳು ಜಾನಕಮ್ಮ.

"ಮುವತ್ತೆರಡು."

"ಅತ್ತೆಗೆ ಹತ್ತು ರೂಪಾಯಿನ ಸೀರೆ ಕೊಳ್ಳೋದಕ್ಕೆ ದುಡ್ಡಿರಲಿಲ್ಲ....."

"ಅಜ್ಜಿ !" ಎಂದ ವಾಸು ಇನ್ನೇನೂ ಹೇಳಬೇಡವೆಂದು ಎಚ್ಚರಿಸುತ್ತಿರುವಂತೆ.

"ಮೊಮ್ಮಗಳಿಗೆ ಎಂಬತ್ತು ರೂಪಾಯಿ ಬೆಲೆ ಬಟ್ಟೆ ಹೊಲಿಸಿದ್ದಿ. ನೀನೇ ಯಾಕೆ ಅತ್ತೆಗೆ ಸೀರೆ ಕೊಂಡುಕೋಬಾರದಾಗಿತ್ತು ?" ತಾನಾಡುವ ಮಾತಿನಲ್ಲಿ ತೀವ್ರತೆ ತಿಳಿಯಲಾರದ ಜಯ ಏನೋ ಹೇಳಿಬಿಟ್ಟಳು.

"ಅದಕ್ಕೆ ಎಂಬತ್ತು ರೂಪಾಯಾ ?" ಮೂಗಿನ ಮೇಲೆ ಬೆರಳಿಟ್ಟು ಕೊಂಡು ವಾಸುವಿನ ಬಟ್ಟೆಯನ್ನು ದೃಷ್ಟಿಸಿದರು ಜಾನಕಮ್ಮ.

"ಇಂಥಾದ್ದೆ ಪ್ಲೀಡರ್ ಜಗಪತಿ ಅವರ ಮಗ ಕೊಂಡ್ಕೊಂಡ, ನಾವು ಆವತ್ತು ಅಂಗಡಿಗೆ ಹೋಗಿದವಲ್ಲಾ ಆವತ್ತೇ. ಬೇಕಾದ್ರೆ ವಾಸೂನೇ ಕೇಳು, ಅದರ ಬೆಲೆ ಎಷ್ಟು ಅನ್ನೋದನ್ನ" ಎನ್ನುತ್ತಾ ಆ ಕಡೆ ನೋಡಿದ ಜಯ ಕಂಡದ್ದು ಸರಸರನೆ ಬೀದಿಯ ಗೇಟನ್ನ ದಾಟಿ ಹೊರಗೆ ಹೋಗುತ್ತಿದ್ದ ವಾಸು ವಿನ ಬೆನ್ನನ್ನು.

"ಅವನಿಗೆ ಸ್ಕಾಲರ್‌ಷಿಪ್ ಬಂದದ್ದರಲ್ಲಿ ಹೋಲಿಸಿಕೊಂಡಿದ್ದಾರೆ ನಃ ಹೊಲಿದೆ ಅಂತ ಅಂದ್ಕೊಂಡ್ರೇನೇ ನಿಮ್ಮ ಅಮ್ಮ ಅಪ್ಪ ?"

"ಸರಿ.....ಇನ್ನು ಮನೇಲಿ ಕುರುಕ್ಷೇತ್ರ ಪ್ರಾರಂಭವಾಗುತ್ತೆ............" ಎನ್ನುತ್ತಾ ತಾನೂ ಹೊರಟುಹೋದಳು ಜಯ.

"ಅವರೂ ಕೊಡೋದಿಲ್ಲ ...ಅವನು ಕೊಂಡ್ಕೊಂಡ್ರೆ ಸಹನೆ ಇಲ್ಲ. ಇಷ್ಟಕ್ಕೆ ಅವನ ಅದೃಷ್ಟ" ಗೊಣಗುತ್ತಾ ಅಡಿಗೆಯ ಮನೆಗೆ ಹೊರಟು ಹೋದರು ಜಾನಕಮ್ಮ.

ವಾಸು ಬೆಲೆ ಬಾಳುವ ಬಟ್ಟೆಗಳನ್ನು ತೊಟ್ಟು ಮನೆಯಲ್ಲಿ ಓಡಾಡು ತ್ತಿದ್ದರೆ ಅವನ ನಡಿಗೆಯಲ್ಲಿ, ನೋಟದಲ್ಲಿ, ಮಾತಿನಲ್ಲಿ ಹೊಸದಾಗಿ ಪ್ರಸಾದ ರಾವ್ ಹೋಲಿಕೆಗಳು ಕಾಣುತ್ತಿವೆ ಎಂಬುದನ್ನು ಗ್ರಹಿಸಿದ ಮನಸ್ಸು ಆರ್ದ್ರ ವಾಯಿತು.

"ಮಧೂ ! ದೊಡ್ಡವನಾದ್ರೆ, ಅವರ ತಂದೆ ತರಹ ಇರ್‍ತಾನೇನೋ ಇವನು !" ತಾಯಿಯ ಮಾತು ಕೇಳಿದ ಮಧುಮತಿ ಬೆಚ್ಚಿದಳು. ತಾನು ಮನಸ್ಸಿನಲ್ಲಿ ಅಂದುಕೊಳ್ಳುತ್ತಿದ್ದುದನ್ನು ಅವರು ಹೇಳಿದರಷ್ಟೇ ! ಬಹಳ ಕಾಲದ ಮೇಲೆ ತನ್ನ ಗಂಡನ ಮಾತೂ, ಅದರೊಂದಿಗೆ ಎಷ್ಟು ಬೇಡವೆಂದರೂ ತಟ್ಟಿಸಿಕೊಂಡು ಬರುವ ಹಿಂದಿನ ನೆನಪುಗಳು, ಅತ್ಯಂತ ಅನುರಾಗವನ್ನು ತೋರಿಸುತ್ತಿದ್ದ ಅವನ ಹಿಂದಿನ ವರ್ತನೆ ನಟನೆಯೋ, ನಿಜವೋ ಇಂದಿಗೂ ಗ್ರಹಿಸಲಾರದ ಮಧುಮತಿಯ ಮನಸ್ಸು ವಿಕಲವಾಗಿಹೋಯಿತು.

"ಮನುಷ್ಯ ಮೆದುಗ, ಅಂದವಾಗಿದ್ದಾನೆ, ಎಂದು ಮುಗುಳನ್ನ ಕೊಟ್ಟರೆ ಕೊರಳು ಕೊಯ್ದು ಹೋದ. ಪಯೋಮುಖ ವಿಷ ಕುಂಭ ಎಂದು ನಮ ಗೇನು ಗೊತ್ತು......? ಆದರೂ ಮಧು, ನೀನು ಸ್ವಲ್ಪ ತಾಳ್ಮೆಯಿಂದ ಇದ್ದಿದ್ದರೆ ಇಷ್ಟರವರೆಗೂ ಬರುತ್ತಿರಲಿಲ್ಲ."

ಜಾನಕಮ್ಮನವರ ಮಾತುಗಳಿಗೆ ರೋಷ, ದುಃಖ ಎರಡೂ ಬಂದವು ಮಧುಮತಿಗೆ. ಅಂದು ತಾಳ್ಮೆಯಿಂದಿರು ಎಂದು ಹೇಳದಿದ್ದ ತಾಯಿ ಇಂದು ನಿನಗೆ ತಾಳ್ಮೆ ಇರಲಿಲ್ಲ ಎಂದು ನಿಂದಿಸುತ್ತಿದ್ದಾರೆ. ಅಂದು ತಾಯಿ, ತಂದೆ, ತಮ್ಮಂದಿರೂ ಇವರ ಭರವಸೆಯಿಂದಲೇ ಅಲ್ಲವೇ ಅವರನ್ನು ಬಿಟ್ಟಿದ್ದು ? ಇದ ರಲ್ಲಿ ಯಾರಾದರೊಬ್ಬರು ನೀನು ನಿನ್ನ ಗಂಡನೊಂದಿಗೆ ಹೊರಟುಹೋಗು, ನಮ್ಮ ಮನೆಯಲ್ಲಿ ನಿನಗೆ ಗೌರವವಿರುವುದಿಲ್ಲ ಎಂಬ ಸತ್ಯವನ್ನು ಹೇಳಿದ್ದಿದ್ದರೆ ? ಹೋಗಲಿ ಅವರೊಂದಿಗೆ ನನ್ನನ್ನು ಕತ್ತು ಹಿಡಿದು ದಬ್ಬಿದ್ದರೆ ? ಎಷ್ಟು ಕೃತಜ್ಞಳಾಗಿರುತ್ತಿದ್ದೆ.

ಅಂದಿನಿಂದ ಇಂದಿನವರೆಗೂ ತನ್ನ ಗಂಡನನ್ನು ಅವರು ದೂಷಿಸುತ್ತಲೇ ಇದ್ದಾರೆ. ಆದರೆ ತನ್ನಲ್ಲೇ ಏನೋ ವ್ಯತ್ಯಾಸವಾಗಿರಬೇಕು. ಅವರು ಹೊರಟುಹೋದ ಹೊಸದರಲ್ಲಿ ಎಲ್ಲರೂ, ಮನೆಯವರೂ, ಹೊರಗಿನವರೂ, ಬೇಕಾದವರೂ, ಬೇಡದವರು ಅವರನ್ನು ಬಯ್ಯುತ್ತಿದ್ದರೆ ತನಗೇನೋ ಮನ ಸ್ಸಿಗೆ ಒಂದು ರೀತಿಯಲ್ಲಿ ಸಮಾಧಾನವಾಗುತ್ತಿತ್ತು. ಆದರೆ ದಿನ ಕಳೆದಂತೆ ಅವರ ಮಾತೆತ್ತಿದವರ ಮೇಲೆ ಕೋಪಬರಲು ಪ್ರಾರಂಭಿಸಿತು. ಈಗ ಅವರನ್ನು ಯಾರಾದರೂ ಏನಾದರೂ ಹೇಳಿದರೆ ಖೂನಿ ಮಾಡಬೇಕು ಎನ್ನುವಷ್ಟು ಕೋಪ, ರೋಷ ಬರುತ್ತದೆ. ತನಗೆ ಅಗತ್ಯವಿಲ್ಲ ಹೋಗು ಎಂದರೂ ಅವ ಮಾನವನ್ನು ಲೆಕ್ಕಿಸದೆ ಬಾ ಎಂದು ಕರೆದರು. ಕಣ್ಣು, ಮನಸ್ಸು ಎರಡೂ ಕುರುಡಾಗಿದ್ದ ತಾನು ಬರುವುದಿಲ್ಲವೆಂದಳು. ಅವರು ಹಾಯಾಗಿ ಮದುವೆ ಮಾಡಿಕೊಂಡು ಎಷ್ಟು ಮಕ್ಕಳಿಗೆ ತಂದೆಯಾಗಿದ್ದಾರೋ ! ತಂದೆಯ ಲಾಲನೆ ಪಾಲನೆ ಆ ಮಕ್ಕಳಿಗೆ ಲಭ್ಯವಾಗಿದೆ. ತನ್ನ ಮಗನ ಭವಿಷ್ಯವನ್ನು ತಾನೇ ನಾಶ ಪಡಿಸಿದ್ದಳು. ಅವಳ ಹೃದಯ ಆರ್ದ್ರವಾಯಿತು. ಕಣ್ಣು ತುಂಬ ನೀರು ಬಂದು ಮೌನವಾಗಿ ತನ್ನ ಕೋಣೆಗೆ ಹೋಗಿ ಬಾಗಿಲುಗಳನ್ನು ಹಾಕಿಕೊಂಡು ಹೃದಯ ಹಗುರವಾಗುವವರೆಗೂ ಅತ್ತಳು.

ನಗುತ್ತಾ, "ಕ್ಲಬ್‌ಗೆ ಹೋಗಿದ್ಯಾ ಮಾವ, ಇಷ್ಟು ಲೇಟಾಯ್ತಲ್ಲಾ ?"

ಎಂದ ವಾಸು. ಹಬ್ಬದ ದಿನಗಳಲ್ಲಿ ಇಸ್ಪೀಟಾಡಿ ದುಡ್ಡು ಕಳೆದುಕೊಳ್ಳುವುದು ರಾಜಶೇಖರನ ಅಭ್ಯಾಸ.

"ಬಹಳ ದಿವಸದ ಮೇಲೆ ಈವತ್ತು ಗೆದ್ದಿದ್ದೀನಿ, ವಾಸೂ ! ತಗೋ, ಈ ಹತ್ತು ರೂಪಾಯಿ, ಏನಾದರೂ ಕೊಂಡ್ಕೋ !"

"ಸುಮ್ನೆ ಕೇಳ್ದೆ ಮಾವ, ನನಗೆ ಬೇಡ." ಸಂಕೋಚಪಡುತ್ತಾ ಹೇಳಿದ ವಾಸು.

"ತಗೋಳ್ರೋ......" ಅವನ ಜೇಬಿನಲ್ಲಿ ತುರುಕಿ ಊಟಕ್ಕೆ ಹೊರಟು ಹೋದರು ರಾಜಶೇಖರ್.

"ಅಮ್ಮಾ ! ನಿನಗೊಂದು ಶುಭವಾರ್ತೆ" ನಗುತ್ತಾ ಮಧುಮತಿಯ ಪಕ್ಕದಲ್ಲಿ ಕೂತ ವಾಸು.

"ಏನದು ?" ಕೇಳಿದಳು ಮಧುಮತಿ.

"ಮಾವನಿಗೆ ಇವತ್ತು ಇಸ್ಪೀಟಾಟದಲ್ಲಿ ಲಾಭ ಬಂತಂತೆ. ನನಗೆ ಹತ್ತು ರೂಪಾಯಿ ಕೊಟ್ಟಿದ್ದಾರೆ."

"ಏಕೆ ತಗೊಂಡೆ ?"

"ಹೋಗಲಿ ಬಿಡಮ್ಮ !......ಬಿಡದೆ ಅವರ ಮನೇಲೇ ಇರೋ ಪೀಡೆಗಳು ನಾವು, ಅವರ ಮೇಲೆ ಕೋಪ ಯಾಕೆ ? ಎಷ್ಟು ದಿನಾಂತ ನಮಗೆ ಮಾಡ್ತಾರೆ ? ಅವರೇನಾದ್ರೂ ಬೇಸರಪಟ್ರೆ ನೀನು ಕೋಪ ಮಾಡ್ಕೋತಿರ್ತಿ. ಅವರೇನಂದ್ರೂ ನಾವು ಇನ್ನೂ ಸ್ವಲ್ಪ ದಿನ ಸಹಿಸ್ಕೋಬೇಕಮ್ಮ."

ಛಟೀರನೆ ಕೆನ್ನೆಗೆ ಹೊಡೆದಂತಾಯಿತು ಮಧುಮತಿಗೆ. ತನ್ನ ಮಗ ಹೇಳೋದು ಸಹಿಸ್ಕೋ ಎಂದೇ ? ಸಹಿಸಿಕೊಳ್ಳದೆ ತಾನೇನು ತಾನೆ ಮಾಡಬಲ್ಲಳು ? ತನಗಿಂತ ವಾಸುನೇ ಮನುಷ್ಯರನ್ನು, ಪರಿಸ್ಥಿತಿಗಳನ್ನು ಚೆನ್ನಾಗಿ ಅರ್ಥಮಾಡಿಕೊಂಡಿರುವ ಹಾಗಿದೆ. ಭಾರವಾದ ನಿಟ್ಟುಸಿರು ಬಿಟ್ಟು, "ನನಗ್ಯಾಕಪ್ಪ ಕೋಪ ? ಕೋಪ ಬಂದು ನಾನೇನು ಮಾಡಬಲ್ಲೆ ? ಅವರು ಕೊಟ್ರೆ, ನೀ ತಗೊಂಡೆ" ಎಂದಳು ಮಧುಮತಿ ನಿಷ್ಠುರ ಸ್ವರದಲ್ಲಿ.

"ನಿನಗೆ ದೊಡ್ಡಮಾವನ ಮೇಲೆ ಕೋಪ ಇದೆ, ನನಗೆ ಗೊತ್ತು. ಇಲ್ಲಿ ನಾನು ಓದ್ತಾ ಇರೋವಾಗ ಎಷ್ಟು ಸಲ ದುಡ್ಡು ಕೊಟ್ಟು ಸಹಾಯಮಾಡಿದ್ದಾರೆ ! ಸ್ವಲ್ಪ ಬಿರುಸಾಗಿ ಏನೇನೋ ಮಾತಾಡಿಬಿಡ್ತಾರೆ, ಅಷ್ಟೇ ಆಗಲಿ......

ನಿನಗಿಷ್ಟವಿಲ್ಲದಿದ್ರೆ ಕೊಟ್ಬಿಡ್ತೀನಿ. ವಾಪಸ್ ಕೊಟ್ಬಿಟ್ಟು ಬರಲಾ.....?" ಎದ್ದು ನಿಂತ ವಾಸು.

"ಚೆನ್ನಾಗಿದೆ, ಆ ನಿಷ್ಠೂರ ನನಗಾ ?.... ನೀ ಊರಿಗೆ ಹೋಗೋ ದಿನ ಅಜ್ಜಿಗೆ ಕೊಟ್ಬಿಡು. ಅವರಿಗಾದ್ರೆ ಮಗನ ಹಣ !" ಎಂದಳು ಮಧುಮತಿ.

"ಹಾಗೇ ಮಾಡ್ತೀನಮ್ಮ ! ಪುನಃ ಮಾವನಿಗೇ ವಾಪಸ್ ಕೊಟ್ರೇ ಚೆನ್ನಾಗಿರೋಲ್ವೇನೋ ?" ಎಂದ ವಾಸು.

• ◦ ◦ ◦

ಪ್ಲಾಟ್‌ಫಾರಂ ತುಂಬಾ ಜನ. ಒಂದೇ ಗಲಾಟೆ. ರೈಲು ಹತ್ತುತ್ತಿದ್ದ ವಾಸುವಿಗೆ–"ವಾಸು, ಹುಷಾರ್. ಎಲ್ಲರನ್ನೂ ಕೇಳ್ದೆ ಎಂದು ಹೇಳು, ಕಾಗದ ಬರೀತಿರು" ಎಂದು ಹೇಳಿದ ಮಧುಮತಿಯ ಧ್ವನಿ ಗದ್ಗದವಾಯಿತು. ಕಣ್ಣುಗಳಲ್ಲಿ ನೀರು ತುಂಬಿದವು.

"ಹಾಗೇ ಆಗಲಮ್ಮ ನನ್ನ ವಿಷಯ ಯೋಚ್ನೆ ಮಾಡ್ಬೇಡ" ಎಂದು ಹೇಳಿದ ವಾಸುವಿನ ಹೃದಯ ಖಿನ್ನಗೊಂಡಿತು. ತಾಯಿಯ ಕಣ್ಣೀರನ್ನು ಕಂಡು ಸ್ವಚ್ಛವಾದ ಹಾಲಿನ ನೊರೆಯಂತಿರುವ ಆಕೆಯ ಪ್ರೀತಿಗೆ ತಾನು ಅರ್ಹನಲ್ಲವೇನೋ ! ಆಕೆಯಿಂದ ಮುಚ್ಚಿಟ್ಟು ತಾನು ಈಗ ಅನುಭವಿಸುತ್ತಿರುವ ಸುಖಜೀವನವನ್ನು ಊಹಿಸಿಕೊಂಡು ಪಶ್ಚಾತ್ತಾಪ ಭಾರದಿಂದಲೂ, ಗತ್ಯಂತರವಿಲ್ಲದ ತನ್ನ ನಿಸ್ಸಹಾಯಕತೆಯನ್ನು ಜ್ಞಾಪಿಸಿಕೊಂಡು ತಲೆ ಬಗ್ಗಿಸಿದ ವಾಸು.

"ವಾಸೂ ! ಮುಂದಿನ ರಜೆಯಲ್ಲಿ ತಪ್ಪದೆ ಬರ್ತೀಯಲ್ವಾ ?" ಜಯಾಳ ಮಧುರಧ್ವನಿ. ಸ್ನೇಹಪೂರ್ವಕವಾಗಿ ಕೈಚಾಚಿ–

"ಖಂಡಿತ ಬರ್ತೀನಿ" ಎಂದ ವಾಸು ಕಿರುನಗೆಯೊಂದಿಗೆ.

ಅವನ ಕೈಯ್ಯೊಂದಿಗೆ ತನ್ನ ಕೈ ಸೇರಿಸಿಬಿಡುತ್ತಾ, "ಪದ್ಮಜಾನ ಕರ್ಕೊಂಡು ಬಾ ನೀನು ಈ ಸಲ ಬರೋವಾಗ, ಚಿಕ್ಕಪ್ಪನ ಬಾ ಅಂತ ಹೇಳು......" ಎಂದಳು ಜಯ.

"ಅತ್ತೇನಾ, ಶೀನೂನಾ ಬರಬೇಡಾ ಅಂತ ಹೇಳ್ಲಾ ?" ಎನ್ನುತ್ತಾ ಪಕಪಕನೆ ನಕ್ಕ.

"ಕ್ಲಾಸ್ ತಗೋಬೇಕು ..." ಹೊರಡುತ್ತಿದ್ದ ರೈಲಿನ ಶಬ್ದದೊಂದಿಗೆ ಕಲೆತುಹೋಗುತ್ತಾ ಕೇಳಿಸಿದ ರಾಜಶೇಖರ್ ಧ್ವನಿ ಕೇಳಿ ಥಟ್ಟನೆ ಆ ಕಡೆ ತಿರುಗಿ ನೋಡಿದ ವಾಸು. ತಾನಿದ್ದ ಪೆಟ್ಟಿಗೆಯ ಜೊತೆಯಲ್ಲಿಯೇ ಓಡಿ ಬರುತ್ತಿದ್ದರು ರಾಜಶೇಖರ್.

"ನಿಲ್ಲು ಓಡಬೇಡ ಮಾವ, ಕ್ಲಾಸ್ ತೆಗೆದುಕೊಳ್ಳೋದಕ್ಕೆ ಪ್ರಯತ್ನಿಸ್ತೀನಿ" ಎಂದ ವಾಸು ನಗುತ್ತಾ.

"ಏನಾದ್ರೂ ಹಣದ ಮುಗ್ಗಟ್ಟಾದ್ರೆ ಬರೀ......" ಗಟ್ಟಿಯಾಗಿ ಹೇಳುತ್ತಿದ್ದ ರಾಜಶೇಖರ್ ಕಡೆ ಸ್ವಲ್ಪ ಆಶ್ಚರ್ಯದಿಂದ ನೋಡಿದ ವಾಸು. ರೈಲಿನ ಸ್ಪೀಡ್ ಹೆಚ್ಚಾಯಿತು. ಪ್ಲಾಟ್‌ಫಾರಂ ಮೇಲಿನ ಜನ ದೂರವಾಗುತ್ತಾ ಬೊಂಬೆಗಳಂತೆ ಕಂಡರು.

"ಕ್ಲಾಸ್ ತಗೋಬೇಕು. ಹಣದ ಮುಗ್ಗಟ್ಟಾದ್ರೆ ಬರೀ......" ರಾಜಶೇಖರ್ ಮಾತುಗಳಿಗೆ ನಕ್ಕ ವಾಸು ಅವನ ಮನಸ್ಸು ಹಿಂದಿನದನ್ನು ನೆನೆಯಿತು. ವಾಸೂಗೆ ಕಾಲೇಜಿನಲ್ಲಿ ಸೀಟು ಸಿಗುತ್ತೇನೋ ವಿಚಾರಿಸು!" ಎಂದ ಜಾನಕಮ್ಮನವರ ಮಾತಿಗೆ ಕೋಪಗೊಳ್ಳುತ್ತಾ, "ಇನ್ನು ಓದು ಸಾಕು ಬಿಡು. ಯಾರಾದ್ರೂ ಸಾಹುಕಾರರಿಗೆ ಹೇಳ್ತೀನಿ, ಅಕೌಂಟ್ ಬರೆದ್ರೆ ಅರವತ್ತೋ ಎಪ್ಪತ್ತೋ ಕೊಡ್ತಾರೆ. ಅವರಮ್ಮನಿಗೆ ಸ್ವಲ್ಪ ಸಹಾಯ ಆಗುತ್ತೆ" ಎಂದು ಆ ದಿನ ರಾಜಶೇಖರ್ ಮಾಡಿದ ಸಲಹೆಗೆ "ಇದೇನಾ ಸಲಹೆ ನೀ ಮಾಡೋದು? ಇದನ್ನು ಹೇಳೋದಕ್ಕೆ ನಿನಗೆ ನಾಚಿಕೆ ಆಗೊಲ್ವಾ? ಅವರ ತಾತ ಈ ಊರಲ್ಲಿ ತಹಶೀಲ್‌ದಾರ್ ಗಿರಿ ಮಾಡಿದ್ರು!" ಜಾನಕಮ್ಮನವರು ಕೋಪದಿಂದ ರೇಗಿದರು. "ತಾತ ತಹಶೀಲ್‌ದಾರ್ ಆದ್ರೆ ಅವರ ಅಳಿಯ ಬಸ್ ಕಂಡಕ್ಟರ್ ಆಗ್ಲಿಲ್ವಾ? ಇವನು ಕೋಮಟಿ, ಗುಮಾಸ್ತೆ ಆದರೆ ತಪ್ಪೇನು?" ತಾಯಿಯ ಮಾತಿಗೆ ಅಸಹನೆಯಿಂದ ಕೋಪದಿಂದ ಜವಾಬು ಕೊಟ್ಟಿದ್ದರು ರಾಜಶೇಖರ್. "ಇನ್ನೂ ಹದಿನಾರು ಕೂಡ ತುಂಬಿಲ್ಲ. ಅವನ ಕರ್ಮ ಉದ್ಯೋಗ ಮಾಡೋದಾ?....ಪಿಯುಸಿನಾದ್ರೂ ಓದಿಸಿದ್ರೆ ಚೆನ್ನಾಗಿರುತ್ತೆ ಅಂತ ಕೇಳಿದೆ. ಅವರ ತಾತ ಬದುಕಿದ್ದಿದ್ರೆ ..." ಅವರ ಗಂಟಲು ಕಟ್ಟಿತು.

"ನಿನಗೆಲ್ಲೋ ಭ್ರಾಂತು, ಕಂಡಕ್ಟರ್ ಮಗ ಕಲೆಕ್ಟರ್ ಆಗ್ತಾನಾ!" ನಕ್ಕಿದ್ದರು ರಾಜಶೇಖರ್, ಅದೇ ಮಾತನ್ನು ಆ ದಿನ ನಾಲ್ಕೈದು ಬಾರಿ

ಹೇಳಿ ನಕ್ಕಿದ್ದರು. ಈರ್ಷ್ಯೆ, ಅಸೂಯೆ, ಅವಹೇಳನ ಎಷ್ಟೋ ಭಾವನೆಗಳು ತುಂಬಿದ್ದವು ಆ ನಗುವಿನಲ್ಲಿ. 'ಅಂದು ತನ್ನನ್ನು ಓದು ಎಂದು ಧೈರ್ಯವಾಗಿ ಹೇಳಿದವರೇ ಇಲ್ಲ. ಈ ದಿನ ಕ್ಲಾಸ್ ತೆಗೆದುಕೊಳ್ಳಬೇಕಂತೆ. ಅಗತ್ಯವಿದ್ದರೆ ಹಣ ಸಹಾಯ ಮಾಡುತ್ತಾರಂತೆ. ಆ ದಿನ ಅವಹೇಳನ ಮಾಡಿದ ತನ್ನ ಮಾವ ರಾಜಶೇಖರ್ ! ತನ್ನ ಜೀವನ ಸಾಧಾರಣವಾದುದಲ್ಲ ; ಹರಿತವಾದ ಕತ್ತಿಯ ಮೇಲೆ ಕಾಲು ಕತ್ತರಿಸದಂತೆ ನಡೆಯಬೇಕು. ಓದಬೇಕಾದರೆ ಬಹಳ ಗುಟ್ಟಾಗಿರಬೇಕು ತನ್ನ ವ್ಯವಹಾರ ! ಭಗವಂತಾ, ನನಗೇಕೆ ಇಂತಹ ಪರೀಕ್ಷೆ ?' ಗಟ್ಟಿಯಾಗಿ ಕಣ್ಣುಗಳನ್ನು ಮುಚ್ಚಿಕೊಂಡ ವಾಸು.

o o o o

"ಅಮ್ಮಾ , ಅಜ್ಜಿ ಎಲ್ಲರೂ ಚೆನ್ನಾಗಿದ್ದಾರಪ್ಪಾ ? ಮುಖ ತೊಳ್ಕೋ, ಕಾಫಿ ತರ್ತೀನಿ" ಪ್ರೀತಿಯಿಂದ ಮಾತನಾಡಿದಳು ಲಕ್ಷ್ಮಿ , ಪೆಟ್ಟಿಗೆ ಹೋಲ್ಡಾಲನ್ನು ಅವನ ಕೊಠಡಿಯಲ್ಲಿರಿಸುತ್ತಾ.

"ಊಂ, ಚೆನ್ನಾಗಿದ್ದಾರೆ. ಅವರೆಲ್ಲಾ ನಿಮ್ಮನ್ನು ಕೇಳಿದೆ ಅಂತ ಹೇಳು ಎಂದರು" ಎಂದ ನಗುತ್ತಾ.

"ನೆನ್ನೆ ಸಾಯಂಕಾಲವೇ ಬರ್ತೀಯೇನೋ ಅಂದ್ಕೊಂಡೆ, ಕಾಲೇಜ್ ಟೈಮಿಗೆ ಸರಿಯಾಗಿ ಬಂದಿದ್ದೀಯ" ಪ್ರಕಾಶಮಾನವಾದ ಕಣ್ಣುಗಳಿಂದ ಅವನ ಕಡೆಯೇ ನೋಡುತ್ತಾ ಹೇಳಿದಳು ಪದ್ಮಜ.

"ಹಾಗೇ ಅಂದ್ಕೊಂಡೆ, ಅಲ್ಲಿ ಅವರು ಬಿಟ್ಟರೆ ತಾನೆ !" ಎನ್ನುತ್ತಾ ಬಾತ್‌ರೂಂ ಕಡೆ ಹೋದ ವಾಸು.

ಆ ದಿನ ರಾತ್ರಿ ಮಹಡಿಯ ಮೇಲೆ ಕರೆದೊಯ್ದು ಅರ್ಧ ಗಂಟೆ ಏಕಾಂತವಾಗಿ ಮಾತನಾಡಿದರು ಗೋಪಾಲರಾವ್. ವಾಸುವಿನೊಂದಿಗೆ ತೃಪ್ತಿಯಾಗಿ ನಿಟ್ಟುಸಿರು ಬಿಟ್ಟು "ಊಂ, ಹೋಗಿ ಮಲಗು" ಎನ್ನುತ್ತಾ ವಾಸುವಿನ ಭುಜ ತಟ್ಟಿದರು.

ಬೆಳಿಗ್ಗೆ ಹಿತ್ತಲಿನಲ್ಲಿ ಮಂದಾರದ ಹೂವನ್ನು ಬಿಡಿಸುತ್ತಿದ್ದಳು ಪದ್ಮಜ. ಬ್ರಷ್ ಬಾಯಲ್ಲಿಟ್ಟುಕೊಂಡು ಹಿತ್ತಲಿಗೆ ಹೋದ ವಾಸು ಏನೋ ಜ್ಞಾಪಕ ಬಂದಂತೆ, "ಪದ್ಮಜಾ !" ಎಂದು ಕರೆದ. ಅವಳ ಕಡೆ ತುಂಟ ನೋಟ ಬೀರುತ್ತಾ, "ಏನು ಈವತ್ತು ಇಷ್ಟು ಬೇಗ ಎದ್ಬಿಟ್ಟಿದ್ದೀ... ಪಾಪ, ರಜೇಲಿ

ಅಭ್ಯಾಸವಾಗಿರಬೇಕು, ವಾರ್ತೆಗಳಾದ ಮೇಲೆ ಏಳೋದು....ಕನ್ನಡವಾ, ಇಂಗ್ಲೀಷಾ ? ಬೆಂಗಳೂರು ಸ್ಟೇಷನಾ ? ಇಲ್ಲ ಧಾರವಾಡವಾ ?_ ಅಲ್ಲ ಈಗ ಟೈಂ ಎಷ್ಟಾಗಿರಬಹುದು ?" ಎನ್ನುತ್ತಾ ಬರುತ್ತಿದ್ದ ನಗುವನ್ನು ಬಿಗಿ ಹಿಡಿದು ಕೇಳಿದ ವಾಸು.

ಅವನ ಪ್ರಶ್ನೆಗಳಿಗೆ ವೀಣೆಯನ್ನು ಮೀಟಿದಂತೆ ನಗುತ್ತಾ, "ನಮ್ಮ ರೇಡಿಯೋಲಿ ಧಾರವಾಡ ಸ್ಟೇಷನ್‌ನಲ್ಲಿ.... ಬೆಳಗಿನ ನ್ಯೂಸ್ ಕೇಳಿಸಿದೆ ತಾನೆ ! ಬೆಂಗಳೂರು ಕನ್ನಡ ನ್ಯೂಸ್ ಮುಗಿದುಹೋಯ್ತು. ಯಾತಕ್ಕೆ ಕರೆದೆ ?" ಎಂದಳು ಪದ್ಮಜ.

"ಜಯ ಈ ಸಲ ನಿನ್ನನ್ನು ಕರ್ಕೊಂಡು ಬಾ ಅಂದ್ಲು. ನಿನ್ನ ವಿಷಯ ಬಹಳ ಕೇಳಿದ್ಲು....."

"ನಾ ಕೇಳಿದೆ ಅಂತ ಹೇಳಿದ್ಯಾ ?"

"ಹೇಳ್ದೆ .. ಜಯ ಎಷ್ಟು ಚೆನ್ನಾಗಿ ಹಾಡ್ತಾಳೆ ಅಂದ್ಕೊಂಡಿದ್ದಿ ! ವೀಣೆ ಹೇಳಿಸ್ತಾ ಇದ್ದಾರೆ."

ಒಂದು ಕ್ಷಣ ಮೌನವಾಗಿದ್ದು–"ಇಷ್ಟು ದಿನ ಅಲ್ಲೇ......ಅಲ್ಲ ಬಂದ್ಬಿಡಬೇಕು ಅಂತ ಅನ್ನಿಸಲಿಲ್ವೇ ?" ತಲೆ ಬಗ್ಗಿಸಿ ತಲೆಯಲ್ಲಿದ್ದ ಕೆಂಪು ಹೂಗಳನ್ನು ನೋಡುತ್ತಾ ಕೇಳಿದಳು ಪದ್ಮಜ.

"ನಾನು ಹುಟ್ಟಿ ಬೆಳೆದ ಊರೇ ಅಲ್ಲ ! ಅಲ್ಲಿ ಎಷ್ಟು ದಿವಸ ಇದ್ರೂ ಇರಬಲ್ಲೆ, ಇಲ್ಲಿಗೆ ಬರಬೇಕು ಅನ್ನಿಸದೆ ಇದ್ರೂ ಬಾಯಿ ಮುಚ್ಚಿಕೊಂಡು ಕಾಲೇಜ್ ತೆಗೆಯುವ ವೇಳೆಗೆ ಬರಬೇಕಾದದ್ದೇ."

ಅವನ ಮಾತುಗಳಿಂದ ಅವಳಿಗೇನೂ ತೃಪ್ತಿಯಾಗಲಿಲ್ಲ. ಸರಸರನೆ ಮನೆಯೊಳಗೆ ಹೊರಟುಹೋದಳು ಪದ್ಮಜ.

ದಿನಗಳೂ, ತಿಂಗಳುಗಳೂ ಸರಸರನೆ ಉರುಳಿ ಹೋಗುತ್ತಿದ್ದವು. ವಾಸು ಕಾಲೇಜು, ತನ್ನ ಪಾಠಗಳನ್ನು ಬಿಟ್ಟರೆ ಮಿಕ್ಕ ಪ್ರಪಂಚವನ್ನೆಲ್ಲಾ ಮರೆತಂತೆ ವರ್ತಿಸುತ್ತಿದ್ದ.

ಹದಿಮೂರು ವರ್ಷದ ಪದ್ಮಜಳ ಹೃದಯದಲ್ಲಿ ಯಾವುದೋ ಅಳಿಸಲಾಗದ ಬಲವಾದ ಸ್ಥಾನ ಸಂಪಾದಿಸಿಕೊಂಡ ವಾಸು.

ಪರೀಕ್ಷೆಗಳು ಮುಗಿದು ಹೋದವು, ಬಟ್ಟೆ ಬರೆ ಜೋಡಿಸಿಕೊಳ್ಳುತ್ತಿದ್ದ ವಾಸು. "ಅತ್ತೇನೇ ಒಂದು ಸಲ ಇಲ್ಲಿಗೆ ಬನ್ನೀಂತ ಬರೆದರೆ ಆಗೋದಿಲ್ವಾ?

ನೀ ಯಾಕೆ ಹೋಗ್ಬೇಕು?" ಎಂದಳು ಪದ್ಮಜ, ಅವನ ಹತ್ತಿರಕ್ಕೆ ಬರುತ್ತಾ.

"ನಾನು ಅಲ್ಲಿಗೆ ಹೋದರೆ ಅಜ್ಜಿ, ಅಮ್ಮ, ಜಯ, ಬೇರೆಯವರನ್ನೆಲ್ಲಾ ನೋಡಬಹುದು" ಎನ್ನುತ್ತಾ ಸೂಟ್‌ಕೇಸ್ ಮುಚ್ಚಿ ಬೀಗ ಹಾಕಿದ.

"ತಂದೆಯವರಿಗೆ ಹೇಳ್ತೀನಿ" ಎನ್ನುತ್ತ ಹೊರಟ ಪದ್ಮಜ 'ಪದ್ಮಜಾ' ಎಂದು ವಾಸು ಕೂಗಿದ್ದರಿಂದ ಹಿಂದಿರುಗಿ ನೋಡಿದಳು.

"ಏನ್ ಹೇಳ್ತೀ?" ನಗುತ್ತಾ ಕೇಳಿದ.

"ಅತ್ತೇನ ಇಲ್ಲಿಗೆ ಬರಹೇಳೂಂತ ಬರೀರಿ ಅಂತ ಹೇಳ್ತೀನಿ."

"ಬೇಡ, ಛೆ, ಛೆ! ಹಾಗೆ ನೀನು ಹೇಳಕೂಡದು."

"ಯಾತಕ್ಕೆ ಹೇಳಕೂಡದು?"

"ಒಮ್ಮೆ ಪದ್ಮಜಳನ್ನು ನೋಡಿ, ನೀನು ಹಾಗೆ ಹೇಳಿ ಮಾವ ನಮ್ಮ ತಾಯೀನ ಬಾಂತ ಕರೆಯೋದು ನನಗಿಷ್ಟವಿಲ್ಲ" ಎಂದ.

"ಸರಿ" ಎನ್ನುತ್ತಾ ಹೊಸಿಲು ದಾಟುತ್ತಿದ್ದ ಪದ್ಮಜಳ ಎದುರಿಗೆ ಬಂದ ಗೋಪಾಲರಾವ್, "ಪ್ರಯಾಣವಾಗ್ತಿರೋ ಹಾಗಿದೆ. ಅಕ್ಕ, ನಮ್ಮಮ್ಮ ನಾಳೆ ಸಂಜೆ ಇಲ್ಲಿಗೇ ಬರ್ತಿದಾರೆ, ನೋಡು ಕಾಗದ ಬಂದಿದೆ" ಎನ್ನುತ್ತಾ ಪೋಸ್ಟ್ ಕಾರ್ಡ್ ವಾಸುವಿಗೆ ಕೊಟ್ಟರು.

ಬೇಗ ಬೇಗ ಓದಿದ ವಾಸು ....."ಬಾ ಅಂತ ನೀನು ಬರೆದಿದ್ಯಾ?" ಎಂದ.

"ಬಹಳ ದಿನಗಳಿಂದ ಒಂದು ಸಲ ಬಂದು ಹೋಗೀಂತ ಬರೆದಿದ್ದೆ."

"ಎಷ್ಟು ದಿನ ಇರ್ತಾರೆ ಅಮ್ಮ ಅಜ್ಜಿ?" ಕೇಳಿದ ವಾಸು.

"ಓಹೋ....! ನಿಮ್ಮ ತಂದೆಯವರ ಬಳಿ ಹೋಗೋದಕ್ಕಾ?" ಎನ್ನಲು ಹೋಗಿ ಪದ್ಮಜಳ ಕಡೆ ನೋಡಿ ತುಟಿಗಳನ್ನು ಬಿಗಿ ಹಿಡಿದು, "ಊಂ, ಚೆನ್ನಾಗಿದೆ! ನನಗೇನು ಗೊತ್ತು! ಅವರಿಗಿಷ್ಟವಿದ್ದಷ್ಟು ದಿನ ಇರ್ತಾರೆ" ಎಂದರು ಗೋಪಾಲರಾವ್.

'ಈಗೇನ್ಮಾಡ್ತೀ'? ಎನ್ನುವಂತೆ ನೋಡಿದಳು ವಾಸುವನ್ನು ಪದ್ಮಜ.

ಬೇಸರದಿಂದ ಪದ್ಮಜಳ ಕಡೆ ನೋಡಿದ ವಾಸು.

o o o o

ಮಹಡಿಯ ಮೇಲೆ ಹಾಲು ಚೆಲ್ಲಿದಂತಹ ಬೆಳದಿಂಗಳು. ಮಧುಮತಿಯ ಪಕ್ಕದಲ್ಲಿ ಮಲಗಿ ನಗುತ್ತಾ ಏನೇನೋ ಹರಟುತ್ತಿದ್ದ ಪದ್ಮಜ, ಅವಳ

ಮುಂಗುರುಳನ್ನು ನೇವರಿಸಿ ಅವಳನ್ನು ತನ್ನ ಹತ್ತಿರಕ್ಕೆಳೆದುಕೊಂಡು ನೋಡುತ್ತಾ ತೃಪ್ತಿಯ ನಗೆ ಸೂಸುತ್ತಿದ್ದ ಮಧುಮತಿಯನ್ನು ನೋಡಿದ. ವಾಸುವಿಗೆ ಆ ದೃಶ್ಯ ಆಶ್ಚರ್ಯವಾಗಿ ನಂಬಲಾರದಂತೆ ಇತ್ತು....."ಅಮ್ಮಾ!...... ಪದ್ಮಜ......ಪದ್ಮಜ. ನಿನಗೆ ಹೇಗೆ ಗೊತ್ತು ?" ಎಂದ ಅನಾಲೋಚಿತವಾಗಿ.

"ನಿನ್ನ ಮುಖ! ಏನು ಪ್ರಶ್ನೆ ಇದು ?......ಬಾ, ಇಲ್ಲಿ ಕೂತ್ಕೋ.... ನನ್ನ ತಮ್ಮನ ಮಗಳು......ಪರಿಚಯ, ಸ್ನೇಹ ಅಗತ್ಯವಿಲ್ಲ. ನಮ್ಮ ನಡುವೆ ಪ್ರೇಮ, ಅಭಿಮಾನಗಳು ಸಹಜವಾಗಿಯೇ ಇರುತ್ತವೆ" ಎಂದಳು. ಮಧುಮತಿ, ಹಸುಳೆಯ ಮಾತುಗಳನ್ನು ಕೇಳಿ ನಗುವಂತೆ ನಗುತ್ತಾ!

"ನಿನಗೇನು ಗೊತ್ತು ? ಅಂದರೆ ಅರ್ಥ ಏನು ವಾಸು ?" ಕಿಲಕಿಲನೆ ನಕ್ಕಳು ಪದ್ಮಜ.

ಅವನಿಗೆ ರೋಷ ಬಂತು. ಬರೀ ಬುದ್ಧಿಗೇಡಿಯನ್ನು ಅಂದಂತೆ ಅನ್ನುತ್ತಿದ್ದಾರೆ ಇಬ್ಬರೂ. ಜಯ ಆದ್ರೆ ಅಮ್ಮನಿಗೆ ಚೆನ್ನಾಗಿ ಗೊತ್ತು......ನೀನು ನಡಿಯೋದು ಕಲಿತ ಹೊಸದರಲ್ಲಿ ನೋಡಿದ್ದರೇನೋ ನಿನ್ನನ್ನ......ಇಷ್ಟು ಇದ್ದಾಗಿ ಅವರ ಪಕ್ಕದಲ್ಲಿ ಕೂತು ಹರಟೇ ಹೊಡೀತಿದ್ದಿ ಮಹಾ ಗೊತ್ತಿರೋ ಹಾಗೆ" ಎಂದ ವಾಸು ಕಂದಿದ ಮುಖದಿಂದ ಪದ್ಮಜಳ ಕಡೆ ದೃಷ್ಟಿ ನೆಟ್ಟು.

"ಜಯಾ, ನಾನು ಎಲ್ಲಾ ಒಂದೇ ಅಲ್ವೇ ಅತ್ತೇ ನಿನಗೆ ?" ಎಂದಳು ಪದ್ಮಜ.

"ಅವನ ಮಾತಿಗೇನು ಬಿಡು ? ನನಗೆ ಎಲ್ರೂ ಒಂದೇಮ್ಮ! ವಾಸು! ಯಾತಕ್ಕೆ ಕೋಪ ?— ಬಾ......ಕೂತ್ಕೋ......ಜಯ ಝುಳಝುಳ ಪ್ರವಹಿಸುವ ಕೆರೆಯಂತಾದರೆ, ಪದ್ಮಜ ತುಂಬಿ ಹರಿಯುವ ಗಂಗಾನದಿಯಂತೆ. ನಾನೊಂದ್ರೆ ನಿಮಗೆ ತುಂಬಾ ಅಭಿಮಾನ ಅಲ್ವೇ ?" ಎನ್ನುತ್ತಾ ಪದ್ಮಜಳ ಮುಖವನ್ನು ತನ್ನೆಡೆಗೆ ತಿರುಗಿಸಿಕೊಂಡು ಗುಂಡಗೆ ಅಂದವಾಗಿದ್ದ ಪದ್ಮಜಳ ಕಣ್ಣುಗಳನ್ನು ನೋಡಿದಳು ಮಧುಮತಿ.

"ನೀನೊಂದ್ರೆ ನನಗೆ ಬಹಳ ಇಷ್ಟ ಅತ್ತೆ. ನೀನು ಬಹಳ ಒಳ್ಳೆಯವಳು. ನಮ್ಮ ಹತ್ತಿರವೇ ಇದ್ದುಬಿಡಬಾರ್ದಾ ?" ಎಂದಳು ಪದ್ಮಜ ಮಧುಮತಿಯ ಭುಜ ಹಿಡಿದು ಅಲ್ಲಾಡಿಸುತ್ತಾ.

ಅಲ್ಲಿ ನಿಲ್ಲಲು ಇಷ್ಟವಾಗದಿದ್ದ ವಾಸು ಸರಸರನೆ ಮಹಡಿ ಮೆಟ್ಟಿಲುಗಳನ್ನು ಇಳಿದು ಹೊರಟುಹೋದ.

ವಾರದ ನಂತರ ಹೊರಡುವಾಗ, "ನಿನ್ನ ಋಣ ಹೇಗಾದ್ರೂ ತೀರಿಸ್ತೀನಪ್ಪ ಗೋಪಿ......ವಾಸೂನ......" ಎನ್ನುತ್ತಾ ನಿಲ್ಲಿಸಿಬಿಟ್ಟಳು ಮಧುಮತಿ, ದುಃಖದಿಂದ ಗಂಟಲು ಬಿಗಿಯಿತು.

"ನಮ್ಮ ಮಧ್ಯೆ ಋಣ ಏನ್ಬಂತು ? ಏನೋ ಮಾತು ! ಅವನು ನನಗೆ ಭಾರವೇನು ? ಇನ್ನೊಬ್ಬ ಮಗ ನನಗಿದ್ದಿದ್ರೆ ಸಾಕ್ತಿರಲಿಲ್ವಾ ! ಬಿಟ್ಬಿಡ್ತೀನಾ ?" ಎಂದರು ಗೋಪಾಲರಾವ್ ಕೋಪಿಸಿಕೊಂಡಂತೆ.

"ಚಿಕ್ಕ ವಯಸ್ಸು. ಅವನೇನಾದ್ರೂ ತಪ್ಪುಮಾಡಿದ್ರೂ ಸಹಿಸಬೇಕು, ಲಕ್ಷ್ಮಿ," ಎಂದು ಕೇಳಿಕೊಂಡಳು ಲಕ್ಷ್ಮಿಯನ್ನು.

"ನಿಮ್ಮ ಮಗ ತಪ್ಪು ಮಾಡ್ತಾನಾ ? ಒಳ್ಳೇವ್ರು ನೀವು ! ಅತ್ತಿಗೆ, ನೀವು ಅವನಿನ್ನೂ ಹಸುಗೂಸು ಅಂದುಕೊಂಡಿದ್ದೀರಾ ! ನಮ್ಮೆಲ್ಲರಿಗಿಂತ ಬುದ್ಧಿವಂತ ಅವನು" ಎಂದು ನಗುತ್ತಾ ಹೇಳಿದ ಲಕ್ಷ್ಮಿಯನ್ನು ಬೆಚ್ಚಿ ಹೋಗಿ ನೋಡಿದ ಮಧುಮತಿಗೆ ಪುನಃ "ಊಹೂಂ, ಬೇರೆ ಏನೂ ಅರ್ಥ ಮಾಡ್ಕೋಬೇಡಿ ನನ್ನ ಮಾತನ್ನ, ಬಹಳ ಬುದ್ಧಿವಂತ. ಒಳ್ಳೆ ಹುಡುಗ ವಾಸು ಅಂತ ಹೇಳ್ದೆ, ಅಷ್ಟೆ. ಅತ್ತಿಗೆ, ನೀವು ಅದೃಷ್ಟವಂತರು......ಅವನು ಮುಂದಕ್ಕೆ ಬರಬೇಕು" ಎಂದಳು ಲಕ್ಷ್ಮಿ.

ಭಾರವಾದ ನಿಟ್ಟುಸಿರು ಬಿಟ್ಟಳು ಮಧುಮತಿ.

"ಗೋಪಾಲ......ಹೇಗೋ ಕೈಹಿಡಿದಿದ್ದೀ, ಇನ್ನು ಮೂರು ವರ್ಷ ಓದಿಸಿದೆ ಅಂದ್ರೆ ತಾಯಿ-ಮಗ ಅವರ ಪಾಡಿಗೆ ಅವರು ಜೀವನ ನಡೆಸ್ಕೋತಾರೆ" ಎಂದರು ಜಾನಕಮ್ಮ ಅಭಿಮಾನದಿಂದ ಮಗನನ್ನು ನೋಡುತ್ತಾ.

"ಹಾಗೇ ಆಗಲಮ್ಮ. ಅವನನ್ನ ಓದಿಸೋದು ನನಗೇನೂ ಕಷ್ಟವಿಲ್ಲ" ನಕ್ಕುಬಿಟ್ಟರು ಗೋಪಾಲರಾವ್.

o o o o

ವಾಸು ಪಿ.ಯು.ಸಿ. ಫಸ್ಟ್ ಕ್ಲಾಸ್‌ನಲ್ಲಿ ಪಾಸು ಮಾಡಿದ್ದಕ್ಕೆಂದು ವಾಚ್ ಕೊಂಡರು ಪ್ರಸಾದರಾವ್.

"ನನಗೇಕಪ್ಪ ?......ಇದೆಲ್ಲಿಯದು ಅಂತ ಕೇಳಿದ್ರೆ ಅಮ್ಮನಿಗೆ ಏನೂಂತ ಹೇಳೋದು ?" ಎಂದು ಕೇಳಿ ಎರಡು ಕ್ಷಣಗಳ ನಂತರ ಮುಗುಳ್ನಗೆ ನಗುತ್ತಾ " 'ನಮ್ಮ ಅಪ್ಪ ಕೊಟ್ರು ಅಮ್ಮ !' ಅಂತ ಹೇಳ್ಲಾ ?" ಎಂದ ವಾಸು.

"ನಿನ್ನ ವಯಸ್ಸಿನವರು ಕೈಗೆ ವಾಚ್, ಬೆರಳಿಗೆ ಹರಳಿನ ಉಂಗುರ ಹಾಕ್ಕೊಂಡಿರ್ತಾರೆ. ಅದನ್ನ ನೋಡಿದರೆ ನನಗೆ ಚನ್ನಾಗಿ ಕಾಣಿಸುತ್ತೆ. ನೀನು ಹಾಕ್ಕೊಳ್ಳೋದು ನೋಡಬೇಕು ಅನ್ನಿಸಿ ಕೊಂಡುಕೊಂಡು ಬಂದೆ......" ಏನೋ ಸಂಕೋಚದಿಂದ ಬಂದಿದ್ದವು ಈ ಮಾತುಗಳು.

ವಾಸುವಿನ ಮುಖ ಉದಾಸೀನವಾಗಿ ಬದಲಾವಣೆ ಹೊಂದಿತು. "ಎಲ್ಲರಂತಹ ಅದೃಷ್ಟವಂತನೇನು ನಾನು ? ಇಂತಹ ಕಾಣಿಕೆಗಳನ್ನು ಹೃದಯ ಪೂರ್ವಕವಾದ ಪ್ರೇಮಾನುರಾಗಗಳಿಂದ ಕೊಡುತ್ತಾ ಈ ಷರತ್ತುಗಳೇಕೆ? ಬೇರೆಯವರಿಗೆ ತಾನೇನು ಹೇಳಬೇಕೆಂಬುದನ್ನು ತಾವೇ ಸೂಚಿಸಕೂಡದೇನು ? ಅಮ್ಮ, ಜಯ, ಪದ್ಮಜ ಎಲ್ಲರೂ ಕೇಳುತ್ತಾರೆ. ದೊಡ್ಡ ಸುಳ್ಳನ್ನು ಸೃಷ್ಟಿಸ ಬೇಕು." ಸ್ವಲ್ಪ ಕೋಪಗೊಂಡ ವಾಸು–"ಎಲ್ಲರ ಹಾಗೆ ನಾನು ಹೇಗಿರೋದ ಕ್ಕಾಗುತ್ತದೆ?" ಎಂದ. ಒಡನೆಯೇ ಛಟೀರನೆ ಕಪಾಳಕ್ಕೆ ಬಿಗಿದಂತಾಯಿತು ಪ್ರಸಾದರಾವ್‌ಗೆ ಆ ಮಾತುಗಳು.

ಹುಬ್ಬು ಗಂಟು ಹಾಕಿ ವಾಸುವನ್ನು ನೋಡುತ್ತಾ "ಅಂದ್ರೆ ?" ಎಂದರು.

"ಮೊನ್ನೆ ಬಟ್ಟೆಗಳನ್ನು ನೋಡಿದ ಅಮ್ಮ ನನ್ನನ್ನು ಅನುಮಾನಿಸಿ ಸಂಕಟಪಟ್ರು ಅಪ್ಪಾ !......" ಎನ್ನುತ್ತಾ ತಾನು ಊರಿಗೆ ಹೋದಂದಿನಿಂದ ತನಗೆ, ತಾಯಿಗೆ ಆದ ವಾಗ್ವಾದವನ್ನು ವಿವರಿಸಿದ.

ಕೆಲಕ್ಷಣಗಳ ನಂತರ ಭಾರವಾದ ನಿಟ್ಟುಸಿರು ಬಿಟ್ಟು, "ಸುಳ್ಳು ಹೇಳೋ ದಕ್ಕೆ ನೀನೆಷ್ಟು ಸಂಕಟಪಡ್ತಿದ್ದಿಯೋ, ನಿನ್ನ ಹತ್ರ ಸುಳ್ಳು ಹೇಳಿಸೋ ಹಾಗಾದುದಕ್ಕೆ ಅದಕ್ಕಿಂತ ಸಾವಿರಪಾಲು ಹೆಚ್ಚು ನಾನು ಸಂಕಟಪಡ್ತಿದ್ದೀನಿ. ಆದರೆ ವಾಸೂ ! ನಾ ಅಂದುಕೊಂಡಿರುವಂತೆ ನಿನ್ನ ಓದು ಪೂರ್ತಿಯಾಗುವ ವರೆಗೂ ಈ ವಿಷಯ ಹೊರಗೆ ಬರಲು ಸಾಧ್ಯವಿಲ್ಲ. ಗೋಪಾಲನ ವ್ಯಕ್ತಿತ್ವ ನನಗೆ ಗೊತ್ತು. ಅವನು ಹೇಳೋದಿಲ್ಲ. ನನಗೆ ತಿಳಿದಿರುವ ನಿನ್ನ ಅಮ್ಮ ಬಹಳ ಮೊಂಡು ಮನುಷ್ಯಿ. ನಿಮ್ಮ ಅಮ್ಮನಲ್ಲಿ ನಾನು ನೋಡಿರೋದು ಗರ್ವ, ನಿರ್ಲಕ್ಷ್ಯ, ಅವಳಲ್ಲಿ ಅಣು ಅಣುವೂ ಗೋಚರಿಸುವ ಅಹಂ......ನಿಮ್ಮ ಅಮ್ಮನ ವಿಷಯ ನನಗೆ ಚೆನ್ನಾಗಿ ಗೊತ್ತು. ಅವಳ ಸ್ವಭಾವ ಕಾಲಕ್ಕನುಗುಣವಾಗಿ ಬದಲಾಯಿಸೋದಿಲ್ಲ. ಅವಳು ಬದಲಾಯಿಸಿಕೊಳ್ಳೋದಿಲ್ಲ" ಎಂದರು. ಆ ಧ್ವನಿಯಲ್ಲಿ ರೋಷ, ದ್ವೇಷ, ಸಂಕಟ ತನ್ನನ್ನು ಮೀರಿ ತನ್ನಲ್ಲಿದ್ದ ಭಾವನೆ

ಗಳನ್ನು ಅಡಗಿಸಿಕೊಳ್ಳಲು ಎರಡು ನಿಮಿಷ ನಿಲ್ಲಿಸಿ ನಂತರ ದೀರ್ಘವಾದ ನಿಟ್ಟುಸಿರು ಬಿಟ್ಟು ನಿಧಾನವಾಗಿ ಹೇಳಿದರು "ಈ ವಿಷಯವನ್ನು ಎಂದಾದರೂ ನನ್ನ ಬಾಯಿಂದಲೇ ಕೇಳಬೇಕು ನಿಮ್ಮ ಅಮ್ಮ. ಅವಳಿಗೆ ನಾನೇ ತಿಳಿಸ ಬೇಕು ಈ ವಿಷಯವನ್ನು. ಆ ಸಂದರ್ಭ ಮತ್ತು ಆ ದಿನ ಬರಬೇಕು ಅಷ್ಟೆ. ನಮ್ಮ ಜೀವನಗಳು ಹಾಳಾಗಿಹೋದದ್ದು ಹೋಗಲಿ, ಆದರೆ ನೀನು, ನಿನ್ನ ಬದುಕು ಬಂಗಾರವಾಗಬೇಕು. ಅದಕ್ಕೆ ಅಗತ್ಯವಾದದ್ದೇನು ಬೇಕಾದರೂ ನಾನು ಮಾಡಲು ಸಿದ್ಧ. ಎಲ್ಲರಂತಹ ತಂದೆ, ಮಗ ನಾವು ಹೇಗಾಗಬಲ್ಲೆವು? ನಿನ್ನ ಚಿಕ್ಕಂದಿನ ಆಟಪಾಟ, ಅದರಲ್ಲಿನ ಸೊಬಗು ಸಂತೋಷವನ್ನು ತಂದೆ ಯಾದ ನಾನು ಅನುಭವಿಸಿದೆನೇನು? ಕಳೆದುಹೋದ ಕಾಲ ಪುನಃ ಕೈಗೆ ಸಿಕ್ಕುವುದಿಲ್ಲ. ಆದರೆ ನನ್ನ ಕೈಗೆ ಸಿಕ್ಕಿರುವ ಕಾಲವನ್ನು ಮಾತ್ರ ಬಿಡಲಾರೆ. ನಾನು ಕೊಳ್ಳುವ ಬಟ್ಟೆಗಳನ್ನು ನೀನು ಧರಿಸಬೇಕು. ಈ ಗಡಿಯಾರವನ್ನು ಕೈಗೆ ಕಟ್ಟಿಕೋ. ಸಂಜೆ ಅಂಗಡಿಯಲ್ಲಿ ಉಂಗುರವೊಂದನ್ನು ಕೊಂಡು ನಿನ್ನ ಬೆರಳಿಗೆ ತೊಡಿಸಬೇಕು. ನಾನು ಏನು ತೆಗೆದುಕೊಟ್ಟರೂ ಬೇಡವೆಂದು ಕಾರಣಗಳನ್ನು ಹೇಳಬೇಡ. ಎಲ್ಲರ ಮಧ್ಯೆ ಇರುವ ನಿಮ್ಮ ಅಮ್ಮ ಹಿಂದಿನ ದನ್ನು ಕೆಲ ಕ್ಷಣಗಳಾದರೂ ಮರೆಯಬಲ್ಲಳು. ನನಗೆ ಯಾರಿದ್ದಾರೆ? ನಾನೇನು ಅನುಭವಿಸಬೇಕು?" ಎಷ್ಟು ತಡೆಯಬೇಕೆಂದರೂ ನಿಲ್ಲದ ಆವೇಶ, ನೋವಿನಿಂದ ನುಡಿದರು ಪ್ರಸಾದರಾವ್.

"ನಿಮಗೆ ಕೋಪ ಬಂದಂತಿದೆ. ನಿಮ್ಮಿಷ್ಟ. ಹಾಗೇ ಮಾಡಿ, ಅಪ್ಪಾ! ಒಳ್ಳೆ ಬಟ್ಟೆಗಳು, ವಾಚ್, ಉಂಗುರ ಇವೆಲ್ಲಾ ಬೇಕು ಅನ್ನೋ ಆಸೆ ನನಗೆ ಮಾತ್ರ ಇಲ್ಲವೇನು?" ಎಂದು ಗಡಿಯಾರವನ್ನು ಕಟ್ಟಿಕೊಳ್ಳುತ್ತಾ "ನೀವೇನೇನೋ ಅಂದಿರಿ. ನನಗೇನೂ ಅರ್ಥವಾಗಲಿಲ್ಲ" ಎಂದ ವಾಸು ಕಳೆ ಗುಂದಿದ ಮುಖ ಮೇಲಕ್ಕೆತ್ತಿ ಪ್ರಸಾದರಾವನನ್ನು ನೋಡುತ್ತಾ.

"ಅಯ್ಯಯ್ಯೋ, ನಿನ್ನನ್ನೇನೂ ಅನ್ನಲಿಲ್ಲ ವಾಸೂ! ಒಂದೊಂದು ಸಲ ಏನೋ ಹಾಗೆ ಮಾತಾಡಿಬಿಡ್ತೀನಿ. ಊಂ, ಕಾಲೇಜಿಗೆ ಅಪ್ಲಿಕೇಷನ್ ಹಾಕಿದ್ದೀ ತಾನೇ? ಬಂದು ಕೊನೆ ಪಕ್ಷ ಹತ್ತು ದಿವಸವಾದ್ರೂ ಇರ್ತೀ ಅಂದ್ಕೊಂಡಿದ್ದೆ. ನಿಮ್ಮ ಅಮ್ಮನನ್ನೂ ಒಂದು ಸಲ ನೋಡ್ಕೊಂಡು ಹೋಗು. ಪುನಃ ಇನ್ಯಾವಾಗಲೋ ಎದುರು ನೋಡಿ ಸುಸ್ತಾಗಬೇಕು ನಾವು. ಕಾಲೇಜು ಪಾಠಗಳಲ್ಲಿ ಮುಳುಗಿಹೋಗಿ ಕಾಗದವೂ ಬರಿಯೋದಿಲ್ಲ" ಎನ್ನುತ್ತಾ ಕಳಾ

ಹೀನವಾದ ಮುಖವನ್ನು ಸಂಪಡಿಸಿಕೊಳ್ಳಲು ಪ್ರಯತ್ನಿಸುತ್ತಾ ವಾಸು ಮುಖ ನೋಡಿ "ಸಿನಿಮಾಗೆ ಹೋಗೋಣ್ವಾ?" ಎಂದರು ಪ್ರಸಾದರಾವ್.

"ಊಂ, ನಡೀರಿ" ಎಂದ ವಾಸು ಡ್ರೆಸ್ ಬದಲಾಯಿಸುತ್ತಾ. ಇಬ್ಬರಿಗೂ ಮನರಂಜನೆ ಬೇಕೆನ್ನಿಸಿತ್ತು.

ಮೌನವಾಗಿ ಒಬ್ಬರ ಪಕ್ಕದಲ್ಲಿ ಒಬ್ಬರು ನಡೆಯುತ್ತಿದ್ದರು. ಇಬ್ಬರ ಮನಸ್ಸೂ ಭಾರವಾಗಿತ್ತು. " 'ಎಳೆಯ ಮನಸ್ಸುಗಳು' ಪಿಕ್ಚರ್ ಚೆನ್ನಾಗಿದೆಯಂತೆ, ಹೋಗೋಣ್ವಾ ಅಪ್ಪಾ?"

ಬೆಚ್ಚಿದಂತೆ ವಾಸುವಿನ ಕಡೆ ನೋಡಿದರು ಪ್ರಸಾದರಾವ್. ಏನೂ ಹೇಳಲಾಗದೆ ಕಸಿವಿಸಿಯಾದದ್ದರಿಂದ ನಡೆಯುವ ವೇಗ ಹೆಚ್ಚಿಸಿದರು.

ಕೆಲ ಕ್ಷಣ ನಿಶ್ಶಬ್ದವಾಗಿ ಕಳೆದ ನಂತರ "ಸ್ಟೋರಿ ನನಗೆ ಗೊತ್ತಿಲ್ಲ. ನನ್ ಫ್ರೆಂಡ್ ಹೇಳ್ದ. ಈಗ ಹೊಸದಾಗಿ ಬಂದಿರೋ ಸಿನಿಮಾಗಳಲ್ಲಿ ಇದು ತುಂಬಾ ಚೆನ್ನಾಗಿದೆ, ಅಂತ" ಎಂದು ಹೇಳಿ ಏನಂತೀರಿ ಎಂಬಂತೆ ಪ್ರಸಾದರಾವ್ ಕಡೆ ನೋಡಿದ.

"ಸರಿ ನಡಿ". ಇನ್ನೊಂದು ರಸ್ತೆಗೆ ತಿರುಗಿದರು ಪ್ರಸಾದರಾವ್. ಅವರನ್ನನುಸರಿಸಿದ ವಾಸು.

ಕುತೂಹಲದಿಂದ ಸಿನಿಮಾ ನೋಡುತ್ತಿದ್ದ ವಾಸು. ಕೋಳಿ ಒಂದು ಕೊನೆಯಲ್ಲಿ ಹುಂಜ ಒಂದು ಕೊನೆಯಲ್ಲಿ. ಕರುಣಾರಸಪೂರಿತವಾದ ಹಾಡೊಂದನ್ನು ಹಾಡುತ್ತಿದ್ದಳು. ತಾಯಿ ತಂದೆಯರ ಮನಸ್ತಾಪದಿಂದ ನಲುಗಿ ಹೋಗಿದ್ದ ಹುಡುಗಿ. ತನಗರಿವಿಲ್ಲದೆಯೇ ಪಕ್ಕಕ್ಕೆ ತಿರುಗಿ ನೋಡಿದ ವಾಸು. ಪ್ರಸಾದರಾವ್ ಕೂತಿದ್ದ ಕುರ್ಚಿ ಖಾಲಿಯಾಗಿತ್ತು. ಥಟ್ಟನೆ ವಾಸುವಿನ ಕಣ್ಣುಗಳಲ್ಲಿ ನೀರು ಬಂತು. ಬೇಗ ಬೇಗ ಮುಖವನ್ನು ಒರೆಸಿಕೊಂಡ ವಾಸು ಕರ್ಚೀಫಿನಿಂದ.

ತಿರುಪತಿ ಬೆಟ್ಟದ ಸೀನು. ನಾಯಕಿ ನಾಯಕ ಮಕ್ಕಳನ್ನು ಕರೆಯುತ್ತಿದ್ದಾರೆ. ಮೆಲ್ಲಗೆ ಕೆಮ್ಮಿ ತನ್ನ ಸೀಟಿನಲ್ಲಿ ಕೂತರು ಪ್ರಸಾದರಾವ್.

ಮಾರನೆಯ ದಿನ ಬೆಳಿಗ್ಗೆಯವರೆಗೂ ಇಬ್ಬರ ಮಧ್ಯೆ ಹೆಚ್ಚು ಮಾತುಕತೆಯಿಲ್ಲದೆ ಕಳೆದುಹೋಯಿತು.

ಈ ಬಾರಿ ಪ್ರಸಾದರಾವ್‌ರೊಡನೆ ಸ್ವಲ್ಪ ಸಲುಗೆಯುಂಟಾಗಿತ್ತು ವಾಸುವಿಗೆ. ಸಂಕೋಚ, ನಾಚಿಕೆ ಹೋಗಿ ಅಜ್ಜಿ, ದೊಡ್ಡಮಾವ, ಜಯು

ಎಂದು ಒಬ್ಬೊಬ್ಬರ ಹೆಸರೂ ಹೇಳುತ್ತಾ ಎಷ್ಟೋ ವಿಷಯಗಳನ್ನು ಹೇಳುತ್ತಿದ್ದ ರಾಜಶೇಖರ್, ಕೋಪ ತಾಪ ಇನ್ನೂ ಏನೇನೋ ಹೇಳಿ ಪ್ರಸಾದರಾವನ್ನು ನಗುವಂತೆ ಮಾಡಿದ. ಪ್ರಸಾದರಾವ್ ಕುತೂಹಲದಿಂದ ಮಧ್ಯೆ ಮಧ್ಯೆ ಪ್ರಶ್ನೆಗಳನ್ನು ಹಾಕುತ್ತಿದ್ದರು.

ವಾಸು ಹೊರಟ ದಿನ ಪ್ರಸಾದರಾವ್ ಮುಖದಲ್ಲಿ ಭಯ ಎದ್ದು ಕಾಣುತ್ತಿತ್ತು. "ಪುನಃ ಯಾವಾಗ ಬರ್‍ತೀ ?" ಪ್ರಶ್ನಿಸಿದರು ಬಟ್ಟೆ ಬರೆ ಜೋಡಿಸುತ್ತಿದ್ದ ವಾಸುವನ್ನು ನೋಡುತ್ತಾ.

"ಇನ್ನೂ ನಾನು ಮನೆ ಬಿಟ್ಟು ಹೊರಟೇ ಇಲ್ಲ. ಈ ಸಲ ಇಲ್ಲೇ ಬಹಳ ದಿನ ಇದ್ಬಿಟ್ಟೆ. ಪುನಃ ಯಾವಾಗ ಬರ್‍ತೀ ಅಂತ ಕೇಳ್ತಿದ್ದೀರಿ. ಒಂದು ಸಲ ಬಂದು ಹೋಗು ಅಂತ ಅಮ್ಮ ಬರೀತಾಲೇ ಇದ್ದಾರೆ. ನಾನು ಹೇಗೆ ಓದ್ಕೋಬೇಕು ಅಪ್ಪಾ ? ಅಮ್ಮನ ಕಾಗದಗಳನ್ನು ನೋಡಿದ ಮಾವ ಏನಂದ್ರೋ ಗೊತ್ತಾ ? ಆಗಾಗ ಹೋಗ್ಬೇಡ ಅಂದ್ರು. ಸ್ವಲ್ಪ ದಿನ ಹೋಗದೇನೇ ಇದ್ರೆ ನೋಡ್ಬೇಕು ಅನ್ನೋ ಆಸೆ ತನ್ನಷ್ಟಕ್ಕೆ ತಾನೇ ಕಡಿಮೆಯಾಗುತ್ತಂತೆ."

"ಹಾಗೆ ಕಡಿಮೆ ಆಗೋದಲ್ಲ ನನ್ನ ಆಸೆ. ನೀನು ಬರಲೇಬೇಕು" ನಗುತ್ತಾ ಹೇಳಿದರು ಪ್ರಸಾದರಾವ್.

"ಹಾಗೇ ಆಗಲಿ, ಇಲ್ಲಿಗೆ ಬಂದರೆ ಪ್ರಶಾಂತವಾಗಿರುತ್ತೆ. ಪುಸ್ತಕಗಳನ್ನು ಇಲ್ಲೇ ತಂದ್ಕೊತೀನಿ. ಅಮ್ಮನ್ನ ನೋಡೋದಕ್ಕೆ ಅಲ್ಲಿ ಹೋದ್ರೆ ಒಂದೇ ರಗಳೆ.... ಈ ಸಲ ಬೇಗ ಬರ್‍ತೀನಿ.... ಆದರೆ ನಿಮ್ಮ ಆರೋಗ್ಯ ಚೆನ್ನಾಗಿ ನೋಡ್ಕೊಳ್ಳಿ ಅಪ್ಪಾ !" ಆ ಧ್ವನಿಯಲ್ಲಿ ಬೇಡಿಕೆ.

"ನನ್ನ ಆರೋಗ್ಯಕ್ಕೇನು, ಚೆನ್ನಾಗೇ ಇದೆಯಲ್ಲಾ !"

"ಏನು ಚೆನ್ನಾಗಿರೋದು. ರಾತ್ರಿಯೆಲ್ಲಾ ಕೆಮ್ತಾ ಇರ್‍ತೀರಿ. ನಾನು ಕೇಳಿಸಿಕೊಂಡಿಲ್ಲ ಅಂದ್ಕೊಂಡಿದ್ದೀರಾ ?"

ತನ್ನ ಆರೋಗ್ಯದ ವಿಷಯವಾಗಿ ತನ್ನನ್ನು ಎಚ್ಚರಿಸುತ್ತಿದ್ದಾನೆ ತನ್ನ ಮಗ......ತೃಪ್ತಿಯಿಂದ ವಾಸುವಿನ ಕಡೆ ನೋಡಿದರು ಪ್ರಸಾದರಾವ್.

"ಇದೋ ಟ್ಯಾಬ್ಲೆಟ್ಸ್ ಹಾಗೇ ಇದೆಯಲ್ಲಾ ! ತಗೊಳ್ಳಲೇ ಇಲ್ವಾ ? ಛೆ ! ನಿಮ್ಮ ಹತ್ತಿರ ಇದ್ದು ನಿಮಗೆ ಯಾರು ಹೇಳಬೇಕು ? ಅಪ್ಪಾ! ಈವತ್ತು ನಾನು ಹೊರಟ್ಹೋಗ್ತಿದ್ದೀನಿ, ಕೆಮ್ಮುತ್ತಾ ಹಾಗೇ ಜಾಸ್ತಿಯಾಗುತ್ತೆ. ಒಂಟಿಯಾಗಿ ರೂಮಿನಲ್ಲಿ ಮಲಕ್ಕೊಂಡು ಕೆಮ್ಮು ಅವಸ್ಥೆಪಡ್ತೀರಿ. ಕುಡಿಯೋದಕ್ಕೆ

ನೀರು ಕೊಡೋವ್ರು ದಿಕ್ಕಿಲ್ಲ.....ನಿಮ್ಮ ಹತ್ರ ಡಾಕ್ಟರ್ ಹೇಳಿದ ಪ್ರತಿ ಮಾತೂ ನನಗರ್ಥವಾಗ್ತಿದೆ. ನೀವು ಸರಿಯಾಗಿ ಔಷಧಿ ಸೇವಿಸದೇ ಇದ್ರೆ ಏನೂ ಪ್ರಯೋಜನವಿಲ್ಲ." ಆ ಧ್ವನಿಯಲ್ಲಿ ಕಳವಳ, ನೋವು, ಬೇಸರ.

ಹಾಗೆ ತನ್ನನ್ನು ಎಚ್ಚರಿಸುತ್ತಾ, ಗದರುತ್ತಿರುವ ವಾಸುವಿನ ಕಡೆ ಅರಳಿದ ಕಣ್ಣುಗಳಿಂದ ನೋಡುತ್ತಾ, "ಈ ಮಾತುಗಳಾಡುತ್ತಿರುವುದು ಇವನೇನೇ" ಎಂದು ಆಶ್ಚರ್ಯದಿಂದ ನೋಡಿ, "ಡಾಕ್ಟರ್ ಏನು ಹೇಳಿದರು, ವಾಸೂ !" ಎಂದರು ಪ್ರಸಾದರಾವ್ ಮಂದಹಾಸ ಬೀರುತ್ತಾ.

"ನಿಮಗೆ ಜ್ವರ ಬಂದ ದಿನ ಲಕ್ಷ್ಯ ಮಾಡದೆ ಅಂಗಡಿಗೆ ಹೋದಿರಿ. ನಿಮ್ಮ ಜೊತೆಯಲ್ಲಿ ನಾನೂ ಬಂದಿದ್ದೆ, ಜ್ಞಾಪಕವಿದೆಯಾ ?.... ನಿಮ್ಮ ಓನರ್ ಫ್ಯಾಮಿಲಿ ಡಾಕ್ಟರ್ ನಿಮ್ಮನ್ನ ಪರೀಕ್ಷೆ ಮಾಡಿ, ಅಶ್ರದ್ಧೆ ಮಾಡಿದರೆ ಟಿ.ಬಿ.ಗೆ ತಿರುಗಬಹುದು ಅಂತ ಹೇಳಲಿಲ್ವಾ ?" ಎಂದ ವಾಸು.

"ನಾನು ಅಶ್ರದ್ಧೆ ಮಾಡ್ತೀನಿ ಅಂತ ಹಾಗೆ ಹೆದರಿಸಿದರು ಅಷ್ಟೇ, ನೀನೇನೂ ಹೆದರಬೇಡ. ನನಗೇನೂ ಆಗೋದಿಲ್ಲ" ಎಂದು ಸಮಾಧಾನ ಪಡಿಸಿದರು ಪ್ರಸಾದರಾವ್.

ಹೊರಡಲು ಸಿದ್ಧನಾಗಿ ವಾಚ್ ನೋಡಿ "ಟೈಂ ಆಯ್ತು, ಅಪ್ಪಾ ! ಹೊರಡ್ತೀನಿ" ಎಂದ ವಾಸು.

"ಬೀರುವಿನಲ್ಲಿ ಒಂದು ಪ್ಯಾಕೆಟ್ ಇದೆ. ಅದನ್ನೂ ಪೆಟ್ಟಿಗೇಲಿಟ್ಕೋ" ಎಂದು ಹೇಳುತ್ತಾ ಬಾತ್‌ರೂಮ್ ಕಡೆ ನಡೆದರು ಪ್ರಸಾದರಾವ್.

ಪ್ಯಾಕೆಟ್ ಬಿಚ್ಚಿ ನೋಡಿದ ವಾಸುವಿಗೆ ಕಂಡದ್ದು ಚಿಕ್ಕ ಪೆಟ್ಟಿಗೆ. ಆ ಪೆಟ್ಟಿಗೆಯಲ್ಲಿ ನೀಲಿಯ ಹರಳಿನ ಚಿನ್ನದ ಉಂಗುರ. ಅವನ ಮನಸ್ಸು ಅರ್ಥವಾಯಿತು. ಸರಸರನೆ ಬೆರಳಿಗೆ ಹಾಕಿಕೊಂಡು "ಚೆನ್ನಾಗಿದೆ, ಅಪ್ಪಾ, ನೋಡಿ" ಎಂದ ಟವಲಿನಲ್ಲಿ ಮುಖ ಒರಸುತ್ತಾ ಬಂದ ಪ್ರಸಾದರಾವ್‌ಗೆ ಕೈ ತೋರಿಸುತ್ತಾ.

ವಾಸುವಿನ ಕೈಯನ್ನು ಹಿಡಿದು ನೋಡಿ, 'ಉಂಗುರ ಏಕೆ ?' ಎಂಬ ಪ್ರಶ್ನೆ ಬಾರದೆ ಇದ್ದುದಕ್ಕೆ ಸಂತೋಷವಾಗಿ, "ಇದೆ, ಚೆನ್ನಾಗಿದೆ. ಲೂಜ್ ಇಲ್ಲ ತಾನೇ ? ಮೊದಲು ಕೆಂಪುಕಲ್ಲಿನ ಉಂಗುರ ನೋಡ್ದೆ. ಆದರೆ ಆಮೇಲೆ ಇದೇ ಚೆನ್ನಾಗಿದೆ ಅನ್ನಿಸಿತು" ಎಂದರು ಪ್ರಸಾದರಾವ್.

ಹೊರಡಲು ಸಿದ್ಧವಾಗಿದ್ದ ರೈಲಿನಲ್ಲಿ ಹತ್ತಿ ತನ್ನನ್ನೇ ನೋಡುತ್ತಿದ್ದ

ವಾಸುವಿಗೆ ಜಾಗ್ರತೆ ಸೇರಿದೊಡನೆ ಕಾಗದ ಬರಿ. ಹಣ ಇನ್ನೂ ಬೇಕಾದ್ರೆ ಬರಿ. ಒಂದು ದಿನದ ಪ್ರಯಾಣ ತಾನೆ, ರಜೆ ಸಿಕ್ಕಿದರೆ ಬಂದು ಹೋಗು" ಎಂದು ಹೇಳುತ್ತಿದ್ದ ಪ್ರಸಾದರಾವ್ ಮಾತುಗಳನ್ನು ಕೇಳುತ್ತಿದ್ದ ವಾಸುವಿನ ತುಟಿಗಳು ಮಂದಹಾಸ ಬೀರಿದವು.

"ನೀವು ಹೊರಡಿ ಅಶ್ರದ್ಧೆ ಮಾಡದೆ ಆರೋಗ್ಯ ಚೆನ್ನಾಗಿ ನೋಡಿಕೊಳ್ಳಿ" ವೇಗವನ್ನು ಅಂದಿಕೊಂಡ ರೈಲುಪೆಟ್ಟಿಗೆಯೊಳಗಿನಿಂದ ಕರ್ಚೀಫ್ ಅಲ್ಲಾಡಿಸಿದ ವಾಸು, ಆ ಕಡೆಯೇ ನೋಡುತ್ತಾ ನಿಶ್ಚೇತನರಾಗಿ ನಿಂತಿದ್ದರು ಪ್ರಸಾದರಾವ್.

೦ ೦ ೦ ೦

"ಮಧು, ವಾಸು ಕಾಗದ ಬಂತಾ ?' ಕೇಳಿದರು ಜಾನಕಮ್ಮ.

"ಗೋಪಿ ಬರೆದಿದ್ದಾನಮ್ಮ, ವಾಸು ಬಿ.ಎ. ಕ್ಲಾಸಿಗೆ ಸೇರ್ತಾನೆ ಅಂತ. ನೋಡಮ್ಮ, ನಾವು ಅಲ್ಲಿದ್ದಾಗ ಅಷ್ಟು ಮಾತಾಡ್ತಿದ್ದವನು ಒಂದು ಕಾಗದ ಬರೆದ್ನಾ ? ವಾಸೂಗೆ ಏನೋ ಒಂದು ಧೈರ್ಯ ಬಂದುಬಿಟ್ಟಿದೆ ಅಮ್ಮ, ಗೋಪಿ ಮನೆಗೆ ಹೋದ್ಮೇಲೆ." ದೂರು ಹೇಳಿದಳು ಮಧುಮತಿ.

"ಹೋಗ್ಲಿ ಬಿಡೇ ಹುಚ್ಚಮ್ಮ, ಹಣ ಗೋಪಿ ಕೊಡ್ತಿದ್ದಾನಲ್ವಾ ?" ಸ್ವಲ್ಪ ಸಂಕೋಚದಿಂದ ಮಗಳ ಕಡೆ ನೋಡಿ ಕೇಳಿದರು ಜಾನಕಮ್ಮ.

"ಇರಬೇಕು, ಸ್ಕಾಲರ್‌ಷಿಪ್ ಬರ್ತಿದೆ ಅಂದ್ರೂ, ದುಡ್ಡಿನ ವಿಷಯ ಎತ್ತ್ರೋ ವೇಳೆಗೆ ಏನು ಹಾರಿಸಿಬಿಡ್ತಾರೆ ಮಾವ, ಅಳಿಯ ಇಬ್ರೂ. ರಾಜೂಗೆ ಬಹಳ ಅಸಮಾಧಾನ ಯಾಕೋ....ತಾನು ಓದಿಸೋದಿಲ್ಲ ಅಂತ ಹೇಳ್ದ. ಅವನಿಗೆ ದಯೆ ಬಂದು ಓದಿಸ್ತಿದಾನೆ, ಗೋಪಿ ಸುಮ್ಮಸುಮ್ಮನೆ ನಿನ್ನ ಮಗನ ಓದಿಸ್ತಾ ಇಲ್ಲ, ಏನೋ ಪ್ಲಾನ್ ಹಾಕಿದ್ದಾನೆ ಅಂತಿದ್ದಾನೆ. ನನಗೂ ಮೈ ಉರೀತು. ಅವನು ಹಾಕಿರೋ ಪ್ಲಾನ್ ನನಗೂ ಇಷ್ಟವೇ ಎಂದೆ. ನನ್ನ ಮೇಲೆ ಕೋಪ ಬಂದಿರೋ ಹಾಗಿದೆ. ನಾಲ್ಕು ದಿವಸಗಳಿಂದ ಮುಖ ಮರೆಸಿ ಕೊಂಡು ಓಡಾಡ್ತಿದ್ದಾನೆ."

"ಹೋಗ್ಲಿ ಬಿಡು ಮಧೂ ! ಅವನ ಸ್ವಭಾವವೇ ಅಷ್ಟು. ಏನೋ ನಿನ್ನ ಮಗನಿಗೆ ನಾಲ್ಕು ಅಕ್ಷರ ಬರೋದು ತಾನೇ ನಿನಗೆ ಮುಖ್ಯ. ಯಾರು ಏನೆಂದರೂ ಮನಸ್ಸಿಗೆ ಹಚ್ಕೊಳ್ಳಬೇಡ. ಇನ್ನೊಂದು ಮೂರು ವರ್ಷ ಹೇಗೋ

ಕಷ್ಟಪಟ್ರೆ ಅವನಿಗೆ ಡಿಗ್ರಿ ಬರುತ್ತೆ. ಆಗ ಯಾವುದಾದ್ರೂ ಕೆಲಸ ಸಿಗುತ್ತೆ...... ನಿನ್ನ ಮನೆ, ನಿನ್ನ ಬಾಗಿಲು ಹಾಯಾಗಿರ್ತೀಯಂತೆ."

ತನ್ನ ಮನೆ ತನ್ನ ಸಂಸಾರ ಮಗನ ಕಾಲಕ್ಕಾ...? ಎಷ್ಟು ಸಲ ಎಷ್ಟು ರೀತೀಲಿ ಬೇರೆ ಸಂಸಾರ ಮಾಡೋಣಾಂತ ಹೇಳಿದರು ನನ್ನ ಗಂಡ. ತನ್ನ ತಂದೇತಾಯೀನ ಎಷ್ಟು ಸಲ ಕೇಳಿಕೊಂಡ್ರು? ಅವರಿಗೆ ತಾನೂ ಹೆಂಡತಿ, ಬೇರೆ ಸಂಸಾರ ಮಾಡಬೇಕು ಅನ್ನಿಸುತ್ತಿತ್ತೇನೋ !..... ಛೀ, ಅವರ ಕೋರಿಕೆಗಳನ್ನ ತನಗೋಸ್ಕರ ಸುಟ್ಟರು. ಶೂನ್ಯವನ್ನು ದಿಟ್ಟಿಸುತ್ತಾ ದೀರ್ಘವಾಗಿ ನಿಟ್ಟುಸಿರು ಬಿಟ್ಟಳು ಮಧುಮತಿ. ಅವಳ ಮನಸ್ಸು ಭಾರವಾಯಿತು. ನಿಧಾನವಾಗಿ ತನ್ನ ಕೊಠಡಿಗೆ ಹೋಗಿ ಬಾಗಿಲು ಚಿಲುಕ ಹಾಕಿಕೊಂಡಳು.

o o o o

"ವಾಸೂ, ನನಗೆ ಈ ಪಾಠ ಒಂದ್ಸಲ ಹೇಳ್ಕೊಡ್ತೀಯಾ?" ವಾಸು ಕಿವಿಗೆ ಹಾಕಿಕೊಳ್ಳಲಿಲ್ಲ.

"ಏಯ್, ನಿನ್ನನ್ನೇ! ಒಂದು ಸಲ ಹೇಳಿಕೊಡೋದಿಲ್ವಾ? ಆ ಟೀಚರ್ ಹೇಳಿದ್ದು ನನಗರ್ಥವಾಗಲಿಲ್ಲ, ವಾಸೂ." ಈ ಸಲ ತನ್ನ ಪುಸ್ತಕದಲ್ಲಿ ತಲೆಯಿಟ್ಟು ಓದುತ್ತಿದ್ದ ವಾಸುವಿನ ಏಕಾಗ್ರತೆಗೆ ಭಂಗವಾಯಿತೇನೋ! ಸ್ವಲ್ಪ ತಲೆಯೆತ್ತಿ ಬೇಸರದಿಂದ ಪದ್ಮಜಳ ಕಡೆ ನೋಡಿದ.

"ಒಂದು ಸಲ..... ಹತ್ತೇ ನಿಮಿಷ..... ಹೇಳಿಕೊಡೋದಿಲ್ವಾ?" ಅವನ ನೋಟದೊಂದಿಗೆ ನೋಟ ಬೆರೆಸಿ ಕೇಳಿದಳು ಪದ್ಮಜ.

"ಸಾಧ್ಯವಿಲ್ಲ ಪದ್ಮಜ..... ನನಗೆ ಇಂಪಾರ್ಟೆಂಟ್ ಲೆಸನ್ ಇದೆ. ಪ್ಲೀಸ್, ನನ್ನನ್ನ ಡಿಸ್ಟರ್ಬ್ ಮಾಡ್ಬೇಡ, ಹೋಗು." ಬೇಸರದಿಂದ ನುಡಿದ ವಾಸು.

"ಹಾಗಾದ್ರೆ ಅಮ್ಮನ್ನ ಕೇಳ್ತೀನಿ..... ಇಲ್ದಿದ್ರೆ ನಾಳೆ ಫಸ್ಟ್ ಪಿರಿಯಡ್ ನಿಂತ್ಕೋತೀನಿ" ಮೆಲ್ಲನೆ ನುಡಿದ ಪದ್ಮಜಳ ಧ್ವನಿಯಲ್ಲಿ ಸೋಲನ್ನು ಸಹಿಸುವ ನೋವು ಕಂಡಿತು.

ಹೊಸಿಲು ದಾಟುತ್ತಿದ್ದ ಪದ್ಮಜ ..'ಪದ್ಮಜಾ!' ಎಂಬ ಕರೆಯಿಂದ ಹಿಂದಿರುಗಿ ನೋಡಿದಳು.

"ಬಾ, ಏನು ಹೇಳಿಕೊಡ್ಬೇಕು?" ಮಂದಹಾಸ ಬೀರುತ್ತಾ ಕೇಳಿದ ವಾಸು.

"ಹೋಗ್ಲಿ ಬಿಡು, ನೀನು ಓದ್ಕೋ" ಹೊರಡುತ್ತಿದ್ದ ಪದ್ಮಜಳ ಕೈಯನ್ನು ಥಟ್ಟನೆ ಹಿಡಿದುಕೊಂಡ ವಾಸು.

"ಐ ಆವನ್ ಸಾರಿ, ಪದ್ಮಜಾ! ಇಷ್ಟು ಹೊತ್ತು ದುಡಿದೂ ಸುಸ್ತಾಗಿರೋ ನಿಮ್ಮ ಅಮ್ಮ ಏನು ಪಾಠ ಹೇಳಿಕೊಡ್ತಾರೆ ಈಗ! ಬಾ, ನಾನೇ ಹೇಳಿಕೊಡ್ತೀನಿ" ಎಂದ ವಾಸು.

ಅವನ ಕೈಯಲ್ಲಿ ತನ್ನ ಕೈ. ಆ ಹುಡುಗಿಯ ಹೃದಯ ಸಂತೋಷ, ನಾಚಿಕೆಯಲ್ಲಿ ತೇಲಾಡಿತು. ಮೃದುವಾಗಿ ಕೈ ಬಿಡಿಸಿಕೊಂಡು, ಅವನ ಎದುರಿಗಿದ್ದ ಕುರ್ಚಿಯಲ್ಲಿ ಕೂತು ಪುಸ್ತಕ ತೆರೆದಳು.

ಪ್ರಕೃತಿ ನಿದ್ರೆಗೆ ಜಾರಿದಳು. ದೂರದಲ್ಲಿನ ಚರ್ಚ್‌ನ ಗಂಟೆ ಹನ್ನೊಂದು ಬಾರಿ ಹೊಡೆಯಿತು.

"ವಾಸೂ !.....ಪಾಠ ಎಷ್ಟು ಚೆನ್ನಾಗಿ ಹೇಳಿಕೊಡ್ತೀ..........ಯಾವುದಾದ್ರೂ ಕಷ್ಟವಾದದ್ದು ಕೇಳಿದ್ರೆ ಹೇಳ್ಕೊಡ್ತೀ ತಾನೆ?" ಆ ಹುಡುಗಿಯ ಕಣ್ಣುಗಳು ಹೊಳೆದವು ತೃಪ್ತಿಯಿಂದ.

"ಅದಕ್ಕೇನು? ಪ್ರತಿ ನಿತ್ಯ ಬಾ" ಎಂದುಬಿಟ್ಟ ವಾಸು.

"ನೀನೇ ಟೀಚರ್ ಕೆಲಸ ಮಾಡಿದ್ರೆ?"

"ಈಗ ಮಾಡಿದ್ದು ಅದೇ ಕೆಲಸ ತಾನೆ! ಇನ್ನೇನಾದ್ರೂ ಸಂದೇಹ ಇದೆಯಾ?" ಆ ಹುಡುಗಿಯ ಮಾತುಗಳಿಗೆ ಅಡ್ಡ ಬರುತ್ತಾ ನಕ್ಕ ವಾಸು.

"ಥ್ಯಾಂಕ್ಸ್ .......ಗುಡ್ ನೈಟ್..........ಹೋಗ್ತೀನಿ" ಎದ್ದು ನಿಂತಳು ಪದ್ಮಜ.

"ಗುಡ್ ನೈಟ್! ಹನ್ನೊಂದು ಗಂಟೆ ಆಯ್ತು. ಲೈಟಾರಿಸಿ ಬೆಡ್ ಲೈಟ್ ಹಾಕಿ ಹೋಗು" ಎನ್ನುತ್ತಾ ಸೋಮಾರಿತನದಿಂದ ಮೈ ಮುರಿದು ಹಾಸಿಗೆಯ ಮೇಲೆ ಪವಡಿಸಿದ ವಾಸು.

ಪದ್ಮಜ ಟೆನ್ತ್ ಸ್ಟಾಂಡರ್ಡ್, ವಾಸು ಬಿ. ಎ. ಫಸ್ಟಿಯರ್. ಪ್ರತಿ ನಿತ್ಯ ಒಂದು ಗಂಟೆಯೋ, ಅರ್ಧ ಗಂಟೆಯೋ ವಾಸುವಿನ ಬಳಿ ಟ್ಯೂಷನ್. ಅವನು ಗೌರವೀಯನಾದ ಗುರು. ಅವಳು ವಿನಯವತಿಯಾದ ಶಿಷ್ಯೆ. ಆ ಮನೆಯಲ್ಲಿ ಅವನು ಅತ್ತೆಯ ಮಗ ಮಾತ್ರವಲ್ಲ, ಅವಳ ಮನಸ್ಸಿಗೆ ಹಿಡಿಸಿದ್ದ ಮಿತ್ರ. ವಾಸುವಿನ ದೃಷ್ಟಿಯಲ್ಲಿ ಅವಳು ಬುದ್ಧಿವಂತಳಾದ ಒಳ್ಳೆಯ ಹುಡುಗಿ.

ಅವರಿಬ್ಬರ ಮಧ್ಯೆ ಯಾವುದೋ ಅವ್ಯಕ್ತವಾದ ಅನುಬಂಧ ದಿನೇ ದಿನೇ ದೃಢವಾಗುತ್ತಿತ್ತು.

ಪ್ರಸಾದರಾವ್‌ಗೂ ಮಧುಮತಿಗೂ ವಾರಕ್ಕೊಮ್ಮೆ ಕಾಗದಗಳನ್ನು ಬರೆಯುತ್ತಿದ್ದ ವಾಸು. ದಸರಾ ರಜೆ ಬರುತ್ತದೆ ಎಂದಾಗ ಇಬ್ಬರೂ ವಾಸು ವನ್ನು ನೋಡಬೇಕೆಂಬ ಅಭಿಲಾಷೆಯಿಂದ "ಬಂದು ಹೋಗು" ಎಂದು ಕಾಗದ ಬರೆದಿದ್ದರು. ಇಬ್ಬರಿಗೂ ಜವಾಬು ಬರೆದ.

"ಎಲ್ಲಿಗೆ ಪ್ರಯಾಣ? ಇಲ್ಲೇ ಓದ್ಕೊಬಾರ್ದಾ? ರಜ ಬಂದೊಡನೆ ಓಡಿಹೋಗದೆ ಇದ್ದೆ ಏನು?" ಹಾಸ್ಯ ಮಾಡುತ್ತಾ ಕೇಳಿದಳು ಪದ್ಮಜ.

"ನಿನಗ್ಯಾಕೆ ಆ ವಿಷಯ?" ಸೀರಿಯಸ್ಸಾಗಿ ಹೇಳಿದ ವಾಸು.

"ನೀನು ಅತ್ತೆ ಹತ್ತಿರ ಈಗ ಹೋಗ್ತಾ ಇಲ್ವಂತೆ" ಬುದ್ಧಿ ಮೂತಿ ಮಾಡಿದಳು ಪದ್ಮಜ.

"ಮತ್ತೆ ಇನ್ನೆಲ್ಲಿಗೆ ಹೋಗ್ತೀನಿ ಅಂದ್ಕೊಂಡಿದ್ದಿ?" ನಗಲು ಪ್ರಯತ್ನಿಸಿದ.

"ಅದೇ ಕೇಳ್ತಾ ಇದ್ದೀನಿ."

"ನನ್ನ ಫ್ರೆಂಡ್ ಮನೆಗೆ."

"ಯಾರಪ್ಪ ಅದು ಅಷ್ಟು ಕ್ಲೋಸ್ ಫ್ರೆಂಡು! ನಿನ್ನನ್ನ ನೋಡೋದಕ್ಕೆ ಯಾವತ್ತೂ ಬಂದಹಾಗಿಲ್ವಲ್ಲಾ?" ರೇಗಿಸಿದಳು.

"ನಿನಗೆ ಅಗತ್ಯವಿಲ್ಲ ಅಂತ ಆಗ್ಲೇ ಹೇಳ್ದೆ" ಬೇಸರದಿಂದ ನುಡಿದ ವಾಸು.

"ಹೋಗ್ಲಿ ಮತ್ತೆ, ಯಾವಾಗ ಬರ್ತಿ?"

"ಅಬ್ಬಬ್ಬ! ಏನು ಪದ್ಮಜಾ, ಯಾರ ಮನಸ್ಸನ್ನೂ ಕಷ್ಟಪಡಿಸಕೂಡದು ಅಂದುಕೊಳ್ಳೋ ನನ್ನನ್ನೇ ರೇಗಿಸ್ತೀ! ನನಗಿಷ್ಟ ಬಂದಾಗ ಬರ್ತೀನಿ, ಸರಿಯಾ?" ಎನ್ನುತ್ತಾ ಬ್ಯಾಗು ಕೈಯ್ಯಲ್ಲಿ ಹಿಡಿದು ಹೊಸಿಲು ದಾಟಿದ ವಾಸು.

"ಅಯ್ಯಮ್ಮ! ಪೆಟ್ಟಿಗೆ, ಹೋಲ್ಡಾಲ್ ಎಲ್ಲ ತಗೊಂಡು ಬ್ಯಾರಿಸ್ಟರ್ ಪಾರ್ವತೀಶಂ ಹಾಗೆ ಹೊರಡ್ತೀಯೇನೋ ಅಂತಿದ್ದೆ. ಒಂದು ಬ್ಯಾಗ್ ಮಾತ್ರ ತಗೊಂಡಿದ್ದೀ! ಪರ್ವಾಗಿಲ್ಲ, ನಾಲ್ಕೈದು ದಿನವೇ ಹುಡುಗನ ಕ್ಯಾಂಪು."

ಥಟಕ್ಕನೆ ಹಿಂದಿರುಗಿ ಫಕ್ಕನೆ ನಕ್ಕ ವಾಸು. ತಾನೂ ಪಕಪಕನೆ ನಗುತ್ತಾ ಅವನ ಹಿಂದೆಯೇ ಹೋದಳು ಪದ್ಮಜ.

ಬೀದಿಯ ಗೇಟಿನವರೆಗೂ ಅವನ ಹಿಂದೆಯೇ ಹೋಗಿ ನಿಂತು, ಸರಸರನೆ ಹೋಗುತ್ತಿದ್ದ. ಕಣ್ಮರೆಯಾಗುವವರೆಗೂ ಅವನನ್ನೇ ನೋಡುತ್ತಿದ್ದಳು. ಅವನು ಹಿಂದಿರುಗಿ ಒಮ್ಮೆ ತನ್ನ ಕಡೆ ನೋಡಿದರೆ ಚೆನ್ನಾಗಿರುತ್ತದೆ, ತಾನು ಮುಂದಹಾಸ ಬೀರಬಹುದು ಎಂದುಕೊಂಡಳು. ಅವನು ಪಕ್ಕದ ರಸ್ತೆಯಲ್ಲಿ ತಿರುಗಿದ. ಭಾರವಾದ ನಿಟ್ಟುಸಿರು ಬಿಟ್ಟು ಹಿಂದಿರುಗಿ ನಿಧಾನವಾಗಿ ಒಂದೊಂದೇ ಹೆಜ್ಜೆ ಹಾಕುತ್ತಾ ಮನೆಯೊಳಗೆ ಬಂದಳು ಪದ್ಮಜ.

"ಆ ಬಜ್ಜಿ ಪ್ಲೇಟಿನಲ್ಲಿ ಹಾಗೇ ಇದೆ, ವಾಸುವಿಗೆ ಕೊಡು ಅಂತ ಹೇಳಿದೆ ನಲ್ಲಾ ಪದ್ಮಜ. ಪಾಪ ತಿನ್ನದೆಯೇ ಹೊರಟುಹೋದ. ಅಷ್ಟು ಮರೆವೆ ಯಾದರೆ ಹೇಗೆ?" ವಾಸು ತಿಂಡಿ ತಿನ್ನದೇ ಹೋದುದಕ್ಕಾಗಿ ಸಂಕಟಪಡುತ್ತಾ ಗದರಿಸಿದರು ಲಕ್ಷ್ಮಿ, ತೋರುಬೆರಳನ್ನು ಅಲ್ಲಲ್ಲಿ ಕಚ್ಚುತ್ತಾ, "ಮರ್ತುಹೋದೆ ಅಮ್ಮಾ!" ಎಂದಳು ಪದ್ಮಜ.

ೲ ೲ ೲ ೲ

ಬಹಳ ತೆಗೆದುಹೋಗಿದ್ದ ಪ್ರಸಾದರಾವನ್ನು ನೋಡಿ ವಾಸು ಕಳವಳ ಗೊಂಡ.

"ಬರ್ತೀನಿ ಅಂತ ಕಾಗದದಲ್ಲಿ ಬರೆದಿರಲಿಲ್ಲವಲ್ಲಾ?" ನಗುತ್ತಾ ಕೇಳಿದರು.

"ನಿಮ್ಮನ್ನ ನೋಡಬೇಕು ಅನ್ನಿಸ್ತು, ಬಂದ್ಬಿಟ್ಟೆ-ಅಲ್ಲಾ ಪ್ರತಿ ಕಾಗದ ದಲ್ಲೂ ನನ್ನ ಆರೋಗ್ಯ ಚೆನ್ನಾಗಿದೆ ಅಂತ ಬರೀತಿದ್ದೀರಿ. ನನಗೆ ಹೇಳಬಾರ್ದು ಅಂತಾ? ಏನಪ್ಪಾ ಹೀಗಾಗಿದ್ದೀರಿ?" ಬ್ಯಾಗ್ ಗೋಡೆಗೆ ಒರಗಿಸಿ, ಎರಡೂ ಕೈಗಳನ್ನೂ ಸೊಂಟದ ಮೇಲಿಟ್ಟು ನೆಟ್ಟಗೆ ನಿಂತ ಪ್ರಸಾದರಾವ್ ಕಡೆ ಕರುಣೆ, ನೋವು ವಿ.ಳಿತವಾದ ಕಣ್ಣುಗಳಿಂದ ನೋಡುತ್ತಾ ಕೇಳಿದ ವಾಸು.

"ನೀನು ಭಯಪಡಬೇಕಾದಂತಹ ಖಾಯಿಲೆ ಏನೂ ಇಲ್ಲ" ನಗುತ್ತಾ ಹೇಳಿದರು ಪ್ರಸಾದರಾವ್.

"ಬೇರೆ ಯಾರಾದರೂ ಸ್ಪೆಷಲಿಸ್ಟ್‌ನ ಕನ್ಸಲ್ಟ್ ಮಾಡಿದರೆ?" ಆತುರ ದಿಂದ ತಂದೆಯ ಕಡೆ ನೋಡುತ್ತಾ ಕೇಳಿದ ವಾಸು.

"ಹಾಗೇ ಆಗ್ಲಿ, ಯೋಚ್ನೆ ಮಾಡೋಣ. ಬಟ್ಟೆ ಬದಲಾಯಿಸು, ಕಾಫಿ ತರಿಸ್ತೀನಿ" ಎಂದರು ಪ್ರಸಾದರಾವ್.

ಒಳ್ಳೆಯ ಹೆಸರು ಗಳಿಸಿದ್ದ ಸ್ಪೆಷಲಿಸ್ಟ್ ಬಳಿಗೆ ಹೋಗಿ ಪರೀಕ್ಷೆ ಮಾಡಿಸಿಕೊಂಡರು ಪ್ರಸಾದರಾವ್. ನಾಲ್ಕು ದಿನಗಳ ನಂತರ ಹೊರಡುವಾಗ "ನಿಮ್ಮ ದೇಹ ಸ್ಥಿತಿ ಹೀಗೇ ಇದ್ರೆ ನಾನು ಕ್ಲಾಸ್ ತೆಗೆದುಕೊಳ್ಳೋದಕ್ಕೆ ಸಾಧ್ಯವಿಲ್ಲ. ನನ್ನ ಮನಸ್ಸಿಗೆ ಸಂತೋಷ, ಉತ್ಸಾಹ ಬೇಕು. ನಾನು ನಿರ್ಯೋಚನೆಯಿಂದ ಓದಬೇಕು ಅಂದ್ರೆ ನೀವು ನಿಮ್ಮ ದೇಹಸ್ಥಿತಿಯನ್ನು ಜಾಗ್ರತೆಯಿಂದ ನೋಡಿಕೋಬೇಕು."

"ನನ್ನ ಹಣ 50 ಸಾವಿರಕ್ಕೆ ಮೇಲ್ಪಟ್ಟಿದೆ. ಅದೆಲ್ಲವೂ ನನ್ನ ನಂತರ ನಿನಗೇ ಸೇರುವಂತೆ ವಿಲ್ ಬರೆದಿಟ್ಟಿದ್ದೇನೆ. ನಿನ್ನ ಓದಿಗೆ ಯಾಕೆ ತೊಂದರೆಯಾಗುತ್ತೆ ?"

ಆ ಮಾತು ಕೇಳಿದ ವಾಸುವಿಗೆ ಛಾಟಿಯಿಂದ ಹೊಡೆದಂತಾಯಿತು. ನಿಶ್ಚೇಷ್ಟನಾಗಿ "ಅಪ್ಪಾ" ಎಂದ. ತನಗರಿವಿಲ್ಲದೆಯೇ ಕಣ್ಣಲ್ಲಿ ನೀರು ತುಂಬಿತು.

"ಯಾಕಷ್ಟು ಹೆದರ್ತೀ ? ಔಷಧಿ ಸರಿಯಾಗಿ ತಗೊಳ್ಳೋದಿಲ್ಲ ಅಂತಲೇ ನಿನ್ನ ಅನುಮಾನ ? ನನ್ನ ವಿಷಯವಾಗಿ ಯೋಚಿಸಬೇಕಾದ ಅಗತ್ಯವಿಲ್ಲ." ಹಾಗೆ ಹೇಳುತ್ತಿದ್ದ ಪ್ರಸಾದರಾವ್ ವದನದಲ್ಲಿ ನಿರಾಸೆ ಎದ್ದು ಕಾಣಿಸಿತು.

ಕಣ್ಣುಗಳಲ್ಲಿ ಬಂದ ನೀರು ಕೆನ್ನೆಯ ಮೇಲೆ ಹರಿದೊಡನೆ ಸರಸರನೆ ಕರವಸ್ತ್ರದಿಂದ ಒರೆಸುತ್ತಾ, "ಏನೂ ಪರವಾಗಿಲ್ಲ. ವಾಸಿಯಾಗುತ್ತೆ ಅಂತ ಹೇಳಿದಾರೆ ಡಾಕ್ಟರ್. ನೆನ್ನೆ ಮೊನ್ನೆ ನಿಮಗೆ ಎದೆ ನೋವು ಬರಲಿಲ್ಲ. ಔಷಧಿ ತಪ್ಪದೇ ತೆಗೆದುಕೊಳ್ಳಿ. ನಿಮ್ಮ ಓನರ್ ಅಂಗಡಿಗೆ ಬರಬೇಡ ಅಂತ ಹೇಳಿದರಲ್ಲಾ. ಅವರು ಕೊಡೋ ಸಂಬಳಕ್ಕೆ ರಾತ್ರಿ ಹಗಲೂ ಯಾಕೆ ಕೆಲಸ ಮಾಡಬೇಕು ?" ಎಂದು ಹೇಳುತ್ತಿದ್ದ ವಾಸುವಿನ ಮಾತನ್ನು ತಡೆಯುತ್ತಾ, "ಅವರ ಹತ್ರ ಸಂಬಳಕ್ಕೆ ಕೆಲಸ ಮಾಡ್ತಿಲ್ಲ ವಾಸೂ. ಈಗ ನಾನೂ ಅವರೊಂದಿಗೆ ಭಾಗಸ್ಥನಾಗಿದ್ದೀನಿ......ವಾರಕ್ಕೊಮ್ಮೆಯಾದರೂ ಅಂಗಡಿಗೆ ಹೋಗದೆ ಎಲ್ಲಾ ಅವರ ಮೇಲೇ ಹಾಕೋದು ಧರ್ಮವೇ ಹೇಳು !" ಎಂದರು ಪ್ರಸಾದರಾವ್.

ತನ್ನ ತಾಯಿ ಕಂಡಕ್ಟರ್ ಎಂದು ತಿಳಿದಿರುವ ವ್ಯಕ್ತಿ ಒಬ್ಬ ಚತುರನಾದ ವ್ಯಾಪಾರಿ. ಒಮ್ಮೆ ಪ್ರಸಾದರಾವ್ ಕಡೆ ಆಶ್ಚರ್ಯ ಬೀರುವ ಕಣ್ಣುಗಳಿಂದ

ವೀಕ್ಷಿಸುತ್ತಾ, "ನನಗೆ ಬೇಕಾದದ್ದು ನೀವು. ನಿಮ್ಮ ಪ್ರೀತಿ. ಆದರೆ ಕೇವಲ ಹಣದಾಸೆ ಇರೋ ಮನುಷ್ಯ ನಾನು ಎಂದು ಭಾವಿಸಿ ನನ್ನನ್ನ ಇನ್‌ಸಲ್ಟ್ ಮಾಡಬೇಡಿ ಅಪ್ಪಾ !" ಎನ್ನುತ್ತಾ ಮುಖ ತಿರುಗಿಸಿದ ವಾಸು.

"ಹೊರಟಿದ್ದೀ, ಟೈಂ ಆಗಿಹೋಗಿದೆ. ಹೊರಡು ಮತ್ತೆ, ಆರೋಗ್ಯ ಚೆನ್ನಾಗಿ ನೋಡ್ಕೋತೀನಿ. ನಿನಗೋಸ್ಕರವಾಗಿ ಬದುಕಬೇಕು ಅಂತ ನನಗೆ ಮಾತ್ರ ಆಸೆ ಇಲ್ವಾ ? ಗೋಪಾಲನ್ನ ಕೇಳ್ದೆ ಅಂತ ಹೇಳು" ಎಂದರು ಪ್ರಸಾದ ರಾವ್ ಆ ಮಾತನ್ನು ಮರೆಸಿ ಹೊರಡುವಂತೆ ಅವಸರಪಡಿಸುತ್ತಾ.

ಬೀದಿಯ ಗೇಟನ್ನು ದಾಟಿ ನಿಂತು, "ಇದ್ದುದ್ದನ್ನು ಇದ್ದಂತೆ ಬರೆಯಿರಿ. ನಾನೇನು ಹೆಣ್ಣು ಹುಡುಗಿಯಲ್ಲ; ಪುನಃ ಇನ್ನೊಂದು ಸಲ ಬೇಗ ಬರ್ತೀನಿ" ಎಂದು ಹೇಳುತ್ತಾ ಮಂದಹಾಸ ಬೀರಿ ಹೊರಟುಹೋದ.

ಹೊರಡುತ್ತಿದ್ದ ಮಗನ ಕಡೆ ನೋಡಿದ ಪ್ರಸಾದರಾವ್ ಹೃದಯ ಆರ್ದ್ರವಾಯಿತು. 'ವಯಸ್ಸಿಗೆ ಮೀರಿ ಬೆಳೆದುಬಿಟ್ಟಿದ್ದ ಮಗ, ಹುಡುಗಾಟದ ವಯಸ್ಸಿನಲ್ಲಿ ಗಾಂಭೀರ್ಯ, ಚೇಷ್ಟೆ ಮಾಡುವ ವಯಸ್ಸಿನಲ್ಲಿ ಆಲೋಚನೆ, ಮುಂದಕ್ಕೆ ಹಾಕುವ ಪ್ರತಿ ಹೆಜ್ಜೆಯಲ್ಲಿಯೂ ಭಯ, ಸಂಕೋಚ ಎಷ್ಟು ನಲುಗಿ ಹೋಗಿದ್ದಾನೆ ! ವಾಸು ಬೇರೆಲ್ಲಾದರೂ, ಬೇರಾರ ತಾಯಿ ತಂದೆಯರ ಹೊಟ್ಟೆ ಯಲ್ಲಾದರೂ ಹುಟ್ಟಿದ್ದಿದ್ದರೆ ಅವನ ಜೀವನ ಹೀಗಿರುತ್ತಿರಲಿಲ್ಲವೇನೋ. ನಮ್ಮ ಹೊಟ್ಟೆಯಲ್ಲಿ ಹುಟ್ಟದೇ ಇದ್ದಿದ್ದರೆ ಚೆನ್ನಾಗಿರುತ್ತಿತ್ತು. ಛೆ ! ಎಲ್ಲಾ ಬೇಕೆಂದೂ, ತಾನು ಒದಗಿಸಲಾರದ್ದು ಬೇಕೆಂದು ತನ್ನ ಮಗ ತನ್ನನ್ನು ಕಾಡಿದರೆ ಚೆನ್ನಾಗಿರುತ್ತೆ ಎಂದುಕೊಂಡ ಪ್ರಸಾದರಾವ್ ಕೋರಿಕೆ ಬಿಸಿಲು ಕುದುರೆಯಾಯಿತು. ಆ ಕೋರಿಕೆಯನ್ನು ತನ್ನ ಮೊಮ್ಮಕ್ಕಳು ತೀರಿಸಬೇಕು.' ಈ ಊಹೆ ಮನಸ್ಸಿಗೆ ಬಂದೊಡನೆ ಪ್ರಸಾದರಾವ್ ತುಟಿಗಳು ಅರಳಿದವು. ಕೆಲವು ವರ್ಷಗಳು ಮುಂದೆ ಓಡಿದವು. ಸುಂದರವಾದ ಬಂಗಲೆ, ಪೋರ್ಟಿಕೋ ದಲ್ಲಿ ಕಾರು, ಠೀವಿಯಿಂದ ಕಾರಿನಲ್ಲಿ ಸ್ಟಿಯರಿಂಗ್ ಹಿಡಿದು ಕುಳಿತ ಸುಂದರಾಂಗ ವಾಸು, ಸೌಂದರ್ಯವತಿಯಾದ ಅವನ ಹೆಂಡತಿ, ಬೊಚ್ಚು ಬಾಯಿ ಬಿಟ್ಟು ನಗುತ್ತಿರುವ ಮೊಮ್ಮಗ, ಎಲ್ಲವೂ ಪ್ರಸಾದರಾವ್ ಊಹಾ ಪಥದಲ್ಲಿ ಸುಳಿದು ಮನಸ್ಸು ಪುಲಕಗೊಂಡಿತು

ಕೊಠಡಿಯಲ್ಲಿ ಕಾಲಿಟ್ಟು ಪ್ರಸಾದರಾವ್ ನಿರಾಸೆಯ ನಗೆ ನಕ್ಕರು. ನಾಲ್ಕು ದಿನ ಗಡಿಬಿಡಿಯಿಂದಿದ್ದ ಮನೆ ಬಿಕೋ ಎನ್ನಿಸಿತು. ಪುನಃ ತಾನು,

ತನ್ನ ಪುಸ್ತಕಗಳು, ಈ ಕೊಠಡಿಯಲ್ಲಿ ತನ್ನ ಒಂಟಿ ಜೀವನ ನೆನಪಾದಾಗ.

೦ ೦ ೦ ೦

ಫಸ್ಟ್ ಇಯರ್ ಪರೀಕ್ಷೆ ಮುಗಿಯುವ ವೇಳೆಗೆ ನಾಲ್ಕು ಬಾರಿ ತಂದೆಯನ್ನು ನೋಡಿ ಬಂದ ವಾಸು. ದೇಹಸ್ಥಿತಿ ಸ್ವಲ್ಪ ಸುಧಾರಿಸುತ್ತಿರುವಂತೆ ತೋರಿತು. ಗೋಪಾಲರಾವ್ ಹೋಗಿ ತನ್ನ ಮನೆಗೆ ಬಂದು ಕೆಲವು ದಿನ ವಿಶ್ರಾಂತಿ ತೆಗೆದುಕೊಳ್ಳಿರೆಂದು ಆಹ್ವಾನಿಸಿದರು. ಒಳ್ಳೆಯ ಮಾತಿನಲ್ಲಿ ನಿರಾಕರಿಸಿದರು ಪ್ರಸಾದರಾವ್.

ಸರಸರನೆ ದಿನಗಳೂ, ತಿಂಗಳುಗಳೂ ಉರುಳುತ್ತಿದ್ದವು. ಪದ್ಮ, ಜಯ ಅವರ ಸೌಂದರ್ಯ ಹೆಚ್ಚುತ್ತಿತ್ತು. ಸುಂದರ ಯುವಕನಾದ ವಾಸುವಿಗೆ ಚಿಗುರುಮೀಸೆ ಬಂದು ಒಂದು ರೀತಿಯ ಶೋಭೆ ಕೊಟ್ಟಿತು. ಥರ್ಡ್ ಇಯರ್ ಫೈನಲ್ ಪರೀಕ್ಷೆ ಮುಗಿಯುವ ವೇಳೆಗೆ ಒಂದು ಸಲ ಒಂದು ದಿವಸ ಮಾತ್ರ ಮಧುಮತಿಯೊಡನೆ ಕಳೆದಿದ್ದ ವಾಸು, ನಾಲ್ಕು ಬಾರಿ ಅಂದರೆ ಒಂದು ತಿಂಗಳ ಕಾಲ ಪ್ರಸಾದರಾವ್ ಸಂಗಡ ಕಳೆದಿದ್ದ.

ಪರೀಕ್ಷೆಗಳು ನಡೆಯುತ್ತಿದ್ದವು. ವಿರಾಮವಿಲ್ಲದೆ ಓದುತ್ತಿದ್ದ ವಾಸು. ಪದ್ಮಜ ಇಂಟರ್‌ಮೀಡಿಯಟ್ ಕೋರ್ಸ್ ಮುಗಿಸುವುದರಲ್ಲಿದ್ದಳು. ಪದ್ಮಜ ಪ್ರತಿದಿನ ವಾಸುವಿನ ಕೊಠಡಿಯಲ್ಲಿ ಮೌನವಾಗಿ ಓದುತ್ತಿದ್ದಳು. ಮಧ್ಯೆ ಮಧ್ಯೆ ಅವಳು ತನಗೆ ತಿಳಿಯದೆ ಇದ್ದುದನ್ನು ಕೇಳುವುದೂ, ಅದಕ್ಕೆ ಉತ್ತರ ಹೇಳುವುದೂ ಅಭ್ಯಾಸವಾಗಿಹೋಗಿತ್ತು.

"ಪದ್ಮಜಾ, ಈವತ್ತು ನನಗೆ ಟ್ರ್ಯೂವರ್ಸ್ ಫೀಸ್ ಕೊಡಬೇಕು." ಕೋಮಲ ಸ್ವರ ಹೋಗಿ ಪುರುಷತ್ವವನ್ನು ಹೊಂದಿದ ವಾಸುವಿನ ಧ್ವನಿ.

ಬೆಚ್ಚಿ ತಲೆಯೆತ್ತಿ ನೋಡಿದಳು ಹದಿನಾರು ವರ್ಷ ತುಂಬಿದ ಪದ್ಮಜ,

"ಒಂದು ಕಪ್ಪು ಟೀ." ಅದೇ ಧ್ವನಿ.

"ಓ..... ಐದು ನಿಮಿಷ. ತರ್ತೀನಿ" ಲವಲವಿಕೆಯಿಂದ ಎದ್ದಳು ಪದ್ಮಜ.

ಟೀ ಕಪ್ಪು ತೆಗೆದುಕೊಳ್ಳುತ್ತಾ, "ಥ್ಯಾಂಕ್ಸ್" ಎಂದು ಹೇಳಿ ಮಂದಹಾಸ ಬೀರಿದ ವಾಸು, ಅವಳಿಗೆ ಕೃತಜ್ಞತೆ ತೋರಿಸುತ್ತಾ.

ಅವನನ್ನು ನೋಡುತ್ತಿದ್ದ ಅವಳ ಮನಸ್ಸು ಚಲಿಸಿತು. ಕ್ಷಣದಲ್ಲಿ ಎಚ್ಚೆತ್ತುಕೊಂಡು, "ಇಷ್ಟು ಮಾತ್ರಕ್ಕೆ ಥ್ಯಾಂಕ್ಸ್ ಹೇಳಬೇಕಾ ? ಇಷ್ಟರಲ್ಲೇ ನಿನ್ನ ಟ್ಯೂಷನ್ ಫೀಸ್ ಕೊಟ್ಟಹಾಗಾಗುತ್ತಾ, ಹೇಗೆ ಪಾಸ್ ಮಾಡ್ತೀನೋ ! ಭಯವಾಗಿದೆ" ಎಂದಳು ಪದ್ಮಜ.

"ಈಗ ಟೈಂ ಎಷ್ಟು ಗೊತ್ತಾ ? ಹನ್ನೆರಡು, ಇಷ್ಟು ಹೊತ್ನಲ್ಲಿ ಕಷ್ಟ ಪಟ್ಟು ಟೀ ಮಾಡಿಕೊಟ್ಟದ್ದಿ. ಥ್ಯಾಂಕ್ಸ್ ಹೇಳಬೇಡ್ವಾ ಮತ್ತೆ ?" ಎಂದ ವಾಸು ವಾಚ್ ನೋಡುತ್ತಾ.

"ಇನ್ನು ಮೇಲೆ ನಿನ್ನ ರೂಂನಲ್ಲಿ ಓದಬಾರ್ದಂತೆ. ಛೆ, ಏನೋ ಛಾನಸ್ತ. ನೋಡೋವ್ರು ಏನಾದ್ರೂ ಆಡ್ಕೋತಾರಂತೆ. ಗೊತ್ತಾಗ್ದೇ ಇರೋದು ಯಾವುದಾದ್ರೂ ನಿನ್ನ ಹತ್ರ ಹೇಳಿಸ್ಕೋಬಹುದು ಒಂದು ಗಂಟೆಯೋ, ಅರ್ಧ ಗಂಟೆಯೋ. ಮಿಕ್ಕ ಹೊತ್ತಿನಲ್ಲಿ ನನ್ನ ಕೊಠಡೀಲೇ ಓದ್ಕೋಬೇಕಂತೆ."

"ನಿನ್ನ ರೂಮಿನಲ್ಲಿ ಓದಬಾರ್ದು ಅಂತ ಹೇಳಿದ್ದಾರೆ ಅಮ್ಮ." ಈ ಮಾತು ವಾಸುವಿನ ಹೃದಯ ಚುಚ್ಚಿತ್ತು. ಅವನ ವದನ ವಿವರ್ಣವಾಯಿತು. "ಹೋಗ್ಲಿ, ಹಾಗೆ ಮಾಡು ಪದ್ಮಜ." ವ್ಯಥೆಯಿಂದ ಕೂಡಿದ ಧ್ವನಿಯಲ್ಲಿ ಹೇಳಿದ ವಾಸು. ಅವರು ಸಾಮಾನ್ಯವಾಗಿ ಹೇಳಿಹೋಗಿದ್ದ ಮಾತಿಗೆ ಅವನ ಮನಸ್ಸು ಕಲಕಿ ಅನೇಕ ವಿಧದಲ್ಲಿ ಯೋಚಿಸುವಂತಾಯಿತು. ದೂರದಲ್ಲಿ ಕೋಳಿ ಕೂಗಿದ್ದು ಕೇಳಿಸಿತು. ಛೆ ! ವಯಸ್ಸು ಬಂದ ಹುಡುಗಿ. ಅವರ ಜಾಗ್ರತೆ ಅವರಿಗೆ ಎಂದು ಮನಸ್ಸಮಾಧಾನಪಡಿಸಿಕೊಳ್ಳುತ್ತಾ ಕಣ್ಣುಗಳನ್ನೇ ಗಟ್ಟಿಯಾಗಿ ಮುಚ್ಚಿಕೊಂಡ ನಿದ್ರೆ ಮಾಡಲು ಪ್ರಯತ್ನಿಸುತ್ತಾ.

o o o o

"ನಮ್ಮ ಮನೆ ಪಕ್ಕದ ಮನೆ ತಹಶೀಲ್ದಾರನನ್ನು ಕೇಳಿದ್ದೀನಿ-ಸನ್ನ ಮೊಮ್ಮಗನಿಗೆ ಒಂದು ಗುಮಾಸ್ತೆ ಕೆಲಸ ಕೊಡ್ಸಿ ಅಂತ. ಹುಡುಗ ಬರ್ಲಿ, ನೋಡೋಣ, ತಪ್ಪದೆ ನಿಮಗೆ ಉಪಕಾರ ಮಾಡ್ತೀನಿ ಅಂತ ಹೇಳಿದ್ದಾರೆ." ಜಾನಕಮ್ಮ ಬೆರಳಲ್ಲಿ ಮಜ್ಜಿಗೆಯನ್ನು ಕಲಕಿ ಮಗಳ ತಟ್ಟೆಯಲ್ಲಿ ಹಾಕುತ್ತಾ ಹೇಳಿದರು.

ಮಜ್ಜಿಗೆಯಲ್ಲಿ ಅನ್ನ ಕಲಿಸುತ್ತಿದ್ದ ಮಧುಮತಿಯ ಹೃದಯ ಈಟಿಯಿಂದ ತಿವಿದಂತಾಯಿತು, ಹಿಂದಿನ ನೆನವುಗಳಿಂದ. ಕಾಲ ತಲಕೆಳಕಾಗಿತ್ತು.

ಈ ಮನೆಯಲ್ಲಿ ತಹಶೀಲ್ದಾರರು, ಪಕ್ಕದ ಮನೆಯಲ್ಲಿ ಅಭ್ಯರ್ಥಿ ವಾಸ ಮಾಡುತ್ತಿದ್ದರು ಹಿಂದೆ. ಅಂದಿನ ಅಜ್ಜಿಯ ಸ್ಥಾನದಲ್ಲೇ ಇಂದು ಅಂದಿನ ತಹಶೀಲ್ದಾರರ ಹೆಂಡತಿ ಜಾನಕಮ್ಮ. ಹಿಂದಿನದನ್ನು ಕ್ಷಣಕ್ಷಣವೂ ನೆನಪಿಗೆ ತರುವ ವಾತಾವರಣದಲ್ಲಿ ತನ್ನ ಜೀವನ ಮುಗಿಸಬೇಕಾಗಿದೆ. ತನ್ನದೆಂತಹ ನಿಕೃಷ್ಟವಾದ ಬದುಕು! ತನ್ನನ್ನು ಬಿಟ್ಟು ಹೋದ ತನ್ನ ಗಂಡ ಎಷ್ಟು ಅದೃಷ್ಟವಂತರು! ತನ್ನನ್ನೂ, ತನ್ನ ಜ್ಞಾಪಕ ಬರುವ ವಾತಾವರಣವನ್ನೂ ಬಿಟ್ಟು, ಹಿಂದಿನ ಜೀವನವನ್ನು ಸಂಪೂರ್ಣವಾಗಿ ಮರೆತು ಹೊಸ ಜೀವನಕ್ಕೆ ಹೊಂದಿಕೊಂಡು ಹಾಯಾಗಿ ಜೀವಿಸುತ್ತಿದ್ದಾರೆ. ಅಗ್ನಿಸಾಕ್ಷಿಯಾಗಿ, ಪಂಚ ಭೂತಗಳ ಸಾಕ್ಷಿಯಾಗಿ ಬಂಧುಮಿತ್ರರ ಸಮಕ್ಷಮದಲ್ಲಿ ಇಬ್ಬರ ಜೀವನವೂ ಸಮಾನವಾಗಿ ನಡೆಯಬೇಕು ಎಂದು ಮಾಡಿದ ಪ್ರಮಾಣವೆಲ್ಲವೂ ಸುಳ್ಳು.

ಪುರುಷನ ಜೀವನ, ಸ್ತ್ರೀಯ ಜೀವನ ಒಬ್ಬರಿಂದ ಒಬ್ಬರು ದೂರವಾದ ಮೇಲೆ ಆ ಜೀವನ ವಿಧಾನವೇ ಬೇರೆಯಾಗುತ್ತದೆ. ಗಂಡಸು ಮರ ಎಲೆಯನ್ನು ಕಳಚುವಂತೆ ಹೆಂಡತಿ ಮಗುವನ್ನು ತೊರೆದು ಪುನಃ ಹೆಂಡತಿ, ಮಕ್ಕಳನ್ನು ಸಂಪಾದಿಸಿಕೊಂಡ, ಪುನಃ ಮರ ಚಿಗುರುವಂತೆ. ತಾನು ಬೇರು ಕಿತ್ತುಹೋದ ಬಳ್ಳಿಯಂತೆ ಬಾಡಿ ಕೃಶಿಸಿಹೋದಳು ಛಿ! ಛಿ! ತಿಂಡಿ, ಬಟ್ಟೆಯಿಂದ ತೃಪ್ತಿ ಹೊಂದುವ ಜೀವನ ಒಂದು ಜೀವನವೇನಾ? ತಾನೇಕೆ ಬದುಕುತ್ತಿದ್ದಾಳೆ?

ಅವಳ ಕತ್ತಲೆಯ ಜೀವನದಲ್ಲಿ ಸಣ್ಣದಾದ ಕಾಂತಿ ಕಿರಣ ವಾಸು-ವಾಸು ಅವಳ ಮನಃಪಟಲದಲ್ಲಿ ಹಾದುಹೋದ ತನ್ನ ಗಂಡು ತನಗಾಗಿ ಬಿಟ್ಟು ಹೋದ ತಪಃಫಲ, ಬೇಗ ಬೇಗ ಏನೋ ನಿರ್ಣಯಕ್ಕೆ ಬಂದ ಮಧುಮತಿ ಕೈ ತೊಳೆದು ಏಳುತ್ತಾ, "ವಾಸುವಿನ ಉದ್ಯೋಗದ ವಿಷಯವಾಗಿ ಪುನಃ ತಹಶೀಲ್ದಾರನನ್ನು ಬಲವಂತಪಡಿಸಬೇಡಮ್ಮ! ಪುನಃ ಅದೇ ಆಫೀಸು, ಪುನಃ ವಾಸು ಅದರಲ್ಲಿ ಗುಮಾಸ್ತೆ, ಬೇಡಮ್ಮಾ! ಈ ವಾತಾವರಣ ತನಗೆ ಬೇಸರ ಎಲ್ಲಾದ್ರೂ ದೂರ ಹೊರಟುಹೋಗ್ಬೇಕು ಅನ್ನಿಸ್ತದೆ ಅಮ್ಮ ನನಗೆ" ಎಂದಳು.

ತನ್ನ ಗಂಡ ಖಾಲಿಮಾಡಿದ ಆ ಮನೆಯಲ್ಲಿ ಈ ಇಪ್ಪತ್ತೂರು ವರ್ಷಗಳಲ್ಲಿ ಅನೇಕರು ಬಾಡಿಗೆಗೆ ಬಂದು ಹೋಗಿದ್ದರು. ಎರಡು ಬಾರಿ ಮನೆ ರಿಪೇರ್ ಮಾಡಿದರು ಆ ಮನೆಯ ಒಡೆಯರು. ಆ ಮನೆ, ಅವರಿದ್ದ ಕೊಠಡಿ

ಮರೆಯಲು ಸಾಧ್ಯವೇ ಇಲ್ಲ ಅವಳಿಗೆ. ಮನಸ್ಸಿನಲ್ಲಿ ಇಂದು ಅದನ್ನು ಒಮ್ಮೆ ನೋಡಬೇಕೆಂಬ ಕೋರಿಕೆ ಹುಟ್ಟಿತು. ಪ್ರಸಾದರಾವ್ ಹೊರಟುಹೋದ ಮೇಲೆ ಈ ಇಪ್ಪತ್ತು ವರ್ಷದಲ್ಲಿ ಒಂದು ದಿನವೂ ಹೊಸಿಲು ದಾಟದಿದ್ದ ಮಧುಮತಿ ಇಂದು ಹಿತ್ತಲ ಕಡೆಯಿಂದ ತಹಶೀಲ್ದಾರ್ ಮನೆಗೆ ಹೋದಳು.

ಅಂದು ಪ್ರಸಾದರಾವ್ ವಾಸವಾಗಿದ್ದ ಕೊಠಡಿಯಲ್ಲಿ ಚಾಪೆ ಹಾಕಿದಳು. ಹದಿನೆಂಟರ ಹರೆಯದ ತಹಶೀಲ್ದಾರರ ಮಗಳು ನಿರ್ಮಲ.

ಅಮ್ಮ! ಅತ್ತೆ ಬಂದ್ರು....'ಜಯ ಅವರ ಅತ್ತೆ' ಎಂದು ತಾಯಿಯನ್ನು ಕರೆದಳು. "ಎಂದೂ ಹೊಸಿಲು ದಾಟದಿದ್ದವರು ನಮ್ಮ ಮನೆಗೆ ಬರೋದು ಅಂದ್ರೆ "ಏನೋ ವಿಶೇಷವೇ ! ಎನ್ನುತ್ತಾ ನಕ್ಕು, "ನಿಮ್ಮ ಮಗ ಇನ್ನೂ ಬರಲಿಲ್ವ?" ಎಂದು ಕೇಳಿ ವಾಸುವಿನ ವಿಷಯದಲ್ಲಿ ಇನ್ನೂ ಏನೇನೋ ಪ್ರಶ್ನೆಗಳನ್ನು ಕೇಳಿದರು ಆಸಕ್ತಿಯಿಂದ. ನಿರ್ಮಲಳ ತಾಯಿ ಅನ್ನಪೂರ್ಣಮ್ಮ ಹೆಣ್ಣು ಹೆತ್ತ ತಾಯಿಯಂತೆ. ಅನ್ಯಮನಸ್ಕಳಾದ ಮಧುಮತಿ ಏನೋ ಉತ್ತರ ಕೊಡುತ್ತಿದ್ದಳು. ತಾನೂ, ಪ್ರಸಾದರಾವ್ ಮದುವೆಯಾಗುವ ಮುನ್ನ ನಗುತ್ತಾ ಹರಟುತ್ತಿದ್ದುದು ಆ ಕೊಠಡಿಯಲ್ಲೇ, ಆ ಕೊಠಡಿಯಲ್ಲಿನ ಪ್ರತಿ ಅಂಗುಲವೂ ಅವಳಿಗೆ ಅತ್ಯಂತ ಆತ್ಮೀಯವಾಗಿ ತೋರಿತು. ಒಂದು ಸಲ ಕೊಠಡಿಯನ್ನು ಪರಿಶೀಲಿಸಿ ಎದ್ದು ನಿಂತು, "ಸುಮ್ನೆ ಒಂದು ಸಲ ನೋಡಿ ಹೋಗೋಣಾಂತ ಬಂದೆ. ಬಾ ಅಂತ ನಿರ್ಮಲ ಕರೀತಲೇ ಇದ್ಲು" ಎಂದಳು ಮಧುಮತಿ.

"ಮಗ ಬಂದ್ರೆ ಖಂಡಿತವಾಗಿ ಒಂದು ಸಲ ಕಳಿಸ್ತೀರಲ್ಲಾ ? ತುಂಬಾ ಚೆನ್ನಾಗಿದ್ದಾನಂತೆ," ಎಂದು ಹೇಳುತ್ತಾ ತಹಶೀಲ್‌ದಾರ್ ಹೆಂಡತಿ ಅನ್ನಪೂರ್ಣಮ್ಮ ಆಸೆಯಿಂದ-ಮಧುಮತಿಯ ಕಡೆ ನೋಡಿದರು. ಈ ಬಾರಿ ಮಧುಮತಿಗೆ ನಗು ಬಂತು, ಶಹಭಾಷ್ ! ಇಂದು ತನ್ನ ಸ್ಥಾನನಲ್ಲಿ ನಿರ್ಮಲ. ಬೇಡ, ದೊಡ್ಡವರ ಮನೆಯವರ ಹುಡುಗಿ ತನ್ನ ಮಗನ ಹೆಂಡತಿಯಾಗ ಕೂಡದು. ಅವಳ ಅಹಂಕಾರದಲ್ಲಿ ಸುಟ್ಟು ತರಗಾಗುತ್ತಾನೆ ಎಂದುಕೊಳ್ಳುತ್ತಾ, ಅವರು ಕೊಟ್ಟ ಎಲೆ ಅಡಿಕೆ, ಬಾಳೆಯಹಣ್ಣು ತೆಗೆದುಕೊಂಡು ಹಿತ್ತಲ ಬಾಗಿಲಿನಿಂದಲೇ ಮನೆಗೆ ಬಂದುಬಿಟ್ಟಳು. ಬಾಳೆಯಹಣ್ಣು ಜಾನಕಮ್ಮನಿಗೆ, ತಾಂಬೂಲ ಸುಂದರಮ್ಮನಿಗೆ ಕೊಟ್ಟು ಕಾಲು ತೊಳೆದುಕೊಂಡಳು ಮಧುಮತಿ.

"ಅಬ್ಬಾ ! ಎಷ್ಟು ದಿವಸಗಳಾಯ್ತು ನೀನು ಬಂದು", ಬಾಗಿಲಿಗೆ ಅಡ್ಡ ಲಾಗಿ ನಿಂತಿದ್ದ ಜಯಳ ಕಡೆ ಚಕಿತನಾಗಿ ನೋಡಿದ ವಾಸು. ಆಕಾಶ ಬಣ್ಣದ ಲಂಗ, ಕಪ್ಪು ಚೋಳಿ, ಚಿಕ್ಕ ಚಿಕ್ಕ ಹೂವುಗಳನ್ನು ಪ್ರಿಂಟ್ ಮಾಡಿದ್ದ ದಾವಣಿ, ಇವುಗಳ ಮಧ್ಯೆ ಅಂದವಾದ ಅಮೃತಶಿಲೆಯ ಬೊಂಬೆಯಂತೆ ಪ್ರಕಾಶಿಸುತ್ತಿದ್ದಳು ಜಯ. ಕ್ಷಣಕಾಲ ಅವನು ದಿಗ್ಭ್ರಾಂತನಾದ.

"ಬಹಳ ದಿವಸವೇನೋ ಆಯ್ತು ನಾನು ಈ ಊರಿಗೆ ಬಂದು, ಅಲ್ಲಾ ನನ್ನನ್ನ ಬಾ ಅಂತಿಯಾ ? ಹೋಗು ಅಂತಿಯಾ ? ಹೀಗೆ ದಾರಿಗೆ ಅಡ್ಡವಾಗಿ ನಿಂತಿದ್ದಿ !'' ನಗುತ್ತಾ ನುಡಿದ ವಾಸು.

"ಸಾರಿ.....ನೀನು ಏನೋ ಬದಲಾಯಿಸಿದಂತೆ ಕಾಣುತ್ತೆ" ಎಂದು ನಾಲಿಗೆ ಕಚ್ಚಿಕೊಂಡಳು ಜಯ.

"ಅಮ್ಮಾ" ಎಂದು ಕರೆಯುತ್ತಾ ಮನೆಯೊಳಗೆ ಬಂದ ವಾಸು.

"ಎಷ್ಟು ದಿವಸಗಳಾಯ್ತಪ್ಪ ನೋಡಿ, ಕಣ್ಣುಗಳು ಕಾಯಿ ಕಟ್ಟಿ ಹೋದವು. ನೋಡಿಲ್ಲವಲ್ಲ ಅಂತ ಬಹಳ ಬೇಸರವಾಗಿತ್ತಪ್ಪ" ಎಂದಳು, ಮಧುಮತಿ ಸೀರೆಯ ಸೆರಗಿಗೆ ಕೈ ಒರೆಸುತ್ತಾ.

"ಹೇಗಮ್ಮ ಬರೋದು. ರಜೆಯಲ್ಲಿ ಪ್ರಾಕ್ಟಿಕಲ್ಸ್ ಇತ್ತಾ ಇತ್ತು. ಅಜ್ಜಿ ಎಲ್ಲಿ" ಎಂದು ಕೇಳಿದ ವಾಸು.

"ಯಾರು ? ವಾಸೂನಾ ! ದೊಡ್ಡವನಾಗಿಬಿಟ್ಟಿದ್ದೀಯಲ್ಲಾ ! ಎಲ್ಲಿ ಹೀಗೆ ಬಾ, ವಾಸೂ !" ಕನ್ನಡಕವನ್ನು ಸರಿಪಡಿಸಿಕೊಳ್ಳುತ್ತಾ ಆತುರದಿಂದ ವಾಸುವಿನ ಕಡೆ ನೋಡಿದರು ಜಾನಕಮ್ಮ.

"ಪರೀಕ್ಷೆ ಚೆನ್ನಾಗಿ ಬರೆದಿದ್ದೀಯಾ ? ಕ್ಲಾಸ್ ಬರುತ್ತಾ ?'' ತನಗಿಂತ ಒಂದಡಿ ಎತ್ತರವಾಗಿದ್ದ ಮಗನ ತಲೆ ನೇವರಿಸಿದಳು ಮಧುಮತಿ.

ವಾಸುವನ್ನು ಹತ್ತಿರಕ್ಕೆ ಕರೆದುಕೊಳ್ಳುತ್ತಾ, "ನನ್ನ ಕಂದ, ಎಷ್ಟು ಚೆನ್ನಾಗಿದ್ದೀ !" ಎಂದು ಅವನ ಕೆನ್ನೆಗಳನ್ನು ನೇವರಿಸಿ ಮುತ್ತಿಟ್ಟರು ಜಾನಕಮ್ಮ.

ರಾಜಶೇಖರ್, ಸುಂದರಮ್ಮ, ಚಂದ್ರ ಒಬ್ಬೊಬ್ಬರೇ ಬಂದು ವಾಸುವಿನ ಕಡೆ ಆಶ್ಚರ್ಯದಿಂದ ನೋಡುತ್ತಾ ಮಾತನಾಡಿಸಿದರು.

ತಾಯಿಯನ್ನು ಪರಿಶೀಲಿಸಿದ ವಾಸು–"ಅಮ್ಮಾ ! ಯಾಕೆ ಹಾಗಿದ್ದೀ ? ಮೈ ಸರಿಯಾಗಿಲ್ಲಾ ?" ಎಂದು ಪ್ರಶ್ನಿಸಿದ.

ಬಣ್ಣ ಹೋದ ಸೀರೆಯ ಸೆರಗನ್ನು ಸಂಪಡಿಸಿಕೊಳ್ಳುತ್ತಾ, "ಚೆನ್ನಾಗೇ ಇದ್ದೀನಿ. ಬಾ, ಕಾಫಿ ತರ್ತೀನಿ. ಬಟ್ಟೆ ಬದಲಾಯಿಸು" ಎಂದಳು ಮಧುಮತಿ.

ಬಟ್ಟೆ ಬದಲಾಯಿಸಿ, ಕಾಫಿ ಕುಡಿದು ಮನೆಯನ್ನೆಲ್ಲಾ ನೋಡಿದ ವಾಸು ಏನನ್ನೋ ಗ್ರಹಿಸಿದ. ಸುಣ್ಣಕಾಣದ ಕಪ್ಪು ಗೋಡೆ, ನವಾರು ಹರಿದುಹೋಗಿದ್ದ ಮಂಚಗಳು, ಬೆಡ್‌ಷೀಟ್ ಇಲ್ಲದ ಹಾಸಿಗೆಗಳು, ಸ್ಟಾಂಡಿನ ಮೇಲಿದ್ದ ಹಳೆಯ ಸೀರೆ, ಸಣ್ಣಗೆ ಕಪ್ಪಾಗಿದ್ದ ಮಧುಮತಿ, ಅನ್ನದ ಪಾತ್ರೆಯ ಪಕ್ಕದಲ್ಲಿ ಸಾರಿನ ಪಾತ್ರೆ ಆ ಮನೆಯಲ್ಲಿ ತಾಂಡವವಾಡುತ್ತಿದ್ದ ದಾರಿದ್ರ್ಯವನ್ನು ಎತ್ತಿಸಾರುತ್ತಿದ್ದವು.

ಊಟಕ್ಕೆ ಕರೆದ ಮಧುಮತಿಯ ಕಡೆ ಕರುಣೆಯಿಂದ ನೋಡುತ್ತಾ, "ನನಗೆ ಬೇಕಿಲ್ಲಮ್ಮ" ಎಂದ ವಾಸು.

"ಯಾತಕ್ಕೋಸ್ಕರ ಬೇಕಿಲ್ಲ ಅಂತಿ? ಸುಳ್ಳು-ಯಾಕೆ ಹಾಗೆ ಆಗಿದ್ದೀ? ಏನಾಗಿದೆ? ತಲೆನೋವಾ?" ಕಳವಳಗೊಂಡಳು ಮಧುಮತಿ.

ಇಷ್ಟವಿಲ್ಲದೆಯೇ ಅಡಿಗೆ ಮನೆಗೆ ನಡೆದ ವಾಸು. ಏನೋ ಸೆರಗಿನಿಂದ ಮುಚ್ಚಿಟ್ಟುಕೊಂಡು ಪಕ್ಕದ ಮನೆಯಿಂದ ತಂದರು ಜಾನಕಮ್ಮ. ಅದನ್ನು ಗ್ರಹಿಸಿದ ವಾಸು. "ನನಗೆ ಬೇಕಿಲ್ಲ ಅಂದ್ರೆ ಬಲವಂತ ಯಾಕಮ್ಮ!" ಎಂದು ಇನ್ನೂ ಏನೋ ಆಡಲಿದ್ದ ನಾಲಗೆಯನ್ನು ಹಿಡಿತದಲ್ಲಿಟ್ಟುಕೊಳ್ಳಲು ಬಾಯಿ ತುಂಬಾ ಅನ್ನ ತುರುಕಿಕೊಂಡ ವಾಸು.

''ವಾಸೂ, ಇನ್ನು ಓದು ಮುಗಿದಂತೇನೇ ಅಲ್ವಾ?'' ಕೇಳಿದರು ಜಾನಕಮ್ಮ.

ವಾಸು ಜವಾಬು ಹೇಳುವುದರೊಳಗೆ ''ಪಾಸ್ ಮಾಡಿದ ಮೇಲಲ್ವಾ ಅಮ್ಮ ಮುಗಿತೋ ಇಲ್ವೋ ಅಂತ ಹೇಳೋದು, ಈಗ್ಯಾಕಮ್ಮ ಅದೆಲ್ಲಾ?" ಎಂದು ಬೇಸರದಿಂದ ನುಡಿದಳು ಮಧುಮತಿ.

''ನನಗ್ಯಾಕಮ್ಮ!-ಏನೋ ಅವನು ಉದ್ಯೋಗ ಮಾಡಿ ನಾಲ್ಕು ಕಾಸು ತಂದ್ರೆ ನಿನ್ನ ಕಷ್ಟಗಳು ಹರಿಯುತ್ತೆ ಅಂತ......ಅಷ್ಟೇ'' ಗೊಣಗುತ್ತಿದ್ದ ಜಾನಕಮ್ಮ "ಅಮ್ಮ!'' ಎಂದ ಮಧುಮತಿಯ ತೀವ್ರವಾದ ಗದರಿಕೆ ಕೇಳಿ ಮೌನವಹಿಸಿದರು. ವಾಸು ಊಟ ಮುಗಿಸಿ ಹೋದಮೇಲೆ, "ತಹಶೀಲ್ದಾರರು ಕೆಲಸ ಕೊಡಿಸ್ತಾರೆ, ಹೋಗಿ ಕೇಳೂಂತ ವಾಸೂಗೆ ಹೇಳಬೇಡಮ್ಮಾ! ನಿಧಾನ

ವಾಗಿ ನಾನೇ ಹೇಳ್ತೀನಿ. ಇಷ್ಟು ದಿವಸವೂ ಕಷ್ಟಪಟ್ಟಿದ್ದಾಗಿದೆ. ನಮ್ಮ ಸ್ಥಿತಿ ಗೊತ್ತಾದ್ರೆ ಹೆದರ್ಕ್ಕೋತಾನೆ. ರಾಜು ಮಾಡಿದ ಕೆಲಸಾನೂ ಹೇಳ ಬೇಡ'' ಎಂದು ತಾಯಿಗೆ ಹೇಳಿದಳು ಮಧುಮತಿ.

"ಹಾಗೇ ಆಗ್ಲಿ ಬಿಡೇ. ಇನ್ನೂ ಚಿಕ್ಕವನೇನೂ ಅಲ್ವಲ್ಲಾ. ಅವನಿಗೆ ಗೊತ್ತು ನಮ್ಮ ಪರಿಸ್ಥಿತಿ. ಕೊನೆಗಾಲದಲ್ಲಿ ನಿನ್ನ ವಿಷಯದಲ್ಲಿ ಮನಸ್ಸಿಗೆ ಶಾಂತಿ ಇಲ್ದೆ ಹೋಯ್ತು" – ಬೇಸರದಿಂದ ಹೇಳಿದರು ಜಾನಕಮ್ಮ.

ಏನೋ ಹೇಳಬೇಕೆಂಬ ಜಾನಕಮ್ಮ, ಅದನ್ನು ತಡೆಯುತ್ತಿರುವ ಮಧುಮತಿ, ವಿಷಯ ಅರ್ಥಮಾಡಿಕೊಳ್ಳಲಾಗದಿದ್ದ ವಾಸು ಸರಸರನೆ ಮಹಡಿ ಹತ್ತಿ 'ಜಯಾ!' ಎಂದು ಕೂಗಿದ.

ವಾಸು ಬರುತ್ತಿರುವುದನ್ನು ಗಮನಿಸಿದ ಜಯ ನಿದ್ರೆಹೋದಂತೆ ನಟಿಸಿದಳು. 'ಜಯಾ!' ಮೃದುವಾಗಿ ಕರೆದ ವಾಸು.

ಜವಾಬಿಲ್ಲ. ಅವಳ ತುಟಿಗಳು ಮಾತ್ರ ತುಂಟನಗೆ ಸೂಸುತ್ತಾ ಅಲುಗಾಡಿದವು.

"ಛೀ, ನಿದ್ರೆ ನಟಿಸ್ತಿದ್ದೀಯಾ?''

ಆ ಹುಡುಗಿ ಬಿಂಕದಿಂದ ಅರಳುತ್ತಿದ್ದ ತುಟಿಗಳನ್ನು ಬಿಗಿ ಹಿಡಿದಳು.

"ಏಯ್, ಜಯಾ! ನೀನು ಈಗ ಏಳಬೇಕು'' ಟೇಬಲ್ ಮೇಲೆ ಕುಟ್ಟಿ ಶಬ್ದ ಮಾಡಿದ. ಅವಳು ಕದಲಲಿಲ್ಲ.

"ಹೇಗಾದ್ರೂ ನಿನ್ನನ್ನ ಎಬ್ಬಿಸದೆ ನಾ ಹೋಗೋದಿಲ್ಲ. ಏಯ್, ಮಹಾರಾಣಿ!'' ನಗುತ್ತಾ ಕೂಗಿದ ವಾಸು.

ಅವಳ ತುಟಿಗಳು ಅಲುಗಿ ಪುನಃ ಮುಚ್ಚಿಕೊಂಡವು. ಟೇಬಲ್ ಮೇಲೆ ಲೋಟದಲ್ಲಿದ್ದ ನೀರನ್ನು ಎರಡು ತೊಟ್ಟು ಕಿವಿಯಲ್ಲಿ ಹಾಕಿದ.

"ಛೇ! ಇದೇನು? ಹುಡುಗಾಟ ಹೋಗ್ಲಿಲ್ಲ! ಅಲ್ಲಾ, ಕಾಲೇಜಿನಲ್ಲಿ ಓದ್ದಿದ್ದೀಯಾ.....ಅಲ್ಲಾ ಕೆನ್ನೆ ಮೇಲೆ ಸಿನಿಮಾದಲ್ಲಿ ಎಬ್ಬಿಸುವಂತೆ ಚಿಟಕೆ ಹಾಕಿ ಎಬ್ಬಿಸ್ತಿ ಅಂದ್ಕೊಂಡೆ'' ಜಾರಿದ ಸೆರಗನ್ನು ಸಂಪಡಿಸಿಕೊಳ್ಳುತ್ತಾ ಎದ್ದು ಕೂತಳು.

ಅವಳ ಮಾತುಗಳಿಗೆ, ಅವಳ ವರ್ತನೆಗೆ ನಾಚಿದ ವಾಸು ಥಟಕ್ಕನೆ ಮುಖ ತಿರುಗಿಸಿಕೊಂಡ.

"ಯಾಕೆ, ಹೆಣ್ಣು ಹುಡುಗಿಯಂತೆ ನಾಚ್ಕೋತಿದ್ದೀ.' ಕಿಲಕಿಲನೆ ನಕ್ಕಳು ಜಯ.

''ಬಹಳ ದಿವಸಗಳಿಂದ ನಾನು ಇಲ್ಲಿಗೆ ಬಂದಿರಲಿಲ್ಲ. ಏನಾದ್ರೂ ವಿಶೇಷ ಹೇಳ್ತೀಯೇನೋ ಅಂತ" ಎನ್ನುತ್ತಾ ಅವಳ ಎದುರಿಗೆ ಕುರ್ಚಿ ಹಾಕಿಕೊಂಡು ಕೂತ ವಾಸು.

ತನ್ನ ಓದು, ಸಂಗೀತ, ಕಾಲೇಜಿನಲ್ಲಿ ತಾನು ಭಾಗವಹಿಸಿದ ನಾಟಕಗಳ ವಿಷಯ, ಎದುರುಮನೆ ಲಾಯರ್ ಮಗ ಹೀರೋ ಆಗಿ, ತಾನು ಹೀರೋಯಿನ್ ಆಗಿ ಹೇಗೆ ನಟಿಸಿದರೋ......ಝುಳಝುಳ ಹರಿಯುವ ಪ್ರವಾಹದಂತೆ ಸಾಗಿ ಹೋಗುತ್ತಿತ್ತು ಅವಳ ವಾಕ್‌ಪ್ರವಾಹ. ತನಗೆ ಬೇಕಿಲ್ಲದಿದ್ದ ಅವಳ ಮಾತು ಗಳನ್ನು ಕೇಳಿ ಬೇಸತ್ತ ವಾಸು. ಬೇಸರದಿಂದ ಎದ್ದು "ಎತ್ತಿಗೇನು ಗೊತ್ತು ಅವಲಕ್ಕಿ ರುಚಿ ಎಂದಂತೆ, ನನಗೆ ಇವೆಲ್ಲಾ ಬೇಕಿಲ್ಲ. ಇವುಗಳಲ್ಲಿ ನನಗೆ ಅಭಿರುಚಿ ಇಲ್ಲ. ನೀನೇನೇ ಹೇಳಿದರೂ ನನಗರ್ಥವಾಗೋದಿಲ್ಲ. ಆದರೆ ...'' ಎಂದು ನಿಲ್ಲಿಸಿದ.

''ಊಂ, ಆದರೆ ?" ಎಂದಳು ಜಯ.

"ಅಜ್ಜಿ, ಅಮ್ಮ ಇವರಿಗೆ ಬರೋ ಬೆಳೆ, ಬಾಡಿಗೆ ಸಾಕಾಗ್ತಾ ಇಲ್ವಾ ?" ಕೇಳಿದ ಸಂಕೋಚಪಡುತ್ತಾ.

"ಓ, ಗ್ರಹಿಸಿದೆಯಾ ! ನಿನ್ನದು ಚಾಕುವಿನಂತಹ ತಲೆ. ಛೇ ! ಏನ್ಮಾಡೋಣ ವಾಸೂ ! ಒಂದು ದಿನವೋ, ಎರಡು ದಿನವೋ ಯಾರಾದ್ರೂ ಒಂದು ಸಂಸಾರಕ್ಕೆ ಸಹಾಯ ಮಾಡಬಲ್ಲರು. ವರ್ಷಗಳು ಯಾರಾದ್ರೂ ಸಹಾಯ ಮಾಡೋದಕ್ಕೆ ಸಾಧ್ಯವಾ ? ಏನೂ ಅಂದ್ಕೋಬೇಡ, ವಾಸು ; ಅಜ್ಜಿ ಬಾಯಿ ಒಣಗಿದಲ್ಲ ! ನನಗೂ, ತಮ್ಮನಿಗೂ ಓದು, ಮದುವೆಗಳೂ ನಡೆಯಬೇಕೂಂದ್ರೆ ನಮ್ಮ ತಂದೆಯವರಿಗೆ ಬರೋ ಸಂಬಳ ಯಾವ ಮೂಲೆಗೆ ಹೇಳು ! ನಮ್ಮ ತಂದೆಯವರ ಪಾಲಿಗೆ ಬರೋ ಬೆಳೆ, ಬಾಡಿಗೆ ಅವರಿಗೆ ಕೊಡೋದನ್ನ ನಿಲ್ಲಿಸಿಬಿಟ್ಟಿದ್ದಾರೆ.''

ಬೆಚ್ಚಿದ ವಾಸು, ಸಂಕಟದಿಂದ ಜಯಳ ಕಡೆ ನೋಡಿದ.

''ನನಗೆ ಅತ್ತೇನ ನೋಡಿದ್ರೆ ಅಯ್ಯೋ ಅನ್ನಿಸ್ತಿತ್ತು. ಆದರೆ............ ಆದರೆ..........ಆದರೆ..........ಈಗೇನಾಯ್ತು ಜಯಾ !'' ಧ್ವನಿ ನಡುಗಿತು.

"ಅತ್ತೇನ ನೋಡಿದ್ರೆ ಕೋಪ. ನೀನು ಹಾಕ್ಕೊಳ್ಳೋ ಅಂತ ಬಟ್ಟೆ ನನ್ನ ತಮ್ಮ ಹಾಕ್ಕೋತಾನಾ? ದುಡ್ಡೆಲ್ಲಾ ನಿನಗೆ ಕೊಟ್ಟು ಬಡವರಂತೆ ವೇಷ ಹಾಕಿದ್ದಾರೆ."

"ಜಯ ?" ಅಸಹನೆಯಿಂದ ಅರಚಿದ ವಾಸು.

"ಯಾಕೆ ಹಾಗೆ ಅರಿಚ್ತಿ? ಉಲ್ಲನ್ ಸೂಟ್ ಹಾಕ್ಕೊಳ್ಳೋದಕ್ಕೆ, ವಾಚ್ ಉಂಗುರ ಹಾಕ್ಕೊಳ್ಳೋದಕ್ಕೆ ನಿನಗೆ ಯೋಗ್ಯತೆ ಇದೆಯಾ ಅಂತ. ನಿಮ್ಮ ತಾಯಿ ನಮ್ಮ ತಾಯಿ ಕೊಟ್ಟ ಹಳೇ ಸೀರೆ ಉಟ್ಕೋತಿದ್ದಾರೆ. ನೀನು ಉಲ್ಲನ್ ಸೂಟ್ ಹಾಕಿದ್ದೀ, ಅವರು ಅನ್ನಕ್ಕೆ ಮಾರ್ಗವಿಲ್ಲದೆ ಒದ್ದಾಡ್ತಿದ್ದಾರೆ. ನೀನು ಐ. ಎ. ಎಸ್. ಓದಬೇಕೂ ಅಂತೀ. ಹೆಂಗಸಾದ್ರೂ ಗಂಡಸಾದ್ರೂ, ಚಿಕ್ಕವರಾದ್ರೂ, ದೊಡ್ಡವರಾದ್ರೂ ನಾಚಿಕೆ, ಅಭಿಮಾನ ಇರಬೇಕು. ಅತ್ತೆ ದಮಯಂತಿಯಂತೆ ಒಂದು ಸೀರೇಲಿ ಕಾಲ ಕಳೀತಿದೆ, ಅಗ್ಯೋ ಅನ್ನಿಸಿ ನಮ್ಮ ತಾಯಿ ಎರಡು ಹಳೇ ಸೀರೆ ಕೊಟ್ರು. ಅದಕ್ಕೆ ಎಲ್ಲರನ್ನೂ ಬಯ್ದರು ನಮ್ಮ ತಂದೆ. ಅತ್ತೆ ಯಾಕೆ ಹೀಗ್ಮಾಡ್ತಿದಾರೋ, ನಮ್ಮ ತಂದೆ ಏನಂದ್ರೂ ಬಾಯಿ ಬಿಡೋದಿಲ್ಲ."

"ನಿಲ್ಲು! ಇನ್ನೇನೂ ಹೇಳ್ಬೇಡ." ಆವೇಶದಿಂದ ಕಳಾಹೀನವಾದ ಮುಖ ಹೊತ್ತು ಎದ್ದುನಿಂತ ವಾಸು.

"ಪ್ಲೀಸ್, ಎಕ್ಸ್‌ಕ್ಯೂಸ್ ಮಿ, ವಾಸು. ನಿನಗೆ ಕೋಪ ಬರಬೇಕು ಅಂತ್ಲೇ ಈ ವಿಷಯ ಎಲ್ಲಾ ಇದ್ದದ್ದನ್ನ ಇದ್ದಂತೆ ಹೇಳಿ ನಿನ್ನ ಮನಸ್ಸು ನೋಯಿಸಿದೆ. ನಿನಗೆ ಕಾಗದ ಬರೆದು ಇದೆಲ್ಲಾ ತಿಳಿಸೋಣ ಅಂದ್ಕೋತಾ ಇದ್ದೆ. ನಿಮ್ಮ ತಾಯಿಯನ್ನ ಸುಖವಾಗಿಟ್ಟುಕೊಳ್ಳೋದು ನಿನ್ನ ಕರ್ತವ್ಯ. ನಿನ್ನ ಹತ್ರ ಸಲಿಗೆ ಇರೋದರಿಂದ ಎಲ್ಲಾ ಹೇಳ್ದೆ. ನಮ್ಮ ಅಮ್ಮ ಅಪ್ಪ ನಿನಗೆ ಹಣ ಎಲ್ಲಿಂದ ಬರುತ್ತೆ—ತಿಳ್ಕೋಬೇಕು ಅಂತ ಒದ್ದಾಡ್ತಾ ಇದ್ದಾರೆ......ಯಾವುದಾದ್ರೂ ಕೆಲಸ ಹುಡುಕಿಕೊಂಡು ಅತ್ತೇನ ಕರ್ಕೊಂಡು ಹೊರಟ್ಹೋಗು." ಸಾವಧಾನವಾಗಿ ಹೇಳುತ್ತಿದ್ದ ಜಯಳ ಕೈಯನ್ನು ಗಟ್ಟಿಯಾಗಿ ಹಿಡಿದು ಅಮುಕುತ್ತಾ, "ಥ್ಯಾಂಕ್ಸ್, ನನಗೆ ಬೇಕಾಗಿದ್ದ ವಿಷಯಗಳನ್ನೆಲ್ಲಾ ಹೇಳಿದ್ದಿ, ಮೆನಿ ಮೆನಿ ಥ್ಯಾಂಕ್ಸ್! ಹೊರಡ್ತೀನಿ" ಎಂದು ಹೇಳಿ ಸರಸರನೆ ಹೋಗಿ ಬಿಟ್ಟ ವಾಸು.

"ಈವತ್ತು ಹೊರಡ್ತೀನಮ್ಮಾ !" ಎಂದ ವಾಸುವಿನ ಕಡೆ ಬಿಳುಚಿಹೋಗಿ ನೋಡುತ್ತಾ, "ಎಲ್ಲಿಗೆ ಹೋಗ್ತೀ? ರಿಸಲ್ಟ್ ಬರಲಿ" ಎಂದಳು ಮಧುಮತಿ.

"ಚಿಕ್ಕಮಾವನ ಊರಿಗೆ ಹೋಗಿ ಯಾವುದಾದರೂ ಕೆಲಸಕ್ಕೆ ಪ್ರಯತ್ನ ಪಡ್ತೀನಿ."

"ಹಾಗೇ ಆಗ್ಲಿ,, ನಾಲ್ಕು ದಿವಸ ಬಿಟ್ಟು ಹೋಗ್ತೀಯಂತೆ."

ಒಪ್ಪದಿರಲಾಗಲಿಲ್ಲ ವಾಸುವಿಗೆ. ತಹಶೀಲ್ದಾರರು ಕೆಲಸ ಕೊಡಿಸುವುದಾಗಿ ಹೇಳಿದ್ದಾರೆ, ನಿನ್ನನ್ನೊಮ್ಮೆ ಅವರ ಮನೆಗೆ ಬರಹೇಳಿದ್ದಾರೆಂದು ಮಗಳಿಗೆ ತಿಳಿಯದಂತೆ ಮೆಲ್ಲಗೆ ವಾಸುವಿಗೆ ಹೇಳಿದರು ಜಾನಕಮ್ಮ.

ಒಂದು ದಿನ ಸಂಜೆ ಬೇಗ ಬೇಗ ಡ್ರೆಸ್ ಮಾಡಿಕೊಂಡು, "ಅಮ್ಮಾ ಅಜ್ಜಿ ಜೊತೇಲಿ ತಹಶೀಲ್ದಾರರ ಮನೆಗೆ ಹೋಗ್ತಿದ್ದೀನಮ್ಮ" ಎಂದ ವಾಸು.

"ಬೇಡ, ನೀನು ಅವರ ಮನೆಗೆ ಹೋಗೋ ಅಗತ್ಯವಿಲ್ಲ" ಆಜ್ಞಾಪಿಸುತ್ತಿದ್ದಂತೆ ಹೇಳಿದಳು ಮಧುಮತಿ.

"ಯಾಕಮ್ಮ ಹಾಗಂತೀ ? ಇನ್ನೊಂದು ವಾರದಲ್ಲಿ ರಿಸಲ್ಟ್ ಬರುತ್ತೆ. ಈ ಕಾಲದಲ್ಲಿ ಕೆಲಸ ಸಿಗೋದು ಬಹಳ ಕಷ್ಟ ಅಮ್ಮ !"

"ಈ ಊರಲ್ಲಿ......ಪುನಃ ಆ ಆಫೀಸಿನಲ್ಲಿ ಗುಮಾಸ್ತೆ ಕೆಲಸ ಬೇಡ, ವಾಸೂ ! ಅಲ್ಲಿ ಮಾವ ಏನಂತಾನೋ ? ಕೆಲಸ ಮಾಡಬೇಕು ಅಂತ ಯಾಕೆ ನಿನ್ನ ಮನಸ್ಸನ್ನು ಬದಲಾಯಿಸಿದೆ? ನನಗೇನೂ ಇಷ್ಟವಿಲ್ಲ......ನೀನಿನ್ನೂ ಮುಂದೆ ಓದಬಲ್ಲೆ. ಇದುವರೆಗೂ ಓದಿಸಿದವರೇ ಇನ್ನು ಮುಂದೆಯೂ ಓದಿಸ್ತಾರೆ......ಮುಂದಕ್ಕೆ ಓದೋ ಅವಕಾಶ ಇದ್ರೆ ನನಗೋಸ್ಕರವಾಗಿ......ಈ ದರಿದ್ರ ಅಮ್ಮನಿಗೋಸ್ಕರ ನೀನು ಕೆಲಸಕ್ಕೆ ಸೇರಬೇಡ" ಅವಳ ಧ್ವನಿ ದುಃಖದಿಂದ ರುದ್ಧವಾಯಿತು.

"ಅಮ್ಮ !" ಅಪ್ರತಿಭನಾದ ವಾಸು.

"ಅಷ್ಟೆ, ನೀನು ಅವರ ಮನೆಗೆ ಹೋಗಬೇಕಾಗಿಲ್ಲ" ಕೋಪದಿಂದ ಹೊರಟುಹೋದಳು ಮಧುಮತಿ.

"ಅಮ್ಮನಿಗೆ ಇಷ್ಟವಿಲ್ಲ, ನಾ ಬರೋದಿಲ್ಲ ಅಜ್ಜಿ !" ಎಂದ ಬಿಳೀ ಸೀರೆಯುಟ್ಟು ಹೊರಡಲು ಸಿದ್ಧವಾಗಿ ನಿಂತಿದ್ದ ಜಾನಕಮ್ಮನವರಿಗೆ.

"ಅವಳ ಮುಖ ! ಅವಳೂ ಸುಖಪಡೋದಿಲ್ಲ. ಬೇರೆಯವರನ್ನೂ ಸುಖಪಡೋದಕ್ಕೆ ಬಿಡೋದಿಲ್ಲ !" ಕೋಪದಿಂದ ಅಂದರು ಜಾನಕಮ್ಮ.

"ಹೋಗ್ಲಿ, ನೀ ಹೋಗ್ಬಿಟ್ಟು ಬಾ, ಅಮ್ಮನಿಗೆ ಕೋಪ ಬರುತ್ತೆ. ನಾ ಬರೋದಿಲ್ಲ."

ಹೊರಟವರು ನಿಲ್ಲಬಾರದೆಂಬಂತೆ ಸರಸರನೆ ಪಕ್ಕದ ಮನೆಗೆ ಹೊರಟರು ಜಾನಕಮ್ಮ.

o o o o

"ಬನ್ನಿ, ಬನ್ನಿ, ಮೊಮ್ಮಗ ಎಲ್ಲಿ ?" ಎನ್ನುತ್ತಾ ಮರ್ಯಾದೆಯಿಂದ ಆಹ್ವಾನಿಸಿದರು ತಹಶೀಲ್ದಾರರು.

"ಹುಡುಗ ಸಂಕೋಚಪಟ್ಟು, ರಿಸಲ್ಟ್ ಬಂದ ಮೇಲೆ ಕೇಳೋಣ ಅಂತ ಹೇಳ್ದ." ಥಟಕ್ಕನೆ ಸುಳ್ಳು ಹೇಳಿದರು ದಿವಾನ್ ಮೇಲೆ ಕೂಡುತ್ತಾ.

"ಮೊಮ್ಮಗ ಎಲ್ಲಿ ?" ಅದೇ ಪ್ರಶ್ನೆಯನ್ನು ಅವರ ಹೆಂಡತಿ ಅನ್ನಪೂರ್ಣಮ್ಮನೂ ಕೇಳಿದರು.

"ಏನೋ ಬಹಳ ಗಲಾಟೇಲಿದ್ದೀರಿ ? ಮಗಳನ್ನ ನೋಡೋದಕ್ಕೆ ಯಾರಾದರೂ ಬರ್ತಾರಾ ?" ಎದುರು ಪ್ರಶ್ನೆ ಹಾಕಿದರು ಜಾನಕಮ್ಮ

ಗಂಡನಿಗೇನೋ ಸನ್ನೆ ಮಾಡಿ ಮನೆಯೊಳಗೆ ಹೋದರು ಅನ್ನಪೂರ್ಣಮ್ಮ ತಾನು ಅವರ ಮಾತು ಕೇಳಿಸಿಕೊಳ್ಳಲಿಲ್ಲವೆಂಬಂತೆ.

"ಅಲ್ಲ......ಇನ್ನಾರು ಬರ್ತಾರೆ ಹುಡುಗೀನ ನೋಡೋದಕ್ಕೆ......ಸೀವೇ ! ಊಂ......ಕೂತ್ಕೊಳ್ಳಿ, ಕಾಫಿ ತಗೊಂಡ್ಬಾಮ್ಮ ನಿರ್ಮಲಾ, ಅಜ್ಜಿಯವರಿಗೆ" ನಕ್ಕರು ತಹಶೀಲ್ದಾರರು ಲೌಕಿಕವಾಗಿ.

"ಬೇಡಿ, ಈಗತಾನೆ ಆಯ್ತು."

"ಮೊಮ್ಮಗ ಬಂದಿದ್ರೆ ಕಷ್ಟ ಸುಖ ವಿಚಾರಿಸಿ ಏನೋ ಕೇಳ್ಬೇಕು ಅಂದ್ಕೊಂಡೆ. ಒಳ್ಳೆಯ ಅಂಗ ಸೌಷ್ಠವ, ಎಲ್ಲರೂ ನೋಡಿದ್ದೀವಿ ಅಂದ್ಕೊಳ್ಳಿ. ಬುದ್ಧಿವಂತನ ಹಾಗೆ ಕಾಣ್ತಾನೆ, ವಯಸ್ಸೆಷ್ಟು ಅಂದ್ರಿ ?"

"ಇನ್ನೂ ಚಿಕ್ಕವನು. ಹತ್ತೊಂಬತ್ತೇ ವರ್ಷ" ಒಂದು ವರ್ಷ ಕಡಿಮೆ ವ ಡಿದರು ಜಾನಕಮ್ಮ.

"ರಾಜಶೇಖರ್ ಅವರ ಹತ್ರ ಮಾತಾಡೆ.... ಅವರು ಹೇಳಿದರು..... ಅ. ರ ತಮ್ಮ ಅವರ ಮಗಳಿಗೆ ದೊಡ್ಡ ಕಡೆ ಸಂಬಂಧ ಮಾಡೋ ಉದ್ದೇಶ್ಯ ಹೊಂದಿದ್ದಾರಂತೆ. ನಮ್ಮ ಮಗಳಿಗೆ ಹದಿನಾರು ವರ್ಷ. ಈಡೂ ಜೋಡೂ ಚೆನ್ನಾಗಿರುತ್ತೆ," ಮಗಳ ವಯಸ್ಸನ್ನು ಎರಡು ವರ್ಷ ಕಡಿಮೆ ಮಾಡಿದರು ತಹಶೀಲ್ದಾರರು.

ಅರ್ಥವಾಗಿಯೂ ಅರ್ಥವಾಗದಂತೆ ನೋಡಿದರು ಜಾನಕಮ್ಮ. ಕಾಫಿ ತಣ್ಣಗಾಗುತ್ತಿತ್ತು.

ವಾಸ್ತವ ವಿಷಯಕ್ಕೆ ಬಂದರು ತಹಶೀಲ್ದಾರರು. "ಉಭಯ ಪಕ್ಷಕ್ಕೂ ನೀವೇ ದೊಡ್ಡವರು. ನಮಗೆ ಅವಳೊಬ್ಬಳೇ ಮಗಳು ಹುಡುಗನಿಗಿಂತ ಸ್ವಲ್ಪ ಬಣ್ಣ ಕಡಿಮೆಯಾದ್ರೂ ಸಂಸಾರಕ್ಕೆ ಬೇಕಾದ ಕೆಲಸ ಕಾರ್ಯ ಎಲ್ಲಾ ಬರುತ್ತೆ ನಮ್ಮ ಹುಡುಗಿಗೆ."

ಜಾನಕಮ್ಮನವರ ಮುಖದಲ್ಲಿ ಬಣ್ಣ ಬದಲಾಯಿಸಿ ಹೋಗುತ್ತಿತ್ತು. ಅಪ್ರಯತ್ನದಿಂದ ಮುಖವೆಲ್ಲಾ ಸಿಡುಬಿನ ಕಲೆಗಳೊಂದಿಗೆ, ಕಪ್ಪಗೆ, ದಪ್ಪಗಿದ್ದ ನಿರ್ಮಲಳ ಕಡೆ ನೋಡಿದರು. ರಭಸದಿಂದ ಮುಖ ತಿರುಗಿಸಿ ಎದ್ದು ನಿಂತು, "ಪುರಾಣಕ್ಕೆ ಹೋಗ್ಬೇಕು, ಹೊರಡ್ತೀನಿ" ಎಂದರು. ಅವರಿಗೆ ಮುಳ್ಳಿನ ಮೇಲೆ ನಿಂತಂತಿತ್ತು.

"ಒಂದೈದು ನಿಮಿಷ ಕೂತ್ಕೊಳ್ಳಿ ಜಾನಕಮ್ಮನವರೇ! ದೊಡ್ಡವರು, ನಾಲ್ಕಾರು ಶುಭಕಾರ್ಯಗಳನ್ನ ನಡೆಸಿರೋವ್ರು ನಿಮ್ಮ ಮೊಮ್ಮಗನಿಗೂ, ಮಗಳಿಗೂ ಹೇಳಿ ಒಪ್ಪಿಸಿ ತಥಾಸ್ತು ಅನ್ನಿಸಿಬಿಡಿ. ನಮಗಿರೋ ಭೂಮಿ, ಕಾಣಿ ಎಲ್ಲಾ ನಮ್ಮ ಮಗಳಿಗೆ ಸೇರತಕ್ಕದ್ದೇ. ನಾವು ಅವರೊಂದಿಗೆ ಇರೋವ್ರೇ ಅಂದ್ಕೊಳ್ಳಿ'' ನಕ್ಕರು ತಹಶೀಲ್ದಾರರು.

ಜಾನಕಮ್ಮನವರಿಗೆ ಮೈ ಉರಿಯಿತು. "ತಹಶೀಲ್ದಾರರೇ ಇಬ್ಬರು! ಸೋದರಮಾವಂದಿರ ಹೆಣ್ಣುಮಕ್ಕಳಿರುವಾಗ ಬೇರೆ ಸಂಬಂಧದಲ್ಲಿ ಮಾಡ್ಕೋತೀವಾ? ಗೊತ್ತಿದ್ದೂ ಕೇಳೋದು ತಪ್ಪು.....ಇಲ್ಲಿ ಕೆಲಸ ಮಾಡೊಲ್ಲ ಅಂತ ಹೇಳಿದ್ದಾನೆ ಅವನು" ಎನ್ನುತ್ತಾ ಸರಸರನೆ ಹೊಸಿಲು ದಾಟಿದರು.

"ಕೋರೆ ಮೀಸೆ ಅಯೋಗ್ಯ ಎಂಥ ಪ್ಲಾನ್ ಹಾಕಿದ್ದಾನೆ! ಕೆಲಸ ಕೊಡಿಸಿ ಮಗಳನ್ನ ಕುತ್ತಿಗೆಗೆ ಕಟ್ಬೋದೆ ಅಲ್ದೆ ಅಳಿಯನ್ನ ಮನೇಲಿ ಇಟ್ಕೋತಾನಂತೆ. ಉಪ್ಪುಖಾರ ತಿನ್ನೋವ್ನು, ಮಾನಾಭಿಮಾನ ಇರೋವ್ನು ಮನೆ

ಅಳಿಯನಾಗಿ ಅಲ್ಲೇ ಇರೋದಕ್ಕೆ ಒಪ್ಕೋತಾನೇ? ಅಂಥ ಒಳ್ಳೆ ಹುಡುಗನ್ನ ಮನೇಲಿ ಇಟ್ಕೋತಾನಂತೆ......ಎಷ್ಟು ಹೀನ ಜನ! ಎಂಥ ಪ್ಲಾನ್ ಹಾಕಿದ್ದಾರೆ! ಸದ್ಯ ತಿಳೀತಲ್ಲಾ ಅವರ ಯೋಗ್ಯತೆ, ಹೂವು ಕುಯ್ಕೊಳ್ಳೋ ನೆಪದಲ್ಲಿಬರೋದು ಅವನನ್ನ ನೋಡೋದಕ್ಕೇನೇನೋ. ನಾಳೆಯಿಂದ ಬರಬೇಡ ಅಂತ ಹೇಳ್ಬೇಕು. ಎಂದುಕೊಳ್ಳುತ್ತಾ ಬೇಸರದಿಂದ ಮನೆಗೆ ಹೋದ ಜಾನಕಮ್ಮ ಹಣ ಕೇಳಿದ ತರಕಾರಿಯವಳ ಮೇಲೆ ತನ್ನ ಕೋಪವನ್ನೆಲ್ಲಾ ತೀರಿಸಿಕೊಂಡರು.

"ಕಾಫಿ ಕಪ್ಪು ತಗೊಂಡು ಹೋಗು ಅನ್ನಕ್ಕೆ ಗತಿ ಇಲ್ದೆ ಇರೋವರಿಗ್ಗೆ ಕೆಲಸ ಕೊಡಿಸಿ ಮಗಳನ್ನ ಕೊಡ್ತೀನಿ ಅಂದ್ರೆ ತಲೆ ತಿರುಗುತ್ತೆ." ಆರಿದ ಕಾಫಿ ಕಪ್ಪಿನ ಕಡೆ ಕೋಪದಿಂದ ನೋಡಿದರು ತಹಶೀಲ್ದಾರರು.

ಮಹಡಿ ಮೆಟ್ಟಲುಗಳನ್ನು ಹತ್ತುತ್ತಿದ್ದ ವಾಸುವಿಗೆ ಮೃದುಮಧುರವಾದ ಧ್ವನಿಯಲ್ಲಿ ಹಾಡುತ್ತಿದ್ದ ಸುಶ್ರಾವ್ಯವಾದ ಸಂಗೀತ ಕೇಳಿಬರುತ್ತಿತ್ತು. ಸರಸರನೆ ನಡೆದು ಹೊಸ್ತಿಲ ಬಳಿ ನಿಂತು ಒಳಗೆ ಬಗ್ಗಿ ನೋಡಿದ. ಕನ್ನಡಿಯ ಎದುರಿನಲ್ಲಿ ನಿಂತು ಮುಂಗುರುಳನ್ನು ಸರಿಪಡಿಸಿಕೊಳ್ಳುತ್ತಾ ಹಾಡುತ್ತಿದ್ದಳು ಜಯ.

ಮೆಲ್ಲಗೆ ಕೆಮ್ಮಿ ಗಂಟಲನ್ನು ಸರಿಪಡಿಸಿಕೊಂಡು, "ಹೊರಡ್ತೀನ್ನಿ ಜಯ!" ಎಂದ ವಾಸು.

"ಈಗ್ಲೇ ಎಲ್ಲಿಗೆ ಹೋಗ್ತಿದ್ದೀ?" ಪ್ರಕಾಶಮಾನವಾದ ಕಣ್ಣುಗಳನು, ತಿರುಗಿಸುತ್ತಾ ಥಟಕ್ಕನೆ ಹಿಂದಿರುಗಿ ನೋಡುತ್ತಾ ಕೇಳಿದಳು.

ಆಕಾಶ ಬಣ್ಣದ ಟೆರಿಲಿನ್ ಸೀರೆ, ಅದೇ ಕಲರ್ ಜಾಕಿಟ್ ಹಾಕಿದ್ದ ಅವಳ ದೇಹ ಸೌಂದರ್ಯ ಇಮ್ಮಡಿಸುತ್ತಿತ್ತು. ಎರಡು ಕ್ಷಣ ಅವಳ ಕಡೆ ದಿಟ್ಟಿಸಿದ ವಾಸುವಿಗೆ ಅವಳ ಸೌಂದರ್ಯವನ್ನು ಮೆಚ್ಚಿಕೊಳ್ಳದೆ ಇರಲಾಗಲಿಲ್ಲ.

"ಚೆನ್ನಾಗಿದೆ! ಮಾತುಕತೆ ಇಲ್ದೆ ಹಾಗೆ ನೋಡ್ತಿದ್ದಿ, ದೃಷ್ಟಿಯಾದೀತು" ಕಿಲಕಿಲನೆ ನಕ್ಕಳು ಜಯ.

"ಎಲ್ಲಿಗೋ ಹೊರಟರೋ ಹಾಗಿದೆ?" ಎಂದ ನಗುತ್ತಾ.

"ರಿಹರ್ಸಲ್ ಇದೆ. ಬರೋ ತಿಂಗಳು ಒಂದನೇ ತಾರೀಖು ನಾಟಕ ಆಡ್ತಿದ್ದೀವಿ, ಹೊರಡ್ತೀನಿ" ಎಂದಳು ವಾಚ್ ನೋಡಿಕೊಳ್ಳುತ್ತಾ.

"ನನಗೆ ಅವಸರವೇ ಆದ್ರೂ......ಜಯಾ ನಿಮ್ಮ ಅಮ್ಮಾ, ನಿಮ್ಮ ಅಪ್ಪ ನಿನ್ನನ್ನು ಈ ಜಗಪತೀ ಜೊತೇಲಿ ಪಾರ್ಟ್ನರ್ ಮಾಡಿಸೋದಕ್ಕೆ ಒಪ್ಪಿಕೊಂಡಿರೋದು ನನಗೆ ಇಷ್ಟವಾಗಲಿಲ್ಲ.''

''ಛೆ! ಬರೀ ನಟನೆ ಅಲ್ವಾ! ಅಷ್ಟಕ್ಕೂ ಜಗಪತಿ ನನ್ನ ಕ್ಲೋಸ್ ಫ್ರೆಂಡು. ನಮ್ಮ ತಂದೆಯವರಿಗೆ, ಅವರ ತಂದೆಯವರಿಗೆ–ಅಂದ್ರೆ ಅವರ ಕುಟುಂಬಕ್ಕೂ, ನಮ್ಮ ಕುಟುಂಬಕ್ಕೂ ಭೇದ ಭಾವನೆಯೇ ಇಲ್ಲ. ಸರಿ ಹೊರಡು, ಪುನಃ ಯಾವಾಗ ಬರ್ತೀ?'' ಎಂದು ಕೇಳಿದಳು ಜಯ.

''ಕೆಲಸ ಸಿಕ್ಕಿದ ಮೇಲೆ.''

''ಸಂತೋಷ, ಹಾಗೆ ಮಾಡು'' ಎನ್ನುತ್ತಾ ಹೊರಗೆ ಬಂದಳು ಜಯ, ಅವಳ ಹಿಂದೆಯೇ ವಾಸುವೂ ಬಂದ.

''ನೀನು ಅವಸರಪಟ್ಟು ಯಾವ ತೀರ್ಮಾನವೂ ಮಾಡಬೇಡ. ಮಾವ ಹೇಗೆ ಹೇಳಿದ್ರೆ ಹಾಗೆ ಮಾಡು'' ಎಚ್ಚರಿಸಿದಳು ಮಧುಮತಿ.

''ಹಾಗೇ ಆಗ಼್ಲಮ್ಮ'' ಎಂದ ವಾಸು.

ತಾನಿದ್ದ ದಿನಗಳಲ್ಲಿ ಕೇವಲ ಒಂದೆರಡೇ ಮಾತುಗಳನ್ನಾಡಿ ಮುಖಭಾವವಾಗಿಯೇ ಇದ್ದ ರಾಜಶೇಖರ್‌ಗೂ ತಾನು ಹೋಗುತ್ತಿರುವುದಾಗಿ ತಿಳಿಸಿದ.

''ಅಜ್ಜಿ ನೋಡ್ಬೇಕು ಅಂತ ಹೇಳ್ತಿದ್ದಾರೆ. ಒಂದು ಸಲ ಬಂದು ಹೋಗೂಂತ ಗೋಪಾಲನಿಗೆ ಹೇಳು, ವಾಸು" ಎನ್ನುತ್ತಾ ಹೊರಟುಹೋಗುತ್ತಿದ್ದ ವಾಸುವಿನ ಕಡೆ ನೋಡುತ್ತಾ ಕಣ್ಣೊರಸಿಕೊಂಡರು ಜಾನಕಮ್ಮ.

೦ ೦ ೦ ೦

"ಎಲ್ಲಿಂದ ಬರ್ತಾ ಇರೋದು?'' ಮುಗುಳ್ನಗೆಯಿಂದ ಕೇಳಿದರು ಪ್ರಸಾದರಾವ್.

''ಅಮ್ಮನ್ನ ನೋಡೋದಕ್ಕೆ ಊರಿಗೆ ಹೋಗಿದ್ದೆ. ಅಲ್ಲಿಂದ ಬರ್ತಿದ್ದೀನಿ.'' ಬಟ್ಟೆ ಬದಲಾಯಿಸಿ ಬಾತ್‌ರೂಮಿಗೆ ಹೋಗುತ್ತಾ ಹೇಳಿದ ವಾಸು.

''ಹೌದಾ! ಎಲ್ಲಾ ಚೆನ್ನಾಗಿದ್ದಾರಾ?"

ಈ ನಾಲ್ಕು ವರ್ಷಗಳಿಂದ ತನ್ನ ತಾಯಿಯನ್ನು ನೋಡಿ ಬಂದೆ ಎಂದು ಹೇಳಿದರೆ ಮೌನ ವಹಿಸುತ್ತಿದ್ದ ಪ್ರಸಾದರಾವ್ ''ಎಲ್ಲಾ ಚೆನ್ನಾಗಿದ್ದಾರಾ?' ಎಂದು ಈಗ ಪ್ರಶ್ನಿಸಿದ್ದರು.

"ಎಲ್ರೂ ಚೆನ್ನಾಗಿದ್ದಾರಪ್ಪ!" ಎಂದು ಹೇಳಿದ ಸಂತೋಷದಿಂದ ತಂದೆಯ ಕಡೆ ನೋಡುತ್ತಾ.

ಫ್ಲಾಸ್ಕಿನಲ್ಲಿದ್ದ ಕಾಫಿಯನ್ನು ಲೋಟಕ್ಕೆ ಬಗ್ಗಿಸಿ, "ತಗೋ, ಯಾಕೆ ಅಷ್ಟು ಸುಸ್ತಾಗಿದ್ದೀಯಲ್ಲ? ಮಧ್ಯಾಹ್ನ ರೈಲಿನಲ್ಲಿ ಏನೂ ತಿನ್ನಲಿಲ್ವಾ?" ಎಂದು ಕೇಳಿದರು ಪ್ರಸಾದರಾವ್.

"ತಿನ್ನದೆ ಏನು? ಊಟವೇ ಮಾಡಿದೆ," ಕಾಫಿ ಸಿಪ್ ಮಾಡುತ್ತಾ ನುಡಿದ ವಾಸು.

"ಪರೀಕ್ಷೇಲಿ ಚೆನ್ನಾಗಿ ಮಾಡಿದ್ದೀಯಾ? ಕ್ಲಾಸ್ ಬರುತ್ತಾ?"

"ಬರಬಹುದು ಅಂದ್ಕೋತಿದ್ದೀನಿ," ಮಂದಹಾಸ ಬೀರುತ್ತಾ ನುಡಿದ ವಾಸು.

ಕೆಲವು ಕ್ಷಣಗಳ ನಂತರ ಎದೆಯನ್ನು ಒತ್ತಿ ಹಿಡಿದು ಕೆಮ್ಮಲು ಪ್ರಾರಂಭಿಸಿದ ಪ್ರಸಾದರಾವ್ ಕಡೆ ಕಳವಳದಿಂದ ನೋಡಿ, "ಪುನಃ ಕೆಮ್ಮಲು ಬಂದಿದೆಯೋ?"......ಎಂದ ವಾಸು.

"ಇಲ್ಲ, ಇಲ್ಲ......ಈ ನಡುವೆ ಏನೂ ಇರ್ಲಿಲ್ಲ. ಆರೋಗ್ಯವಾಗೇ ಇದ್ದೆ, ಪುನಃ ನಾಲ್ಕು ದಿವಸದಿಂದ....." ಪುನಃ ಕೆಮ್ಮಲು ಅಡ್ಡಿಪಡಿಸಿತು.

"ಛೆ! ನಿಮಗೆ ಬಹಳ ನಿರ್ಲಕ್ಷ್ಯ. ಆರೋಗ್ಯದ ವಿಷಯದಲ್ಲಿ. ಇದೋ ಸ್ವಲ್ಪ ಕಾಫಿ ಕುಡೀರಿ." ಅವರ ಬಾಯಿಗೆ ಕಾಫಿ ಕಪ್ಪನ್ನು ಹಿಡಿದ ವಾಸು.

ಮಧುಮತಿ ವಿನಃ ಬೇರೆಯವರ ಯೋಗಕ್ಷೇಮವನ್ನೆಲ್ಲಾ ವಿಚಾರಿಸಿದರು ಪ್ರಸಾದರಾವ್.

"ಅಮ್ಮ ಯಾಕೋ ತುಂಬಾ ತೆಗೆದುಹೋಗಿದ್ದಾರೆ, ಅಪ್ಪ!" ತನ್ನಷ್ಟಕ್ಕೆ ತಾನೇ ಹೇಳಿದ ವಾಸು ಒಂದು ಕ್ಷಣ ವಾಸುವಿನ ಕಡೆ ನೋಡಿ ಮುಖ ತಿರುಗಿಸಿದರು ಪ್ರಸಾದರಾವ್.

"ಯಾಕೆ? ಏನು?" ಎನ್ನುವ ಪ್ರಶ್ನೆಗಳು ಪ್ರಸಾದರಾವ್ ಬಾಯಿಂದ ಬರುತ್ತದೆ ಎಂದು ಆಶಿಸಿದ್ದ ವಾಸುವಿಗೆ ಅಸಂತೃಪ್ತಿಯುಂಟಾಗಿ ಆ ಕ್ಷಣದಲ್ಲಿ 'ನನ್ನ ವಿನ ಇನ್ನಾರಿಗೂ ಅಮ್ಮನ ವಿಷಯ ಬೇಕಿಲ್ಲ' ಎಂದುಕೊಂಡ ವಾಸುವಿನ ಹೃದಯ ಚಲಿಸಿ ಕಣ್ಣು ಒದ್ದೆಯಾಯಿತು. ಒಡನೆಯೇ ಮುಖ ಒರೆಸಿ ಕೊಂಡು, "ಔಷಧಿ ತಗೋತಿದ್ದೀರಾ?" ಎಂದು ಕೇಳಿದ.

''ಊಂ, ತಗೋತಿದ್ದೀನಿ" ಆ ಜವಾಬಿನಲ್ಲಿ ನಿರ್ಲಕ್ಷ್ಯ, ತಾಯಿ, ತಂದೆ ಇಬ್ಬರ ಅಂತರ್ಯವೂ ಅರ್ಥವಾಗದಿದ್ದ ವಾಸು ಅಯೋಮಯವಾಗಿ ಶೂನ್ಯವನ್ನು ನೋಡುತ್ತ ಮೌನವಹಿಸಿದ.

ರಾತ್ರಿ ವಾಸುವಿಗೆ ಊಟ, ಪ್ರಸಾದರಾವ್‌ಗೆ ಚಪಾತಿಯನ್ನು ಟೇಬಲ್ ಮೇಲಿಟ್ಟ ಆಳು.

''ನೀವು ಊಟ ಮಾಡೋದಿಲ್ವಾ ?" ಕೇಳಿದ ವಾಸು.

''ಅರಗೋದಿಲ್ಲಪ್ಪ ! ಒಂದು ವಯಸ್ಸಾದ ಮೇಲೆ ರಾತ್ರಿ ಊಟ ಬಿಟ್ಬಿಡೋದು ಒಳ್ಳೇದು ಅಂತ ಹೇಳಿದ್ರು ಡಾಕ್ಟರ್."

ಕೆಲಕ್ಷಣ ಆಲೋಚಿಸಿದ ವಾಸು-''ಅಡಿಗೆ ಮಾಡೋದಕ್ಕೆ ಯಾರನ್ನಾದ್ರೂ ಇಟ್ಕೊಂಡ್ರೆ ?......ಹೋಟೆಲ್ ಊಟಕ್ಕಿಂತ ಆರೋಗ್ಯ ಅಲ್ವಾ ?" ಎಂದ ಪ್ರಶ್ನಾರ್ಥಕವಾಗಿ ಪ್ರಸಾದರಾವ್ ಕಡೆ ನೋಡುತ್ತಾ.

ಮೌನವಾಗಿ ಚಪಾತಿ ಚೂರನ್ನು ತುರುಕಿಕೊಂಡರು ಪ್ರಸಾದರಾವ್.

''ಏನಂತೀರಿ ?" ಪುನಃ ಕೇಳಿದ ವಾಸು.

''ನೋಡೋಣ ಬಿಡು !" ಎಂದರು ಪ್ರಸಾದರಾವ್ ಮುಗುಳ್ನಗುತ್ತಾ.

ಬೆಳಿಗ್ಗೆ ಅಂಗಡಿಗೆ ಹೊರಟ ಪ್ರಸಾದರಾವ್ ಹಿಂದೆ ತಾನೂ ಹೊರಟ ವಾಸು.

''ಆ ಅಕೌಂಟ್ಸ್ ಏನು ನೋಡಬೇಕೋ ನಾನು ನೋಡ್ತೀನಿ, ನೀವು ರೆಸ್ಟ್ ತಗೊಳ್ಳಿ." ಎನ್ನುತ್ತಾ ತನ್ನ ಕೈಯಲ್ಲಿದ್ದ ಅಕೌಂಟ್ಸ್ ಪುಸ್ತಕಗಳನ್ನು ಕಿತ್ತುಕೊಂಡ ವಾಸುವನ್ನು ತೃಪ್ತಿಯಿಂದ ನೋಡುತ್ತಾ "ನಿನಗೇನು ಗೊತ್ತಾಗುತ್ತೆ, ವಾಸು ಇದೆಲ್ಲಾ" ಎಂದು ತಡೆಯಲು ಹೋದರು ಪ್ರಸಾದರಾವ್.

"ಗೊತ್ತಾಗ್ದೆ ಇರೋದನ್ನ ನೀವು ಹೇಳಬಹುದಲ್ಲಾ ?" ನಕ್ಕುಬಿಟ್ಟ ವಾಸು.

ಕೆಲವು ವಿವರಗಳನ್ನು ಮಾತ್ರ ಕೇಳಿ ಅಂದು ತಾನು ಮಾಡಿ ಮುಗಿಸಬೇಕಿದ್ದ ಅಷ್ಟು ಕೆಲಸವನ್ನೂ ತಪ್ಪಿಲ್ಲದೆ ಸರಸರನೆ ಮಾಡಿ ಮುಗಿಸಿದ ವಾಸುವಿನ ಸಾಮರ್ಥ್ಯ ನೋಡಿ ಆನಂದಪರವಶರಾದರು ಪ್ರಸಾದರಾವ್.

ಸಂತೋಷದಿಂದ, ತೃಪ್ತಿಯಿಂದ ನಗುತ್ತಾ ಮಾತನಾಡುತ್ತಿದ್ದ ಪ್ರಸಾದರಾವ್, ಅನ್ಯಮನಸ್ಕನಾಗಿ ಒಂದೆರಡು ಮಾತುಗಳನ್ನು ಆಡುತ್ತಿದ್ದ ವಾಸು.

ಹಾಗೆಯೇ ನಾಲ್ಕು ದಿನಗಳು ಕಳೆದು ಹೋದವು.

○ ○ ○ ●

ರಿಸಲ್ಟ್ಸ್ ನೋಡಿದ ಪ್ರಸಾದರಾವ್‌ಗೆ ಸಂತೋಷದಿಂದ ಮಾತು ಹೊರಡದಾಯಿತು. ಕೇಳಿದವರಿಗೂ, ಕೇಳದಿದ್ದವರಿಗೂ "ನಮ್ಮ ವಾಸು ನಂಬರ್ ಇದೇ ನೋಡಿ. ಫಸ್ಟ್ ಕ್ಲಾಸಿನಲ್ಲಿ ಪಾಸಾಗಿದ್ದಾನೆ" ಎಂದು ಹೇಳುತ್ತಿದ್ದರು. "ಡಿನ್ನರ್ ಕೊಡಬೇಕು, ಕೊನೇಪಕ್ಷ ಒಳ್ಳೆ ಪಾರ್ಟಿಯಾದರೂ ಕೊಡಬೇಕು." ಪಾಸಾದುದಕ್ಕೆ ವಾಸುವನ್ನು ಅಭಿನಂದಿಸುತ್ತಾ ಪಾರ್ಟಿ ಕೊಡೆಂದು ತಗಾದೆ ಮಾಡಿದರು ಸ್ನೇಹಿತರು.

"ಸಂಜೆ ಮೂರು ಗಂಟೆಗೆ ಇಂತಹ ಹೋಟೆಲಿನಲ್ಲಿ ನಿಮಗೆಲ್ಲಾ ಪಾರ್ಟಿ" ಎಂದು ಎಲ್ಲರನ್ನೂ ಆಹ್ವಾನಿಸಿದರು ಪ್ರಸಾದರಾವ್. ಪರೀಕ್ಷೆಯಲ್ಲಿ ಫಸ್ಟ್ ಕ್ಲಾಸ್‌ನಲ್ಲಿ ಪಾಸಾದುದಕ್ಕೆ ಸಂತೋಷಪಡುವುದಕ್ಕೆ ಬದಲು ಕೆಲಸ ಹೇಗೆ ಸಂಪಾದಿಸುವುದು ಎಂದು ದೀರ್ಘಾಲೋಚನೆಯಲ್ಲಿ ಮುಳುಗಿದ್ದ ವಾಸು- ಮಾವನಿಗೆ ಕಾಗದ ಬರೆಯೋಣ. ಅಲ್ಲೇ ಕಾಲೇಜಿನಲ್ಲಿ ಎಮ್.ಎ.ಗೆ ಅಪ್ಲೈ ಮಾಡೋಣ.....ತಿಳಿದವರಿಗೆ ಸ್ಕೂಟರ್ ಬೇಕು ಅಂತ ಹೇಳ್ತೀನಿ.....ಹುಷಾರಾಗಿ ನಾಲ್ಕು ದಿನ ಪ್ರಾಕ್ಟೀಸ್ ಮಾಡಿದರೆ.....ಎಂದು ಇನ್ನೂ ಏನೇನೋ ಹೇಳಬೇಕೆಂದಿದ್ದ ಪ್ರಸಾದರಾವ್‌ಗೆ, "ಇನ್ನು ಮುಂದೆ ಓದೋದಿಲ್ಲ, ಅಪ್ಪಾ!" ಎಂದ ವಾಸುವಿನ ಮಾತನ್ನು ಕೇಳಿ, "ಏನಂತಿದ್ದೀ?" ಎಂದರು ಪ್ರಸಾದರಾವ್.

"ಇನ್ನು ಮುಂದೆ ಓದೋದಿಲ್ಲ" ತಲೆ ಬಗ್ಗಿಸಿ ಕೂತಿದ್ದ ವಾಸುವಿನ ಕಡೆ ಪರಿಶೀಲನಾ ದೃಷ್ಟಿಯಿಂದ ಕೆಲಕ್ಷಣ ನೋಡಿದ ಪ್ರಸಾದರಾವ್‌ಗೆ ಏನೂ ಅರ್ಥವಾಗಲಿಲ್ಲ.

"ಯಾಕೆ ಓದೋದಿಲ್ಲ? ಓದಬೇಕಾದವ್ನೇ, ಎಷ್ಟೇ ಅಡ್ಡಿ ಆತಂಕ ಬಂದರೂ ನೀನು ಐ. ಎ. ಎಸ್. ಆಫೀಸರ್ ಆಗೋವರೆಗೂ ನನ್ನ ಮಾತು ಕೇಳಲೇಬೇಕು." ಆಜ್ಞಾಪಿಸುತ್ತಿರುವಂತೆ ದೃಢವಾದ ಧ್ವನಿಯಲ್ಲಿ ಹೇಳಿದರು ಪ್ರಸಾದರಾವ್.

ತಲೆ ಎತ್ತಿ ಒಮ್ಮೆ ಪ್ರಸಾದರಾವ್ ಕಡೆ ನೋವಿನಿಂದ ನೋಡಿ ಪುನಃ ನಿಧಾನವಾಗಿ ತಲೆ ಬಗ್ಗಿಸಿ ಭೂಮಿಯನ್ನು ದಿಟ್ಟಿಸುತ್ತಾ "ಕ್ಷಮಿಸಿ, ಇನ್ನು ಓದಲಾರೆ" ಎಂದ ವಾಸು ಧೈರ್ಯವನ್ನು ತಂದುಕೊಂಡು.

"ಕಾರಣ ?" ಪ್ರಸಾದರಾವ್ ಹುಬ್ಬುಗಳು ಗಂಟಿಕ್ಕಿದವು.

ಏನೋ ಹೇಳಬೇಕೆಂದು ಪ್ರಸಾದರಾವ್ ಕಡೆ ನೋಡಿದ ವಾಸುವಿಗೆ ಭಯವಾಗಿ ತಲೆ ತಗ್ಗಿಸಿಬಿಟ್ಟ. ಅಂದಿನವರೆಗೂ ತಂದೆಯ ಪ್ರಸನ್ನವದನವನ್ನೇ ನೋಡಿದ್ದ ವಾಸು, ಕೆಂಪಾದ ಪ್ರಸಾದರಾವ್ ಮುಖವನ್ನು ನೋಡಿ "ಅಬ್ಬಾ ! ಅಪ್ಪಾ ಕೋಪ ಮಾಡ್ಕೊಂಡ್ರೆ ಎಷ್ಟು ಭಯಂಕರವಾಗಿ ಕಾಣಿಸ್ತಾರೆ !" ಎಂದುಕೊಂಡ ಅವನ ಹೃದಯ ಡವಡವ ಹೊಡೆದುಕೊಂಡಿತು.

"ವಾಸೂ ! ಏತಕ್ಕೆ ಓದೋದಿಲ್ಲ ?" ವಾಸು ಭಯಪಡುತ್ತಿದ್ದಾನೆಂದು ಗ್ರಹಿಸಿದ ಪ್ರಸಾದರಾವ್ ಮೃದುವಾಗಿ ಕೇಳಿದರು.

"ನಾನು ಉದ್ಯೋಗ ಮಾಡಿ ನನ್ನ ಕಾಲ ಮೇಲೆ ನಾನು ನಿಲ್ಲಬೇಕು ಅಂದ್ಕೊತಿದ್ದೀನಿ." ಕಳವಳದ ಧ್ವನಿಯಲ್ಲಿ ತಡವರಿಸುತ್ತಾ ಹೇಳಿದ ವಾಸು.

ಗೊಳ್ಳನೆ ನಕ್ಕು, "ಶಭಾಷ್, ನಿನ್ನ ಕಾಲಮೇಲೆ ನೀನು ನಿಂತ್ಕೋಬೇಕು ಅಂದ್ಕೋತಿದ್ದೀಯ !" ಎಂದು ಒತ್ತಿ ಒತ್ತಿ ಹೇಳುತ್ತ ಶುಷ್ಕನಗೆ ನಕ್ಕರು ಪ್ರಸಾದರಾವ್.

ಆ ನಗು ಎಂದಿನ ಮಾಮೂಲು ನಗು ಅಲ್ಲ. ಕ್ಷಣ ಕ್ಷಣವೂ ಸೋತು ಹೋಗುತ್ತಿರುವ ಮನುಷ್ಯ ಭಂಡತನದಿಂದ ನಗುವ ನಗು. ಮನುಷ್ಯರನ್ನೂ, ಪ್ರಪಂಚವನ್ನೂ ಲೆಕ್ಕಿಸದಿರುವ ನಗು.

ಬೆದರುತ್ತಿರುವ ಹೃದಯವನ್ನು ಒತ್ತಿ ಹಿಡಿದುಕೊಳ್ಳುತ್ತಾ, ಚದುರಿ ಹೋದ ಧೈರ್ಯವನ್ನು ಕೂಡಿಹಾಕುತ್ತಾ, ಎಲ್ಲೋ ನೋಡುತ್ತಾ ಮೌನವಾಗಿ ನಿಂತಿದ್ದ ವಾಸು, ಎಲ್ಲವನ್ನೂ ಒದಗಿಸಿ ಓದು ಎಂದು ಪ್ರೋತ್ಸಾಹಿಸುತ್ತಿರುವ ತಂದೆ, ಅತಿ ದೀನ ಸ್ಥಿತಿಯಲ್ಲಿ ದಿನ ಕಳೆಯುತ್ತಿರುವ ತಾಯಿ, ಅವನ ಮನಸ್ಸು ಬಿರುಗಾಳಿಗೆ ಲತೆ ಅಲ್ಲಾಡುವಂತೆ ಅಲ್ಲಾಡುತ್ತಿತ್ತು.

ಅಂದು ಓದಿಸು ಎಂದು ಅತ್ತ ಮಗ ಇಂದು ತಾನು ಓದು ಎಂದು ಹೇಳುತ್ತಿದ್ದರೆ ತಿರಸ್ಕರಿಸುತ್ತಿದ್ದಾನೆ. ಇದನ್ನು ಸಹಿಸಲಾರದ ಪ್ರಸಾದರಾವ್ ಮನಸ್ಸು ಬೆಂದುಹೋಗುತ್ತಿತ್ತು. ಬೆಂದುಹೋಗುತ್ತಿರುವ ಮನಸ್ಸು ಅನೇಕ ವಿಧವಾಗಿ ಊಹಿಸಿತು. ತನ್ನಿಂದ ತನ್ನ ಮಗನನ್ನು ಯಾರೋ ಬಲವಂತದಿಂದ ಎಳೆದೊಯ್ಯುತ್ತಿರುವಂತೆ ಸಂಕಟಪಟ್ಟರು. ನಿಗ್ರಹ ಕಳೆದುಕೊಂಡ ಪ್ರಸಾದರಾವ್ ನಡುಗುತ್ತಿರುವ ತುಟಿಗಳಿಂದ, "ಹಾಗೆ ಯಾಕೆ ಅಂದ್ಕೋತಿದ್ದಿ?

ನಿನಗೇನು ಕಡಿಮೆ ಮಾಡಿದ್ದೀನಿ, ನಿನ್ನ ಕಾಲ ಮೇಲೆ ನೀನು ನಿಂತ್ಕೊಳ್ಳೋ ದಕ್ಕೆ ? ನನ್ನ ಹಣ ತಿನ್ನೋದು ಅಷ್ಟು ತಪ್ಪು ಅನ್ನಿಸ್ತಿದೆಯೋ? ನಿನಗೆ ನನ್ನ ಹಣ, ನಾನು ಬೇಕಿಲ್ಲದೆ ಇರುವಾಗ ನನಗೆ ಈ ವ್ಯಾಪಾರ ಯಾಕೆ, ಈ ವ್ಯವಹಾರ ಯಾಕೆ ? ನೀನು ಐ. ಎ. ಎಸ್. ಆಫೀಸರಾಗಿ ಹೆಂಡತಿ ಮಕ್ಕ ಳೊಂದಿಗೆ ಸಂತೋಷದಿಂದ ಸುಖವಾಗಿರಬೇಕೆಂದೂ, ನಿನ್ನ ತೊಡೆಯ ಮೇಲೆ ನನ್ನ ಪ್ರಾಣ ಹೋಗಬೇಕೆಂದೂ ಆಶಿಸಿದೆನಲ್ಲಾ! 'ನಾನೇನು ಪಾಪ ಮಾಡ್ದೆ ?' ನೀವೆಲ್ಲಾ ನನ್ನನ್ಯಾಕೆ ಹೀಗೆ ಗೋಳಾಡಿಸ್ತೀರಿ? ಇಷ್ಟಕ್ಕೆ......ಇಷ್ಟಕ್ಕೆ ಒಂಟಿ ಯಾಗಿ ಹೇಗೋ ಬದುಕುತ್ತಿದ್ದ ನನ್ನ ಹತ್ತಿರಕ್ಕೆ ಯಾಕೆ ಬಂದೆ? ಇಲ್ಲ......ಮೋಸ ಹೋದೆ......ಇದೆಲ್ಲಾ ಮೋಸ....ನೀವೆಲ್ಲಾ ಸೇರಿ ನನ್ನನ್ನ ಫೂಲ್ ಮಾಡಿದಿರಿ ......ನಿನ್ನ ಕಾಲ ಮೇಲೆ ನೀನು ನಿಲ್ಲೋದು ಅಂದ್ರೆ ನನ್ನಿಂದ ದೂರ ಹೋಗ ಬೇಕು ಅಂತ ತಾನೆ ?" ಎನ್ನುತ್ತಾ ಕಲ್ಲಿನ ಮಳೆಯಂತೆ ಸುರಿದ ಆ ವಾಗ್ಬಾ ಣಗೆ ಹೆದರಿ ನಿಶ್ಚೇತನನಾಗಿ ನಿಂತಿದ್ದ ವಾಸು......"ಅಲ್ಲ, ಅಪ್ಪಾ !" ಎಂದ ನಡುಗುತ್ತಾ.

"ಅಪ್ಪಾ......ಅಪ್ಪ ಯಾಕೆ ನಿನಗೆ ? ಅಪ್ಪನ್ನ ಮೀರಿಸಿದ ದುರಹಂಕಾರಿ ಅಮ್ಮ ಇದ್ದಾಳೆ ನಿನಗೆ."

ಸಹಿಸಲಾರದ ನೋವಿನಿಂದ, "ಅಪ್ಪಾ !" ಎಂದ ವಾಸು.

ತಡೆಯಿಲ್ಲದೆ ಮಾತನಾಡಿದ ಪ್ರಸಾದರಾವ್‌ಗೆ ಕೆಮ್ಮು ಬಂದು ಎದೆ ಯನ್ನು ಒತ್ತಿ ಹಿಡಿದುಕೊಂಡರು. ಅವರ ಕೊರಳನ್ನು ನಿಧಾನವಾಗಿ ನೇವರಿ ಸುತ್ತಾ, "ಆವೇಶಪಟ್ಟು ನಾನಾ ಮಾತಾಡಿ ನನ್ನ ಮನಸ್ಸನ್ನು ನೋಯಿಸಿದಿರಿ, ನೀವೂ ನೊಂದ್ಕೋತಾ ಇದ್ದೀರಿ. ಇದೋ ಬಾಯಿ ತೆರೆಯಿರಿ, ಸ್ವಲ್ಪ ನೀರು ಕುಡಿಯಿರಿ. ಚಿಕ್ಕ ವಯಸ್ಸಿನಲ್ಲಿ ನಿಮ್ಮಿಂದ ದೂರವಾಗಿಯೇ ಜೀವಿಸಿದೆ. ಇನ್ಮೇಲೆ ನಿಮಗೆ ಹೇಗೆ ದೂರವಾಗಬಲ್ಲೆ ?" ಎನ್ನುತ್ತಾ ಒಂದು ಲೋಟ ನೀರನ್ನು ಪ್ರಸಾದರಾವ್‌ಗೆ ಕುಡಿಸಿದ.

ಕೆಲವು ಕ್ಷಣ ಕಣ್ಣು ಮುಚ್ಚಿಕೊಂಡು, ಈಸಿಛೇರಿನಲ್ಲಿ ಒರಗಿ ಆಯಾಸ ಆವೇಶ ಕಡಿಮೆಯಾದ ಮೇಲೆ ಪ್ರಸಾದರಾವ್ ಕಣ್ಣು ತೆರೆದರು. ಕೆಂಪಾದ ಕಣ್ಣುಗಳೂ, ಒಪ್ಪೆ ಕಣ್ಣೆವೆಗಳೂ ಸರಸರನೆ ಕರವಸ್ತ್ರದಿಂದ ಮುಖ ಒರೆಸಿ ಕೊಂಡ ವಾಸು. ಮಗನನ್ನು ನೋಡಿದ ಪಿತೃಹೃದಯ ಕರಗಿ ನೀರಾಗಿ,

"ತಾಯಿ ತಂದೆ ಇಲ್ದೆ ಇದ್ದವನಾದ್ರೂ, ಈ ವಯಸ್ಸಿನಲ್ಲಿ ಇಷ್ಟು ಸಂಕಟಪಟ್ಟಿರಲಿಲ್ಲ ನಾನು" ಗೊಣಗಿದಂತೆ ನುಡಿದರು ಪ್ರಸಾದರಾವ್.

"ನಾನೇನು ಪಾಪ ಮಾಡ್ದೆ? ಏನು ತಪ್ಪು ಮಾಡ್ದೆ? ನನ್ನನ್ಯಾಕೆ ಹೀಗೆ ಹಿಂಸೆಪಡಿಸ್ತಿದ್ದೀರಿ ನೀವೂ, ಅಮ್ಮ ಇಬ್ರೂ! ಅಲ್ಲಾ, ನಿಮ್ಮ ಹೊಟ್ಟೇಲಿ ನಾನು ಹುಟ್ಟಿದ್ದೇ ತಪ್ಪಾ?......ಆಗ್ಲೆ ಕತ್ತು ಹಿಸುಕಿ ಸಾಯಿಸಿದ್ದಿದ್ರೆ ಮುಗಿದುಹೋಗ್ತಿತ್ತಲ್ಲ!"

"ವಾಸೂ" ಕಣ್ಣೀರು ಕೆನ್ನೆಯ ಮೇಲೆ ಧಾರಾಕಾರವಾಗಿ ಸುರಿಯುತ್ತಿರಲು ನಡುಗುತ್ತಾ ನಿಂತಿದ್ದ ವಾಸುವನ್ನು ಬರಸೆಳೆದು ಚಲಿಸಿಹೋದ ತನ್ನ ಹೃದಯಕ್ಕೆ ಗಟ್ಟಿಯಾಗಿ ಅದುಮಿ ಹಿಡಿದುಕೊಂಡರು ಪ್ರಸಾದರಾವ್. ತೂಬು ಬಿದ್ದ ಕೆರೆಯಂತೆ ಹೃದಯದಲ್ಲಿ ತುಂಬಿದ್ದ ದುಃಖ ಕಣ್ಣುಗಳಲ್ಲಿ ಹರಿಯಲಾರಂಭಿಸಿತು ವಾಸುವಿಗೆ. "ಛೆ! ಛೆ! ಇದ್ಯಾಕೆ? ನಾನೇನು ಹೆಣ್ಣು ಹುಡುಗೀನಾ? ಅಂತ ಕೇಳಿದ್ದೆ ಒಂದು ಸಲ......ಈಗ ಥೇಟ್ ಹೆಣ್ಣು ಹುಡುಗಿಯ ಹಾಗೆ ಕಾಣ್ತಿದ್ದಿ ನನಗೆ......ನಿಮ್ಮ ಅಮ್ಮ......ನಿಮ್ಮ ಅಮ್ಮ ಕೆಲಸಕ್ಕೆ ಸೇರು ಅಂತ ಹೇಳಿದ್ದಾಳಲ್ವೇ?" ವಾಸುವಿನ ಕಣ್ಣೀರನ್ನು ಒರೆಸಿ ಅವನ ಮುಖವನ್ನು ತನ್ನ ಕೈಯಲ್ಲಿ ಹಿಡಿದುಕೊಂಡು, ಆ ಕಣ್ಣುಗಳನ್ನು ದಿಟ್ಟಿಸುತ್ತಾ ಪ್ರಶ್ನಿಸಿದರು. ಪ್ರಸಾದರಾವ್. ತಲೆ ಅಡ್ಡಲಾಗಿ ತಿರುಗಿಸಿದ ವಾಸು.

"ಮತ್ತೆ?" ಅವನನ್ನು ಬಿಟ್ಟು, ಹುಬ್ಬು ಗಂಟಿಕ್ಕಿ ಕೇಳಿದರು ಪ್ರಸಾದರಾವ್. ಮೌನವಾಗಿ ತಲೆತಗ್ಗಿಸಿ ನಿಂತಿದ್ದ ವಾಸು.

"ನಾನು ಕಳುಹಿಸೋ ಹಣ ಸಾಲ್ದು ಅಂತ್ಲಾ? ನಿನಗೆ ಇನ್ನೂ ಹೆಚ್ಚು ಹಣ ಬೇಕಾಗೋ ಅಂತಹ ಅಭ್ಯಾಸಗಳೇನಾದರೂ ಇದೆಯಾ?"

"ಅದೇನು ಹಾಗೆ ಕೇಳ್ತೀರಲ್ಲ ಅಪ್ಪಾ?" ನಗಲು ಪ್ರಯತ್ನಿಸಿದ ವಾಸುವಿನ ಮುಖ ರೋಷದಿಂದ ಕೆಂಪಾಗಿತ್ತು.

"ಮತ್ತೆ ಕಾರಣ ಏನು.... ನೀನು ಉದ್ಯೋಗ ಮಾಡಬೇಕಾದ ಅವಶ್ಯಕತೆ ಏನು? ಫಸ್ಟ್ ಕ್ಲಾಸಿನಲ್ಲಿ ಪಾಸ್ ಮಾಡಿರೋ ನಿನಗೆ ಉತ್ಸಾಹ ಶಕ್ತಿ ಇಲ್ಲಾಂದ್ರೆ ಹೇಗೆ ಸಂಬೋಧು? ನನ್ನ ಮಗನಾದ್ರೆ ರಾಜಶೇಖರನ ಮಾತನ್ನು ಸುಳ್ಳು ಮಾಡು, ಕಂಡಕ್ಟರ್ ಮಗನೂ ಕಲೆಕ್ಟರ್ ಆಗಬಲ್ಲ ಅಂತ ತೋರಿಸು. ನನ್ನ ಕಾಲ ಮುಗಿದುಹೋಗಿದೆ. ನನ್ನ ಜೀವನ ನನ್ನ ನಿಸ್ವಾರ್ಥವಾದ ಈ ಈ ಬದುಕು ಕಾಲಗರ್ಭದಲ್ಲಿ ಲೀನವಾಗುವ ಮೊದಲು ನನ್ನ ಪ್ರಾಣ

ಹೋಗುವ ಮುನ್ನ ಈ ಬಸ್ ಕಂಡಕ್ಟರ್‌ನ, ಮಾವನ ಮನೆ ಅಳಿಯನನ್ನು...... ಅವರ ಎದುರಿನಲ್ಲಿ ಸೋತು ಒಂದು ನಾಯಿಯಂತೆ ಬದುಕಿದವನ್ನ......ಒಂದು ಸಲ .....ಒಂದು ಸಲ ತಲೆ ಎತ್ತೋ ಹಾಗೆ ಮಾಡು. ಗರ್ವದಿಂದ ಅವರ ಮಧ್ಯೆ ಒಂದು ಕ್ಷಣ ಕಳೆಯಲಿ ನನ್ನ ಜೀವನ ವಾಸೂ.....! ರಾಜು.....ನಿನ್ನ ದೊಡ್ಡ ಮಾವನ ಮುಂದೆ ಕಲೆಕ್ಟರ್ ತಂದೆಯಾಗಿ ಪ್ರತ್ಯಕ್ಷವಾಗ್ತೀನಿ ನಾನು......" ಆವೇಶದಿಂದ ಶತಪಥ ತಿರುಗುತ್ತಿದ್ದ ಪ್ರಸಾದರಾವ್ ಕಡೆ ಮೌನದಿಂದ ನೋಡುತ್ತಿದ್ದ ವಾಸು.

ಕ್ಷಣ ಆಯಾಸವಾದಂತೆ ಉಸಿರು ತೆಗೆದು ಬಿಟ್ಟು, "ನಿಮ್ಮ ತಾತನ ಸ್ಥಾನ, ಮಾನ, ನಿಮ್ಮ ತಾತನ ಮನೆ ಐಶ್ವರ್ಯ. ನಿಮ್ಮ ಅಮ್ಮ..... ನಿಮ್ಮ ಅಮ್ಮನ ಅಹಂ......ಅನುಮಾನ, ಈರ್ಷ್ಯೆ, ಅಸೂಯೆ, ನಿರ್ಲಕ್ಷ್ಯ......ಗರ್ವ..... ಎಲ್ಲಾ ಸೇರಿ ನನ್ನ ಜೀವನವನ್ನು ಹಾಳುಮಾಡಿದ್ದು ವಾಸು ! ಫಲತಃ ಆ ಮನೆಯಿಂದ ಹೊರದೂಡಲ್ಪಟ್ಟ ನಾನು, ಸಾಯುವ ಸಾಹಸವಿಲ್ಲದೆ ಹೊಟ್ಟೆ ಪಾಡಿಗಾಗಿ ವೇಷ ಬದಲಾಯಿಸಿ ಬಸ್ ಕಂಡಕ್ಟರ್ ಆದೆ. ತಪ್ಪಾ ? ಅದು ಉದ್ಯೋಗ ಅಲ್ವೇನು ? ಹೋಗ್ಲಿ ಹಾಗಾಗದೆ ಇದ್ದಿದ್ದಲ್ಲಿ ಗುಮಾಸ್ತೆ ಯಾಗಿಯೇ ಜೀವನ ನಡೆಸ್ತಾ ಇದ್ದೆ. ಆಗ ನಿನ್ನನ್ನು ದೊಡ್ಡ ದೊಡ್ಡ ಓದು ಓದಿಸೋದಕ್ಕೆ ಕೂಡ ಕಷ್ಟವೇ ಆಗ್ತಿತ್ತು. ಎಲ್ಲಾ ಒಳ್ಳೆಯದಕ್ಕೇ ಏನಂತೀ?" ಎನ್ನುತ್ತಾ ತನ್ನನ್ನು ತಾನು ಸಮರ್ಥಿಸಿಕೊಂಡ ಪ್ರಸಾದರಾವ್ ನಿರಾಳವಾಗಿ ಉಸಿರು ಬಿಟ್ಟು ನಕ್ಕರು.

ಹೀಗೆ ಬಿಟ್ಟು ಹೊರಟು ಹೋದ್ರು ಅಂತ ಅವರು ಇವರು ಮಾತನಾಡಿ ಕೊಳ್ಳುತ್ತಿದ್ದುದರ ಜ್ಞಾಪಕ ಬಂದ ವಾಸು ಮೌನವಾಗಿ ತಲೆ ತಗ್ಗಿಸಿದ.

"ಈ ತಿಂಗಳಿನಲ್ಲಿ ಸ್ಕೂಟರ್ ತಕ್ಕೊಡ್ತೀನಿ—ಯೂನಿವರ್ಸಿಟಿ ಮಾವನ ಮನೆಗೆ ಬಹಳ ದೂರ ಅಂದ್ಕೋತೀನಿ. ಏಳು. ಮುಖ ತೊಳೆದು ಸ್ವಲ್ಪ ಕಾಫಿ ಕುಡಿ, ಆಮೇಲೆ ಮಾತಾಡೋಣ. ಯಾಕೋ ಒಂದೊಂದು ಸಲ ನನಗೆ ಹುಚ್ಚು ಹಿಡಿದ ಹಾಗಾಗುತ್ತೆ. ಏನೇನೋ ಮಾತನಾಡಿಬಿಡ್ತೀನಿ. ಎನ್ನುತ್ತಾ ಬೇಗ ಬೇಗ ತಣ್ಣೀರಿನಲ್ಲಿ ಮುಖ ತೊಳೆದುಗೊಂಡರು ಪ್ರಸಾದ ರಾವ್.

ಕಾಫಿ ಕಪ್ಪನ್ನು ಕೊಡುತ್ತಾ "ಓದೋದು ಅಂದ್ರೆ ಬೇಸರವಾ ವಾಸೂ" ನಗುತ್ತಾ ಪ್ರೀತಿಯಿಂದ ಮಾಮೂಲಿನ ಧ್ವನಿಯಲ್ಲಿ ಕೇಳಿದರು ಪ್ರಸಾದರಾವ್,

"ಓದೋದು ಬೇಸರವಾ ? ಓದಿಸೋವರ ದಯೆ ಚೆನ್ನಾಗಿರಬೇಕಷ್ಟೇ !" ಉದಾಸೀನವಾಗಿ ಉತ್ತರಿಸಿದ.

"ನನ್ನ ಮೇಲೆ ಕೋಪ ಬಂದಿದೆ ಅಲ್ವಾ ವಾಸು ?"

"ಕೋಪ ಬಂದು ನಾನೇನು ಮಾಡಬಲ್ಲೆ ?"

"ಓದು ಬಿಟ್ಟು ಕೆಲಸಕ್ಕೆ ಸೇರೋದೇ ನನ್ನನ್ನು ಶಿಕ್ಷಿಸೋದಕ್ಕೆ ಆಯುಧ."

"ನಿಮ್ಮ ಇಷ್ಟದ ಪ್ರಕಾರವೇ ನಡೀಲಿ ಅಪ್ಪ !"

ಪ್ರಸಾದರಾವ್ ಹೃದಯ ತುಂಬಿಹೋಯಿತು. ತನ್ನ ಮಾತಿಗೆ ಗೌರವ ಕೊಡುವ ತನ್ನ ಮಗ, "ಹೋಟೆಲ್‌ನಲ್ಲಿ ಪಾರ್ಟಿ ಕೊಡ್ತೀನಿ ಅಂತ ಹೇಳ್ದೆ ಅಲ್ವಾ ? ಎಲ್ರೂ ಎದುರುನೋಡ್ತಿರ್ತಾರೆ, ಹೊರಡೋಣ, ರೆಡಿಯಾಗು" ಎಂದರು ಪ್ರಸಾದರಾವ್.

ಸಂಭ್ರಮದಿಂದ ನಡೆಯಿತು ಪಾರ್ಟಿ. ಒಳ್ಳೆಯ ಪಾರ್ಟಿ ಕೊಟ್ಟದ್ದಕ್ಕೆ ಪ್ರಸಾದರಾವನ್ನೂ, ಫಸ್ಟ್ ಕ್ಲಾಸಿನಲ್ಲಿ ಪಾಸು ಮಾಡಿದ್ದಕ್ಕೆ ವಾಸುವನ್ನೂ ಅಭಿನಂದಿಸುತ್ತಾ ಎಂ.ಎ. ಕೂಡ ಫಸ್ಟ್ ಕ್ಲಾಸಿನಲ್ಲಿ ಪಾಸಾಗಲಿ ಎಂದು ಆಶೀರ್ವದಿಸಿದರು ಬಂದಿದ್ದ ಅತಿಥಿಗಳು.

ತಾಯಿಯನ್ನು ಸುಖಪಡಿಸಲು ಉದ್ಯೋಗ ಮಾಡುತ್ತೇನೆ ಎಂದು ಮನಸ್ಸಿನಲ್ಲಿ ಮಾಡಿಕೊಂಡಿದ್ದ ನಿಶ್ಚಯ ಕ್ಷಣದಲ್ಲಿ ಎಗರಿಹೋಯಿತು. ಪುನಃ ಯೂನಿವರ್ಸಿಟಿ ಓದು.....ನಿಟ್ಟುಸಿರು ಬಿಟ್ಟ ವಾಸು.

ಲೆಖ್ಖ ಪತ್ರಗಳನ್ನು ಪರಿಶೀಲಿಸುತ್ತಾ ಕುಳಿತಿದ್ದ ಪ್ರಸಾದರಾವ್ ಘಟಕ್ಕನೆ ಏನೋ ಜ್ಞಾಪಕ ಬಂದು ವಾಸುವಿಗೆ ಹೇಳಿಕಳುಹಿಸಿದರು.

"ಅಪ್ಪಾ, ಕರೆದಿರಂತೆ ?" ಪ್ರಸಾದರಾವ್ ಪ್ರೈವೇಟ್ ರೂಮಿನೊಳಗೆ ಪ್ರವೇಶಿಸುತ್ತಾ ಕೇಳಿದ ವಾಸು.

"ಊಂ, ಬಂದ್ಯಾ ! ನೆನ್ನೆ ನಮ್ಮ ಅಂಗಡಿಗೆ ಯಾವುದೋ ಒಳ್ಳೊಳ್ಳೆ ಪ್ಯಾಂಟ್ ಬಟ್ಟೆಗಳು ಬಂದಿವೆಯಂತೆ. ಯಾವಾಗ್ಲೋ ಹೋದ ವರ್ಷ ನಾಲ್ಕು ಜೊತೆ ತಗೊಂಡಿದ್ದೆ. ಪುನಃ ಏನೂ ಕೊಂಡ್ಕೊಂಡಿಲ್ಲವಲ್ಲಾ ! ಒಳ್ಳೆ ಬಟ್ಟೆ ನಾಲ್ಕು ಜೊತೆ ತಗೊಂಡು ಟೈಲರ್‌ಗೆ ಹೊಲಿಯೋದಕ್ಕೆ ಹಾಕ್ಬಿಡು" ಎಂದವರು ಹಾಗೇ ಮೌನವಾಗಿ ನಿಂತುಬಿಟ್ಟಿದ್ದ ವಾಸುವನ್ನು ನೋಡಿ ನಗುತ್ತಾ "ನನಗೆ ಗೊತ್ತು ! ಎಲ್ಲರ ಮಕ್ಕಳೂ ಅದು ಬೇಕು, ಇದು ಬೇಕು ಅಂತ ರಗಳೆ ಮಾಡ್ತಾರೆ. ನನ್ನ ಮಗ ಏನೂ ಬೇಡಾಂತ ರಗಳೆ ಮಾಡ್ತಾನೆ. ಎಷ್ಟು

ಬೆಲೆಯಾದ್ರೂ ಪರವಾಗಿಲ್ಲ, ನಿನಗಿಷ್ಟವಾದದ್ದನ್ನ ಕೊಂಡ್ಕೋ......ಈ ವರ್ಷ ನಮ್ಮ ಭಾಗಕ್ಕೆ ಇಪ್ಪತ್ತೈದು ಸಾವಿರ ರೂಪಾಯಿ ಲಾಭ ಬಂದಿದೆ.....ನೀನು ಡಾಕ್ಟರೇಕಾಗಿರಬೇಕು. ಹತ್ತು ರೂಪಾಯಿ ಖರ್ಚು ಮಾಡಿದರೆ ಹೇಗೆ ಅಂತ ಭಯಪಡಬಾರದು" ಎಂದರು ಪ್ರಸಾದರಾವ್.

"ನನ್ನನ್ನ ನನ್ನಂತೆ ಬದುಕಲು ಬಿಡಿ ಅಪ್ಪಾ !" ಥಟಕ್ಕನೆ ಹಿಂದಿರುಗಿ, "ವಾಸೂ ಮಗೂ, ಕಂದಾ !" ಎನ್ನುತ್ತಿದ್ದ ಪ್ರಸಾದರಾವ್ ಕರೆ ಕೇಳಿಸಿ ಕೊಳ್ಳದೆ ಹೊರಟುಹೋದ ವಾಸು.

ಬೇಸರದಿಂದ ಟೇಬಲ್ ಮೇಲಿದ್ದ ಪುಸ್ತಕಗಳನ್ನೆಲ್ಲಾ ಕಟ್ಟಿಟ್ಟು ಆ ಕೊಠಡಿಗೆ ಬೀಗ ಹಾಕಿದರು ಪ್ರಸಾದರಾವ್.

೦ ೦ ೦ ೦

"ನಮ್ಮ ವಾಸು ಕಾಗದ ಬರೀಲಿಲ್ವಾ ಮಧೂ?" ಕೇಳಿದರು ಜಾನಕಮ್ಮ.

"ಇಲ್ಲಿರೋವಾಗ ಸುಮ್ನೆ ಹೇಳ್ತಾನೆ ಅಷ್ಟೆ. ಅಲ್ಲಿಗೆ ಹೋದ್ಮೇಲೆ ಅವನಿಗೆ ಅಮ್ಮನ ಜ್ಞಾಪಕ ಬರೋದಿಲ್ಲ. ಹೋಗಲಿ ಬಿಡು. ಈ ಅಮ್ಮ ಏನಾದ್ರೂ ಕೊಡ್ಬೇಕಾ ಮಾಡ್ಬೇಕಾ ?" ನಿಷ್ಠುರ ಧ್ವನಿಯಲ್ಲಿ ಅಂದು ಕಣ್ಣೊರಸಿಕೊಂಡಳು ಮಧುಮತಿ.

"ರಿಸಲ್ಟ್ಸ್ ಬಂದಿದೆಯಂತೆ ಫಸ್ಟ್ ಕ್ಲಾಸಿನಲ್ಲಿ ಪಾಸ್ ಮಾಡಿದ್ದಾನಂತೆ"

"ಯಾರು ಹೇಳಿದರು ?" ಆತುರದಿಂದ ಕೇಳಿದಳು ಮಧುಮತಿ.

"ರಾಜು, ಅವನ ಹೆಂಡ್ತಿ ಮಾತಾಡ್ಕೋತಾ ಇದ್ರು, ಜಯಾನ ಕೇಳಿದ್ದಕ್ಕೆ ಹೌದು ಅಂದ್ಲು."

ತಾಯಿಯ ಮಾತು ಮುಗಿಯುವ ಮೊದಲೇ ಆ ಮನೆಯ ಮತ್ತೊಂದು ಭಾಗದಲ್ಲಿದ್ದ ರಾಜಶೇಖರ್ ಮನೆಗೆ ಪೇಪರ್‌ಗೋಸ್ಕರ ಹೋದಳು ಮಧುಮತಿ.

"ಜಯಾ, ಪೇಪರ್ನಲ್ಲಿ ಬಿ.ಎ. ರಿಸಲ್ಟ್ ಬಂದಿದೆಯಾ ?" ಕೇಳಿದಳು ಮಧುಮತಿ.

"ಹೌದತ್ತೆ, ವಾಸು ಫಸ್ಟ್ ಕ್ಲಾಸಿನಲ್ಲಿ ಪಾಸ್ ಮಾಡಿದ್ದಾನೆ; ನಿನಗೆ ಗೊತ್ತಿಲ್ವಾ?" ಎನ್ನುತ್ತಾ ಪೇಪರ್ ಕೊಟ್ಟಳು ಜಯ.

ರಿಸಲ್ಟ್ ಬಂದು ಆಗಲೇ ಮೂರು ದಿವಸವಾಗಿದೆ! ಒಂದು ಕಾರ್ಡ್ ಗೀಚಿ ಹಾಕಿದ್ದಿದ್ರೆ ಸಂತೋಷಪಡ್ತಿರಲಿಲ್ವಾ? ತಂದೇ, ಶ್ರೀನಿವಾಸಾ, ನನ್ನ ಮಗನ್ನ ನೀನೇ ಕಾಪಾಡ್ತಾ ಇದ್ದೀಯಪ್ಪ!' ಎಂದುಕೊಳ್ಳುತ್ತಾ ಕಣ್ಣು ಮುಚ್ಚಿ ಕೈ ಜೋಡಿಸಿದಳು ಮಧುಮತಿ.

"ನೀನೂ ಪೇಪರ್ ನೋಡ್ತಿರ್ತಿ ಅಂದ್ಕೊಂಡೆ. ವಾಸು ಎಲ್ಲಿದ್ದಾನೋ, ಪಾಪ! ಕೆಲಸ ಹುಡುಕ್ತೀನಿ ಅಂತ ಹೇಳಿದ್ದ" ಎಂದಳು ಜಯ.

"ಅಲ್ಲಾ ನಾನು ದೊಡ್ಡ ಮನುಷ್ಯಳಾಗಿದ್ದಿದ್ರೆ ಪಾರ್ಟಿ ಕೊಡು ಅಂತ ಕೇಳ್ತಿರಲಿಲ್ಲವೇನೇ ಜಯ?" ಅಪ್ರಯತ್ನವಾಗಿ ಮಧುಮತಿಯ ಕಣ್ಣುಗಳು ಒದ್ದೆಯಾದವು.

"ಓಹೋ, ಸುಮ್ನೆ ಬಿಟ್ಬಿಟ್ಟೆ ಅಂದ್ಕೊಂಡ್ಯಾ? ನಿನ್ನ ಮಗ ಬರ್ಲಿ. ಪಾರ್ಟಿ ಯಾಕೆ, ಡಿನ್ನರ್ ಕೊಡು ಅಂತೀನಿ" ನಕ್ಕಳು ಜಯ.

ಒಡನೆಯೇ ದೇವಸ್ಥಾನಕ್ಕೆ ಹೋಗಿ ಅಭಿಷೇಕ ಮಾಡಿಸಿ ಮನಸಾರೆ ದೇವರನ್ನು ಪ್ರಾರ್ಥಿಸಿದಳು ಮಧುಮತಿ.

೦ ೦ ೦ ೦

ಬಾಗಿಲು ತೆರೆದ ವಾಸುವಿನ ಕಣ್ಣುರೆಪ್ಪೆಗಳು ಊದಿದ್ದವು. ಮುಖ ಬಾಡಿತ್ತು. ಚೆನ್ನಾಗಿ ಅತ್ತಿದ್ದಾನೆಂಬುವುದನ್ನು ಅವನ ರೂಪ ಸಾರುತ್ತಿತ್ತು.

"ಛೆ! ಯಾಕೋ ನೀನು ಫಸ್ಟ್ ಕ್ಲಾಸಿನಲ್ಲಿ ಪಾಸ್ ಮಾಡಿದ್ದಿ ಅನ್ನೋ ಸಂತೋಷವನ್ನು ಒರೆಸಿಹಾಕಿಬಿಡ್ತಿದ್ದೀಯಲ್ಲಾ. ನನಗೆ ಹೆದರಿಕೆಯಾಗೋ ಹಾಗೆ ಮಾಡ್ತಿದ್ದಿ. ನೀನು ಯಾಕಿಷ್ಟು ಸಂಕಟಪಡ್ತಿದ್ದಿಯೋ ನನಗೆ ಅರ್ಥವಾಗ್ತಿಲ್ಲ" ಎನ್ನುತ್ತಾ ಈಸೀಛೇರಿನಲ್ಲಿ ಮಲಗಿ ತಲೆಯನ್ನು ಗಟ್ಟಿಯಾಗಿ ಹಿಡಿದುಕೊಂಡರು ಪ್ರಸಾದರಾವ್.

"ನಾನೇನು ಸಂಕಟಪಡ್ತಿಲ್ಲ ಅಪ್ಪಾ!" ನಗಲು ಪ್ರಯತ್ನಿಸುತ್ತಾ ಹೇಳಿದ ವಾಸು.

"ನನ್ನನ್ನ ತೃಪ್ತಿಪಡಿಸಲು ಪ್ರಯತ್ನಿಸಬೇಡ! ನನ್ನನ್ನ ನನ್ನಂತೆ ಬದುಕಲು ಬಿಡಿ ಅಂದೆ. ಅದರ ಅರ್ಥ ಏನು? ಇಷ್ಟಕ್ಕೆ ನಿನ್ನ ಮನಸ್ಸಿನಲ್ಲಿರೋ ಉದ್ದಿಶ್ಯ ಹೇಳು ವಾಸೂ! ಅದು ನನಗೆ ಇಷ್ಟವಾಗದೆ ಇದ್ರೂ ಖಂಡಿತವಾಗಿ ನಿನಗೋಸ್ಕರ ನನ್ನ ಉದ್ದೇಶಗಳನ್ನು ಬದಲಾಯಿಸ್ಕೋತೀನಿ.

ನಿನಗೇನು ಬೇಕೋ, ನನ್ನನ್ನೇನು ಮಾಡು ಅಂತೀಯೋ ಹೇಳು. ನಾನು ಬದುಕಿರೋವಾಗ ನಿನ್ನ ಕಣ್ಣಲ್ಲಿ ನೀರು ಬಂದ್ರೆ ಸಹಿಸಲಾರೆ. ನಿನ್ನ ಉದ್ದೇಶ್ಯ ಎಂಥದ್ದೇ ಆಗಿದ್ರೂ, ನಿನಗೂ ನನಗೂ ಸಂಬಂಧಪಟ್ಟಿದ್ದಾದ್ರೆ ಭಯ, ಸಂಕೋಚ, ಮುಚ್ಚುಮರೆ ಇಲ್ದೆ ಹೇಳು. ನನ್ನಿಂದ ಸಾಧ್ಯವಾದ ದ್ದನ್ನೆಲ್ಲಾ ಮಾಡ್ತೀನಿ, ಅಷ್ಟೇ ಆಗಲಿ......" ಎನ್ನುತ್ತಾ ಕುರ್ಚಿಯಲ್ಲಿ ಸರಿಯಾಗಿ ಕೂತರು ಪ್ರಸಾದರಾವ್. ಗೋಡೆಗೆ ಆತು ನಿಂತಿದ್ದ ವಾಸು ಒಮ್ಮೆ ಪ್ರಸಾದ ರಾವ್ ಕಡೆ ನೋಡಿ, "ನಿಜ ಹೇಳ್ತಿದ್ದೀನಿ, ನಾನು ಮೊನ್ನೆ .. ಮೊನ್ನೆ......" ಎಂದು ಹೇಳಿ ನಿಲ್ಲಿಸಿದ ವಾಸು. "ಊಂ, ಮೊನ್ನೆ ಏನಾಯ್ತು ? ಹೇಳು, ವಾಸೂ ?" ಆತುರದಿಂದ ವಾಸುವಿನ ಮುಖ ದಿಟ್ಟಿಸುತ್ತಿದ್ದರು ಪ್ರಸಾದರಾವ್.

"ಅಮ್ಮನ್ನ ನೋಡಿದ ಮೇಲೆ ನನ್ನ ಮನಸ್ಸಿಗ್ಯಾಕೋ ಭಯ ಆಗಿದೆ ಅಪ್ಪಾ !"

"ಓಹೋ, ಅದಾ ! ಏನೋ ದೇಹಾಲಸ್ಯ ಆಗಿರಬಹುದು. ಗೋಪಿಗೆ ಬರೀತೀನಿ : ಡಾಕ್ಟರ್‌ಗೆ ತೋರಿಸು ಅಂತ. ಅವನು ಒಂದು ಸಲ ಹೋಗಿ ನೋಡ್ಕೊಂಡು ಬರ್ತಾನೆ."

"ಎಷ್ಟು ಯೋಚನೆ ಮಾಡಿದ್ರೂ ಮನಸ್ಸು ಸ್ಥಿಮಿತಕ್ಕೆ ಬರ್ಲಿಲ್ಲ, ಅಪ್ಪಾ! ಅಮ್ಮ, ಅವರು ಇವರು ಕೊಟ್ಟ ಹಳೇ ಸೀರೆ ಉಡ್ತಿದ್ರೆ, ನಾನು ಬೆಲೆಬಾಳುವ ಹೊಸ ಬಟ್ಟೆಗಳನ್ನು ಹಾಕ್ಕೊತ್ತಿದ್ದೀನಿ. ಅಮ್ಮ ಊಟಕ್ಕೆ ಗತಿ ಇಲ್ದೆ ಒದ್ದಾ ಡ್ತಿದ್ರೆ ನಾನು ಐ.ಎ.ಎಸ್. ಓದಬೇಕು. ಅಮ್ಮ ಅಷ್ಟು ಕಷ್ಟಪಟ್ಟು ಜೀವನ ನಡೆಸ್ತಾ ಇರೋದು ನನಗೋಸ್ಕರ ತಾನೇ ? ತಾನು ಪಡ್ತಿರೋ ಕಷ್ಟಗಳನ್ನು ನನಗೆ ತಿಳಿಸೋದೇ ಇಲ್ಲ ಅಮ್ಮ, ನಾನೇನು ಚಿಕ್ಕ ಹುಡುಗ ಅಲ್ಲವಲ್ಲಾ ! ಕೊಂಚ ಅರ್ಥ ಮಾಡಿಕೊಂಡೆ. ವಿವರಗಳನ್ನು ಜಯ ತಿಳಿಸಿದ್ಲು, ನನ್ನ ವೇಷ ಭೂಷಣ ನೋಡಿ ದೊಡ್ಡ ಮಾವನಿಗೆ ಕಣ್ಣುರಿ. ಒಳ್ಳೊಳ್ಳೆ ಬಟ್ಟೆ ಗಳನ್ನು ಹಾಕ್ಕೊಂಡು ಅಮ್ಮನಿಗೆ ಅಪಕಾರ ಮಾಡ್ದೆ. ನನಗೆ ರಹಸ್ಯವಾಗಿ ಹಣ ಒದಗಿಸ್ತಾ ಇದ್ದಾಳೆ ಅಂತ ಅನುಮಾನಪಟ್ಟ ಮಾವ ತನ್ನ ಭಾಗದ ಬೆಳೆ ಬಾಡಿಗೆ ಐವತ್ತು ರೂಪಾಯಿ ಅಮ್ಮನಿಗೆ ಕೊಡ್ತಾ ಇದ್ದದ್ದನ್ನ ನಿಲ್ಲಿಸಿಬಿಟ್ಟಿ ದ್ದಾರೆ. ಈ ವಿಷಯವನ್ನು ಚಿಕ್ಕ ಮಾವನಿಗೆ ತಿಳಿಸಿಲ್ಲ. ಅಮ್ಮ ಕಪ್ಪಗೆ, ಸಣ್ಣಗೆ ಕಡ್ಡಿಯಂತೆ ಆಗಿಹೋಗಿದ್ದಾಳೆ. ಅಪ್ಪಾ ! ನನಗೋಸ್ಕರ ಬದುಕಿರೋ

ಅಮ್ಮ ಹಾಗೆ ಶುಷ್ಕಿಸಿಹೋಗಿರೋದು ನನಗೆ ಭರಿಸಲಾರದ ವೇದನೆಯಾಗಿದೆ" ನಿಲ್ಲಿಸಿದ ವಾಸು.

"ಅಮ್ಮ !" ಎಂದು ವಾಸುವಿನ ಬಾಯಲ್ಲಿ ಕೇಳದೊಡನೆ ಹಿಂದಿನದೆಲ್ಲಾ ಜ್ಞಾಪಕ ಬಂದು ಕೋಪಾರಹಿತವಾದ ಲೋಚನಗಳು ನಿಧಾನವಾಗಿ ಪ್ರಶಾಂತ ಕಾಂತಿಯನ್ನು ಹೊಂದಲು ದೀರ್ಘವಾಗಿ ನಿಟ್ಟುಸಿರು ಬಿಟ್ಟು ಮೌನವಾಗಿ ತಲೆ ಬಗ್ಗಿಸಿದರು ಪ್ರಸಾದರಾವ್.

"ನಾನು ದುರದೃಷ್ಟವಂತ, ಅಪ್ಪಾ ! ಮನೇಲಿ ಯಾವ ಮಾತು ಬಂದರೂ ಯಾರೂ ಅಡ್ಡ ಬರದಂತೆ ಕೊಠಡಿಯಲ್ಲಿ ಹಾಕಿ ಹೊಡೆದು ಚಚ್ಚಿಹಾಕಿ ಬಾಗಿಲು ಬೀಗ ಹಾಕ್ಕೊಂಡು ಹೊರಟ್ಹೋಗ್ತಿದ್ರು ಅಮ್ಮ. ಆಗ ಏನಂದು ಕೊಂಡು ಅಳ್ತಾ ಇದ್ನೋ ಗೊತ್ತಾ? ನನಗೆ ಅಪ್ಪ ಇದ್ದಿದ್ರೆ ಅಮ್ಮ ಹೀಗೆ ನನ್ನನ್ನು ಹೊಡೆಯೋದಕ್ಕೆ ಅವಕಾಶ ಕೊಡ್ತಿದ್ರಾ ಅಂತ ಅಳ್ತಿದ್ದೆ. ನನ್ನ ಜೊತೆಯವರಿಗೆಲ್ಲಾ ಅಪ್ಪ ಇದ್ದು, ನನಗೆ ಇಲ್ಲದೆ ಇದ್ದುದಕ್ಕೆ ಅಳ್ತಾ ಇದ್ದೆ, ಅಮ್ಮ ಹೊಡೆದರಲ್ಲಾ ಅಂತ ಅಳೋದರ ಜೊತೆಗೆ ಆಮೇಲೆ ಪುನಃ ಆ ಅಮ್ಮನ ಮಡಿಯಲ್ಲೇ ಸಮಾಧಾನಪಡೀತಿದ್ದೆ. ನನ್ನನ್ನ ಹೊಡೆದ ಅಮ್ಮ ನನ್ನನ್ನ ಕರುಣೆಯಿಂದ ನೋಡ್ತಿದ್ರು, ನನ್ನನ್ನ ಹೊಡೆದ ದಿನ ಉಪವಾಸವಿರ್ತಿದ್ರು, ಅಂತಹ ತಾಯಿಗೆ ಮೋಸ ಮಾಡ್ತಿದ್ದೀನಿ." ಕೈಯಲ್ಲಿ ಮುಖ ಮುಚ್ಚಿಕೊಂಡ ವಾಸು.

"ಛೆ ! ಛೆ ! ಕೈ ತೆಗಿ............ನೀನೇನು ಮೋಸ ಮಾಡ್ದೆ ! ಗಂಡಸಿಗೆ ಅಷ್ಟು ಮೃದುವಾದ ಮನಸ್ಸು ಪ್ರಯೋಜನವಿಲ್ಲ ವಾಸೂ, ನಾನು ಮೋಸ ಮಾಡ್ತಿದ್ದೀನೇನೋ ಮೋಸ. ನಾನು ನಿನ್ನ ಕೈಯಲ್ಲಿ ಮೋಸ ಮಾಡಿಸ್ತಿದ್ದೀ ನೇನೋ, ಅಲ್ಲಾ, ಇದು ಮೋಸ ಹೇಗಾಗುತ್ತೆ ?''

ಪ್ರಸಾದರಾವ್ ಮಾತು ಪೂರ್ತಿಯಾಗುವ ಮೊದಲೇ ಕೋಪದಿಂದ, "ಅದು ಸರಿ ! ನೀವೇನು ಮಾಡಿದ್ರಿ ಅಂತ ನಾನು ಕೇಳ್ತಿಲ್ಲ ಈಗ. ನಿಮ್ಮ ಹಣದಲ್ಲಿ ಓದ್ತಾ ನೀವು ಕೊಡೋ ಕಾಣಿಕೆಗಳಿಂದ ಮೆರೀತಾ, ನಿಮ್ಮ ಇರುವಿಕೆ ಯನ್ನೇ ಅಮ್ಮನಿಗೆ ತಿಳಿಸದೆ ಇರೋದು ಮೋಸ ಅಲ್ವಾ ! ಈ ಬೆಲೆ ಬಾಳುವ ಬಟ್ಟೆಗಳೂ, ವಾಚ್, ರಿಂಗ್......ಇವೆಲ್ಲಾ ಎಲ್ಲಿಂದ ಬಂತೆಂಬ ಪ್ರಶ್ನೆ ಅಮ್ಮನನ್ನು ಕಾಡಿಸೋದಿಲ್ವಾ ? ಸ್ಕಾಲರ್‌ಷಿಪ್ ಎಂತ್ಲೂ, ಮಾವ ಹೊಲಿಸಿದ ಎಂತ್ಲೂ

ಹೇಳಿದ್ರೆ, ಊಟ ಹಾಕೋದಕ್ಕೇ ಯೋಚ್ನೇ ಮಾಡೋವ್ರು ಇವೆಲ್ಲಾ ಮಾಡ್ತಾರೆ ಅಂದ್ರೆ ನಂಬ್ತಾರಾ ಅಮ್ಮ ?

ಆದರೆ....ಅಮ್ಮನ ಬಾಯಿ......ಹಾಗೆ ಕೇಳೋ ಬಾಯನ್ನ ಮೊದಲೇ ಮುಚ್ಚಿಟ್ಟೆ. 'ನನ್ನ ಭವಿಷ್ಯತ್ ಚೆನ್ನಾಗಿರಬೇಕು ಅನ್ನೋ ಕೋರಿಕೆ ಇರೋ ವಳಾದ್ರೆ ಇವೆಲ್ಲಿಯದು, ಹಣ ಎಲ್ಲಿಂದ ಬರುತ್ತೆ ಅಂತ ಕೇಳ್ಬೇಡ' ಅಂತ ಹೇಳ್ದೆ ನಿಮಗೆ ಹಿಂದೆಯೇ ತಿಳಿಸಿದ್ದೆನೋ ! ಈ ನಾಲ್ಕು ವರ್ಷಗಳಲ್ಲಿ ಅಮ್ಮ ನನ್ನನ್ನ ತೃಪ್ತಿಯಿಂದ ನೋಡುವುದೊಂದರ ವಿನಃ ಏನನ್ನೂ ಕೇಳಲಿಲ್ಲ. ಎಷ್ಟು ದಿನ ಅಮ್ಮನಿಗೆ ಹೀಗೆ ಮೋಸ ಮಾಡ್ಬೇಕು ಅಂತೀರಿ ? ನಿಜ ಗೊತ್ತಾದ ಮೇಲೆ ಗಂಡ, ಮಗ......ಇಬ್ಬರೂ ತನಗೆ ಮೋಸ ಮಾಡಿದ್ರು ಅಂತ ಕುಮುಲಿ ಹೋಗೋದಿಲ್ವ ? ಇಷ್ಟು ವರ್ಷಗಳು ಅಮ್ಮನಿಗೆ ತಿಳಿಸದೆ.....ಅಬ್ಬಾ ! ನನ್ನ ಹೃದಯ ಸುಟ್ಟುಹೋಗ್ತಿದೆ ಅಪ್ಪಾ ! ಮಾತಾಡೋದಿಲ್ವಾ ? ಹೇಳಿ, ಅಪ್ಪ ! ನಿಮ್ಮ ಹಣದಿಂದ್ಲೆ ಓದ್ತಿರೋದು, ನಿಮ್ಮನ್ನ ನಾನು ಬಂದು ನೋಡ್ತಿರೋದು ಇನ್ನು ಎಷ್ಟು ದಿನ ಅಮ್ಮನಿಗೆ ಗೊತ್ತಾಗಬಾರ್ದು ?" ಎಂದ ವಾಸು.

ಆವೇಶದಿಂದ ತಡೆಯಲಾರದ ಕಣ್ಣೀರಿನಿಂದ ದೇಹಾದ್ಯಂತ ನಡುಗು ತ್ತಿದ್ದ ವಾಸುವನ್ನು ಹತ್ತಿರಕ್ಕೆ ಕರೆದುಕೊಂಡು, "ನಿಮ್ಮ ಅಮ್ಮನಿಗೆ ಎಂದಾ ದರೂ ಆಗಲಿ ನಾನೇ ಹೇಳ್ಬೇಕು, ವಾಸು .....! ತಪ್ಪೆಲ್ಲಾ ನನ್ನದೇ ಅಂತ ಹೇಳ್ತೀನಿ.ಸರಿಯಾ ? ಈಗ ನಿಮ್ಮ ಅಮ್ಮ ಕಷ್ಟಪಡ್ತಿದ್ದಾರೆ ಅನ್ನೋದು ತಾನೆ ನಿನ್ನಸಂಕಟ ! ನಿಮ್ಮ ಅಮ್ಮ ತೊಂದರೆ ಇಲ್ಲದೆ ಬದುಕೋ ಏರ್ಪಾಡನ್ನ ನಾನು ಮಾಡ್ತೀನಿ" ಎಂದರು ಪ್ರಸಾದರಾವ್. ಆ ಕ್ಷಣದಲ್ಲಿ ಮಾನವತೆ ಮೂರ್ತಿವೆತ್ತ ಪರಿಪೂರ್ಣ ವ್ಯಕ್ತಿ, ಅಮೃತ ಹೃದಯಿಯಾಗಿ ಕಂಡ ವಾಸುವಿನ ತಲೆ ನೇವರಿಸಿ, ಸಮಾಧಾನಪಡಿಸಿದರು ಪ್ರಸಾದರಾವ್ ತೃಪ್ತಿಯಿಂದ.

ಕೆಲಕ್ಷಣಗಳು ಸಂತೋಷವಾಗಿ ಕಳೆದುಹೋದವು. ಇಬ್ಬರ ಮಧ್ಯೆ ಭರಿಸ ಲಾರದ ನಿಶ್ಯಬ್ದ. ಏನೋ ಆಲೋಚನೆಯಲ್ಲಿ ಮುಳುಗಿಹೋದ ಪ್ರಸಾದ ರಾವ್ ಸಂಕಟದಿಂದ ನಿಟ್ಟುಸಿರು ಬಿಟ್ಟು, "ನಿಮ್ಮ ಅಮ್ಮನ ಸ್ವಭಾವ ನನಗೆ ಚೆನ್ನಾಗಿ ಗೊತ್ತು. ಅವಳಿಗೆ ಗೊತ್ತಾಗೋದು ನಿನ್ನ ಭವಿಷ್ಯತ್ತಿಗೆ ಕೊಡಲಿ ಪೆಟ್ಟು. ಈಗ ಅವಳ ಸ್ವಭಾವ ಹೇಗೆ ಬದಲಾಯಿಸಿದೆಯೋ ನನಗೆ ಗೊತ್ತಿಲ್ಲ

ವಲ್ಲ? ಅವಳ ವಿಷಯ ಇನ್ನೇನೂ ಯೋಚನೆ ಮಾಡಬೇಡ. ನಾನೇನಾದರೂ ಏರ್ಪಾಟು ಮಾಡ್ತೀನಿ" ಎಂದರು.

"ಥ್ಯಾಂಕ್ಸ್.....ನನ್ನನ್ನ ಕ್ಷಮಿಸಿ ಅಪ್ಪಾ !" ಎಂದ ವಾಸು ತೃಪ್ತಿಯಿಂದ ಸಮಾಧಾನದ ನಿಟ್ಟುಸಿರು ಬಿಡುತ್ತಾ.

ಆ ರಾತ್ರಿ ನಿಶ್ಚಿಂತನಾಗಿ ಮಲಗಿ ನಿದ್ರಿಸಿದ.

"ಮ ನೆ ಗ್ಯಾ ಕೆ ತರಿಸಿದ್ರಿ ? ನಿಮ್ಮ ಸೆಲೆಕ್ಷನ್ ಚೆನ್ನಾಗಿರುತ್ತೆ. ನೀವೇ ಸೆಲೆಕ್ಟ್ ಮಾಡಿ ತಂದಿದ್ರೆ ಆಗ್ತಿರಲಿಲ್ವಾ?" ಎಂದ ವಾಸು ಪ್ಯಾಕ್ ಮಾಡಿ ತರಿಸಿದ್ದ ದೊಡ್ಡ ಗಂಟನ್ನು ನೋಡುತ್ತಾ.

"ಸರಿಯಾಗಿ ತಗೊಂಡು ಹೋಗ್ತೀಯ ಈ ಬಟ್ಟೆಗಳನ್ನು ಹೋಲ್ಡಾಲ್ ನಲ್ಲಿ ಕಟ್ಟಿಬಿಡ್ತೀನಿ !" ಎಂದರು ಪ್ರಸಾದರಾವ್ ಉತ್ತರವಾಗಿ. ಬಟ್ಟೆ ತಂದಿದ್ದ ವ್ಯಕ್ತಿ ಹೊರಟುಹೋದ.

"ಇಷ್ಟು ಬಟ್ಟೆಗಳ್ಯಾಕೆ?" ನಕ್ಕ ವಾಸು.

ಮಧುಮತಿಗೆ ಬೇಕಾದ ಎಂಟು ಸೀರೆಗಳು, ಜಾಕೆಟ್ ಬಟ್ಟೆ, ನಾಲ್ಕು ಜೊತೆ ವಾಸುವಿನ ಬಟ್ಟೆಗಳನ್ನು ಹೋಲ್ಡಾಲಿನಲ್ಲಿ ಕಟ್ಟುತ್ತಾ, "ಗೋಪಿಗೆ ಕಾಗದ ಬರೆದಿದ್ದೀನಿ. ನಿನ್ನ ಬಟ್ಟೆಗಳನ್ನು ತಗೊಂಡು ಮಿಕ್ಕಿದ್ದನ್ನು ಮಾವನಿಗೆ ಕೊಟ್ಬಿಡು" ಎಂದರು ಪ್ರಸಾದರಾವ್.

ಹಾಗೇ ಆಗಲೆಂಬಂತೆ ತಲೆದೂಗಿದ ವಾಸು.

"ನಮ್ಮ ಆಳಿನೊಂದಿಗೆ ಸ್ಕೂಟರ್ ಕಳಿಸ್ತೀನಿ. ಅವನೇ ಸ್ಕೂಟರ್ ನಡಿಸೋದನ್ನೂ ಕಲಿಸ್ತಾನೆ. ಸರಿಯಾಗಿ ಪ್ರಾಕ್ಟೀಸ್ ಮಾಡು."

"ಹಾಗೇ ಆಗ್ಲಿ..... ನಿಮಗೆ ಅಕ್ಕಂದಿರೂ, ತಂಗಿಯರೂ—ಇನ್ಯಾರೂ ಬಂಧುಗಳಿಲ್ವಾ ಅಪ್ಪಾ !"

ತಾನು ಊಹಿಸದಿದ್ದ ಪ್ರಶ್ನೆ ! ನಗುತ್ತಾ, "ಯಾಕೆ ವಾಸು ?" ಎಂದರು ಪ್ರಸಾದರಾವ್.

"ನಿಮಗೆ ಅಡಿಗೆ ಮಾಡಿ ಹಾಕ್ತಾರೇನೋ ಅಂತ. ಹೋಗ್ಲಿ, ಅಡಿಗೆಯವನನ್ನು ಗೊತ್ತುಮಾಡ್ಕೊಳ್ಳಿ ಅಪ್ಪಾ !"

ಅಡಿಗೆಯವನೂ, ಹೋ ಟೆ ಲಿ ನ ವ ರೂ ಹಾಕುವ ಊಟ ತೃಪ್ತಿ ಕೊಡುತ್ತಾ, ಹಸಿವೆ ಹಿಂಗಿಸುತ್ತಾಗಲೀ, ನ ರ ಸ ಮ್ಮ ಕೈತುತ್ತು ಹಾಕಿ ಇಪ್ಪತ್ತೈದು ವರ್ಷ ಹಸಿವೇ ಗೊತ್ತಾಗದಂತೆ ಊಟವಿಕ್ಕುತ್ತಿದ್ದರು ಐದು ವರ್ಷಗಳ

ಕಾಲ ಮಧುಮತಿ ಅಮೃತವನ್ನೇ ಉಣಿಸುತ್ತಿದ್ದಳು." ಪುನಃ ಭಾರವಾಗುತ್ತಿದ್ದ ಮನಸ್ಸು......ಬೇರೆಲ್ಲೋ ಮುಖ ತಿರುಗಿಸಿ "ಹಾಗೇ ಮಾಡೋಣ ಬಿಡು'' ಎಂದರು ಪ್ರಸಾದರಾವ್.

o o o o o

ಹಾಲಿನ ಲೋಟದೊಂದಿಗೆ ಕೊಠಡಿಯನ್ನು ಪ್ರವೇಶಿಸಿದ ಪದ್ಮಜ "ವಾಸು, ಈವತ್ತಿನಿಂದ ರಾತ್ರಿ ಮಲಗೋದಕ್ಕೆ ಮುಂಚೆ ಕುಡಿಯೋದಕ್ಕೆ ಒಂದು ಲೋಟ ಹಾಲು ಸ್ಯಾಂಕ್ಷನ್ ಮಾಡಿದೀವಿ" ಎಂದಳು ನಗುತ್ತಾ.

"ಏತಕ್ಕೆ ಪದ್ಮಜ! ಬೇಡಾಂತ ಹೇಳು." ಮಂಚದ ಮೇಲೆ ಎದ್ದು ಕುಳಿತ ವಾಸು.

"ಇನ್ಮೇಲೆ ಕಾಲೇಜಿಗೆ ತುಂಬಾ ದೂರ ಹೋಗ್ಬೇಕಲ್ಲಾ, ಹುಡುಗ ತೆಗೆದುಹೋಗ್ತಿ ಅಂತಿರಬೇಕು. ನನಗೇನೂ ಗೊತ್ತಿಲ್ಲ, ಕೊಟ್ಟು ಬಾ ಅಂದ್ರು ಅಪ್ಪಾ"

"ಸರಿ, ಕೊಟ್ಬಿಡು!" ಕೈ ಮುಂದಕ್ಕೆ ಚಾಚಿದ ವಾಸು.

"ಸಕ್ಕರೆ ಹಾಕಿದ್ದೀನೊ, ಇಲ್ವೋ?'' ಎನ್ನುತ್ತಾ ಲೋಟವನ್ನು ತುಟಿಗಿಟ್ಟುಕೊಂಡು, ಸ್ವಲ್ಪ ಕುಡಿದು, "ಸಿಹಿಯಾಗೇ ಇದೆ. ಸಕ್ಕರೆ ಹಾಕಿದ್ದೀನಿ ಅಯ್ಯಯ್ಯೋ, ಎಂಜಲು ಮಾಡ್ಬಿಟ್ಟೆನಲ್ಲಾ!" ಎಂದಳು ದುಃಖಪಡುತ್ತಿರುವಂತೆ ನಟಿಸುತ್ತಾ.

"ಪರವಾಗಿಲ್ಲ, ಕೊಟ್ಬಿಡು" ಎಂದು ಅವಳ ಕೈಯ್ಯಲ್ಲಿದ್ದ ಲೋಟವನ್ನು ತೆಗೆದುಕೊಳ್ಳುತ್ತಾ.

"ಎಂಜಲಲ್ವಾ?" ಒಮ್ಮೆ ಅವನ ಕಡೆ ನೋಡಿ ನೋಟ ಬೇರೆಡೆ ತಿರುಗಿಸಿದಳು. ಅವಳ ನೋಟದಲ್ಲಿನ ಆರಾಧನೆ ಅರ್ಥವಾಗದ ಅವನು ಎಂಜಲು ಮಾಡಿದುದಕ್ಕೆ ದುಃಖಪಡುತ್ತಿದ್ದಾಳೆಂದುಕೊಂಡ. ಅವಳು ಬೇಕೆಂದೇ ಎಂಜಲು ಮಾಡಿದ್ದಾಳೆಂಬುದು ಅವನಿಗೇನು ಗೊತ್ತು? "ಮಾವನ ಮಗಳು ನೀನು. ನಿನ್ನ ಎಂಜಲು ನನಗೇನೂ ನಿಷೇಧವಲ್ಲ" ಎನ್ನುತ್ತಾ, ಸ್ವಲ್ಪ ಕುಡಿದು, "ಅಯ್ಯಬ್ಬಾ! ಇಷ್ಟು ಹಾಲು ತಂದಿದ್ದೀ. ಮೊದಲನೆ ದಿನ ಇಷ್ಟು ಕುಡಿಯಲಾರೆ, ಟೇಬಲ್ ಮೇಲೆ ಲೋಟ ಇದೆ, ತಗೋ" ಎಂದ ವಾಸು.

ಲೋಟವನ್ನು ಕೈಗೆ ಕೊಡುತ್ತಾ, "ವಾಸೂ, ನಿನಗೊಂದು ಗುಡ್ ನ್ಯೂಸ್" ಎಂದಳು ಪದ್ಮಜ ಅವನನ್ನು ನೋಡುತ್ತಾ.

"ಏನದು?" ತನ್ನ ಲೋಟದಲ್ಲಿನ ಅರ್ಧ ಹಾಲನ್ನು ಅವಳ ಲೋಟಕ್ಕೆ ಬಗ್ಗಿಸುತ್ತಾ, ನಗುತ್ತಾ ಕೇಳಿದ.

"ನನಗೇನು ಕೊಡ್ತೀ?"

"ಏನ್ಬೇಕು?"

ಕ್ಷಣ ಕಳೆದ ನಂತರ "ಹೇಳ್ಲೀ?" ಎಂದಳು.

"ನಿನ್ನಿಷ್ಟ–ಬೇಗ ಹೇಳು ಮತ್ತೆ!" ಅರ್ಥವಾಗದಂತೆ ಅವಳ ಕಡೆ ನೋಡುತ್ತಾ ಕೇಳಿದ.

"ನಿನ್ನ ಹತ್ರ ಪ್ರೆಸೆಂಟೇಷನ್ ತಗೊಳ್ದೆ ಹೇಳಬಾರದು ಅಂದ್ಕೊಂಡಿದ್ದೀನಿ."

"ಸರಿ, ತಗೋ, ನೀನು ಹೇಳೋ ಮಾತಿನಲ್ಲಿ ಸಾರಾ ಇದೆಯೋ ಇಲ್ವೋ, ಈ ಹಾಲಿನಲ್ಲಿ ಬೇಕಾದಷ್ಟು ವಿಟಮಿನ್ನುಗಳಿವೆ" ಎನ್ನುತ್ತಾ ಹಾಲಿನ ಲೋಟವನ್ನು ಕೊಡಲು ಹೋದ.

ಪಕಪಕನೆ ನಕ್ಕು, "ಅತ್ತೆ ಇಲ್ಲಿಗೆ ಬರ್‍ತಾರೆ, ನಾಳೆ ಇನ್ನು ನಮ್ಮ ಹತ್ತಿರವೇ ಇರ್‍ತಾರೆ" ಎಂದಳು ಪದ್ಮಜ.

"ಹೋಗು ಸುಳ್ಳು."

"ನಿಜವಾಗ್ಲೂ"

"ಅಪ್ಪಾ ಹೇಳಿದ್ರು, ಬೇಕಾದ್ರೆ ನೀನೇ ಕೇಳು."

ಪ್ರಸನ್ನವದನದಿಂದ ಕೈ ಮುಂದಕ್ಕೆ ಚಾಚಿದ ವಾಸು.

ಅವನ ಕೈ ಅವಳ ಕೈಯ್ಯಿನೊಂದಿಗೆ ಸೇರಿತು. "ಥ್ಯಾಂಕ್ಸ್....." ಎನ್ನುತ್ತಾ ಅವಳ ಕೈಯನ್ನು ಮೃದುವಾಗಿ ಹಿಸುಕಿ ಬಿಟ್ಟುಬಿಟ್ಟ ವಾಸು.

"ಅತ್ತೆ ಬಹಳ ಒಳ್ಳೇವ್ರು, ನನಗೆ ತುಂಬಾ ಸಂತೋಷವಾಗಿದೆ. ನಾಳೆ ಸ್ಟೇಷನ್‌ಗೆ ಹೋಗೋಣ್ವಾ?"

"ಆಗ್ಲಿ, ಹೋದರೆ ಸರಿ" ಎನ್ನುತ್ತಾ ಏನನ್ನೋ ಆಲೋಚಿಸುತ್ತ ಮೌನ ವಹಿಸಿದ ವಾಸು.

ಅವಳು ಇನ್ನೂ ಏನೇನೋ ಮಾತನಾಡುತ್ತಲೇ ಇದ್ದಳು. ಅವನಿಗೆ ಅದಾವುದೂ ಕೇಳಿಸಲಿಲ್ಲ. ಪ್ರಸಾದರಾವ್ ತನ್ನ ಬಳಿ, "ನಿಮ್ಮ ಅಮ್ಮ ತೊಂದರೆ

ಪಡದೇ ಬದುಕೋ ಏರ್ಪಾಡು ನಾ ಮಾಡ್ತೀನಿ'' ಎಂದು ಹೇಳಿದ ಮಾತು ಜ್ಞಾಪಕ ಬಂತು. ತೃಪ್ತಿಯಿಂದ ನಿರಾಳವಾದ ನಿಟ್ಟುಸಿರು ಬಿಟ್ಟ ವಾಸು.

• • • •

ಆಫೀಸ್ ರೂಮಿನಲ್ಲಿ ಏನೋ ಕಾಗದ ಪತ್ರಗಳನ್ನು ಪರಿಶೀಲಿಸುತ್ತಿದ್ದ ಗೋಪಾಲರಾವ್, "ಮಾವ" ಎಂಬ ಮೃದುವಾದ ಕರೆ ಕೇಳಿ ಪ್ರಶ್ನಾರ್ಥಕವಾಗಿ ತಲೆ ಎತ್ತಿ ನೋಡಿದರು.

"ಅಮ್ಮ ಇಲ್ಲಿಗೇ ಬರ್‍ತಿದ್ದಾರೆ ಅಂತ ಪದ್ಮಜ ಹೇಳಿದ್ಲು, ನಿಜವಾ ?"

"ಹೌದು, ವಾಸೂ ! ಹೇಳಬೇಕು ಅಂತಿದ್ದೆ. ನಾಳೆ ಸಂಜೆ ಪ್ಯಾಸೆಂಜರ್ ನಲ್ಲಿ ಬರ್‍ತಾಳಂತೆ. ಇದೋ ಕಾಗದ. ಸ್ಟೇಷನ್‌ಗೆ ಹೋಗಿ ಕರ್ಕೊಂಡು ಬರ್‍ತಿ ತಾನೆ ?'' ವಾಸುವಿನ ಕೈಗೆ ಕಾರ್ಡ್ ಕೊಡುತ್ತಾ ಕೇಳಿದರು ಗೋಪಾಲ ರಾವ್.

"ನೀನು ಬಾ ಅಂತ ಬರೆದೆಯೊ ? ಅಥವಾ ಅವರೇ ಬರ್‍ತಿದ್ದಾರಾ ?"

ವರಾಂಡದಲ್ಲಾಗಲಿ, ಕೊಠಡಿಯಲ್ಲಾಗಲೀ, ಯಾರೂ ಇಲ್ಲವೆಂದು ಖಚಿತಪಡಿಸಿಕೊಂಡು, "ನೀನು ಬಂದ ದಿವಸವೇ ನಿಮ್ಮ ತಂದೆ ಕಾಗದವೂ ಬಂತು. ನಾನು ಬೇಡ ಅಂದ್ರೂ ಇಷ್ಟು ದಿನ ನೀನು ನಮ್ಮನೇಲಿದ್ದೀ ಅಂತ ಹಣ ಕಳಿಸ್ತಾಲೇ ಇದ್ದಾರೆ. ಈಗ ಏನಂದ್ಕೊಂಡ್ರೋ ಏನೋ. ನಿಮ್ಮ ಅಮ್ಮನ್ನೂ ಸಹಾ ನನ್ನ ಹತ್ತಿರವೇ ಇಟ್ಕೋ ಅಂತ ಹೇಳಿ ಅವಳಿಗಾಗೋ ಖರ್ಚನ್ನು ತಾನು ಭರಿಸ್ತೀನಿ ಅಂತ ಬರೆದಿದ್ದಾರೆ. ಅಂದ್ರೆ ಅವಳನ್ನು ಅವರು ಬರಿಸಿದ ಹಾಗೇ ತಾನೆ ಆಯ್ತು ? ಹಾಗೇ ನಮ್ಮ ಹತ್ತಿರ ಹತ್ತಿರಕ್ಕೆ ಬರ್‍ತಿ ದ್ದಾರೆ ನಿಮ್ಮ ತಂದೆ. ಅಲ್ವಾ ವಾಸೂ ? ಏನೋ ನಿನ್ನ ದಯೆಯಿಂದ ಕುಗ್ಗಿ ಹೋಗ್ತಿರೋ ನಮ್ಮ ಅಕ್ಕ ಸಂತೋಷವಾಗಿ ಬದುಕಿದರೆ ನಾವು ಯಾರೂ ಸಾಧಿಸಲಾಗದೇ ಇದ್ದದ್ದನ್ನ ನೀನು ಸಾಧಿಸಿದ ಹಾಗಾಗುತ್ತೆ ಅಲ್ವಾ ! ನೀನು ದೊಡ್ಡ ವ್ಯವಹಾರಸ್ಥ......!" ಎಂದು ನಕ್ಕು, "ವಾಸೂ ! ನಿನ್ನನ್ನ ಹೇಗೆ ಅಭಿ ನಂದಿಸಬೇಕೋ, ನನಗೆಷ್ಟು ಸಂತೋಷವಾಗಿದೆಯೋ ಹೇಳೋದಕ್ಕೆ ಮಾತು ಗಳೇ ಇಲ್ಲ" ಎಂದರು ಗೋಪಾಲರಾವ್.

"ಆದ್ರೆ ನಾಳೆ ಸ್ಟೇಷನ್‌ಗೆ ಹೋಗ್ತೀವಿ ಮಾವ, ಪದ್ಮಜ, ಶೀನೂನೂ ಬರ್‍ತಾರೆ" ಎನ್ನುತ್ತಾ ಹೊರಗೆ ಬಂದ ವಾಸು.

• • • •

ಸ್ಟೇಷನ್‌ಗೆ ಬಂದಿದ್ದ ವಾಸು, ಪದ್ಮಜ, ಶೀನು—ಎಲ್ಲರನ್ನೂ ಪ್ರೀತಿಯಿಂದ ಹತ್ತಿರಕ್ಕೆ ಕರೆದು ತೇವವಾದ ಕಣ್ಣುಗಳನ್ನು ಒರೆಸಿಕೊಳ್ಳುತ್ತಾ, ಮುಗುಳ್ನಕ್ಕು, "ಚೆನ್ನಾಗಿ ಓದ್ತಾ ಇದ್ದೀರಾ ಎಲ್ಲರೂ? ನಡೀರಿ, ಹೋಗೋಣ" ಎಂದಳು ಮಧುಮತಿ ಆನಂದವೋ, ದುಃಖವೋ, ಮತ್ತಿನ್ನಾವ ಭಾವದ ಒತ್ತಡಿಯೋ! ಅವಳ ಧ್ವನಿ ರುದ್ಧವಾಯಿತು.

"ನೀನು ನಮ್ಮ ಹತ್ತಿರಕ್ಕೆ ಬಂದ್ಬಿಡ್ತೀ ಅಂತ ಅಪ್ಪ ಹೇಳಿದಾಗ ನನಗೆಷ್ಟು ಸಂತೋಷವಾಯ್ತೋ ಗೊತ್ತಾ, ಅತ್ತೆ?" ಮಧುಮತಿಯ ಕೈ ಹಿಡಿದು ಅದಿಸುತ್ತಾ, ಆಪ್ಯಾಯತೆಯಿಂದ ಕೂಡಿದ ಧ್ವನಿಯಲ್ಲಿ ಹೇಳಿದಳು ಪದ್ಮಜ.

"ಹುಚ್ಚು ಹುಡುಗಿ, ಯಾಕಮ್ಮಾ ನಾನು ಅಂದ್ರೆ ನಿನಗಿಷ್ಟು ಪ್ರೀತಿ? ಈ ಅತ್ತೆ ನಿನಗೇನು ಕೊಡಬಲ್ಲಳು?" ಅವಳನ್ನು ಹತ್ತಿರಕ್ಕೆಳೆದುಕೊಂಡು ತಲೆಯನ್ನು ಮುದ್ದಿಸಿದಳು ಮಧುಮತಿ.

"ಅಜ್ಜಿ, ಮಾವ ಎಲ್ರೂ ಚೆನ್ನಾಗಿದ್ದಾರಾ? ಟ್ರೈನ್ ಎಷ್ಟು ಹೊತ್ತಿಗೆ ಅಲ್ಲಿಗೆ ಬಂತು?" ಇವೇ ಪ್ರಶ್ನೆಗಳನ್ನು ನಾಲ್ಕು ಜನರೂ ಕೇಳುತ್ತಾ ಮನೆಗೆ ಬಂದರು.

"ನನ್ನನ್ನ, ಅಮ್ಮನ್ನ ಇಬ್ಬರೂ ಹಂಚಿಕೊಂಡ್ರಿ ಅಲ್ವಾ, ಗೋಪಾಲ," ಕಳಾಹೀನವಾದ ವದನದಿಂದ ನೆಲವನ್ನು ವೀಕ್ಷಿಸುತ್ತಾ ಗದ್ಗದ ಧ್ವನಿಯಲ್ಲಿ ಕೇಳಿದಳು ಮಧುಮತಿ.

"ಛಿ! ಛೆ! ನಿನಗೇನು ಕಮ್ಮಿ ನಾವು ಹಂಚಿಕೊಳ್ಳೋದಕ್ಕೆ? ನಿನ್ನ ಮಗನ ಹತ್ತಿರ ನೀನಿರ್‍ತಿ ಅಂತ ಇಲ್ಲಿಗೆ ಕಳಿಸು ಅಂತ ಅಣ್ಣನಿಗೆ ಬರೆದೆ. ಮತ್ತೆ ಅಮ್ಮ ಒಬ್ಬಳೇ ಯಾಕಿರ್‍ಬೇಕಲ್ಲಿ! ಅಣ್ಣನ ಹತ್ತಿರವೋ, ನನ್ನ ಹತ್ತಿರಾನೋ, ನಿನ್ನ ಹತ್ತಿರಾನೋ ಅವರಿಗಿಷ್ಟವಾದ ಜಾಗದಲ್ಲಿ ಎಷ್ಟು ದಿನ ಬೇಕಾದರೆ ಅಷ್ಟು ದಿನ ಇರ್‍ತಾರೆ." ಭಾವಗರ್ಭಿತವಾಗಿ ಹೇಳಿದರು ಗೋಪಾಲ್‌ರಾವ್ ನಗುತ್ತಾ.

"ಅದೇನು ಮಾತು ಗೋಪಿ! ನನ್ನ ಮಗ ಕೂತು ತಿನ್ತಾ ಇರೋವ್ನೇ

ಆಗ್ಲಿ ಸಂಪಾದಿಸ್ತಾ ಇಲ್ವಲ್ಲಾ ! ಇಬ್ಬರು ತಾಯಿ, ಮಗ, ಈ ಕಾಲದಲ್ಲಿ ಇಬ್ಬರನ್ನ ಭರಿಸೋದು ಕಷ್ಟ ಅಲ್ವಾ !"

"ಛಿ ! ನಾನೇನು ಭರಿಸ್ತಿದ್ದೀನಿ......ಭಗವಂತ ಭರಿಸ್ತಿದಾನೆ. ನೀನು ಅನವಶ್ಯವಾಗಿ ದುಃಖಪಡಬೇಡ. ಭಗವಂತ ಇದ್ದಾನೆ. ಈ ಮನೆಯಲ್ಲಿ ನಿನಗೆ ಸ್ವತಂತ್ರ ಇದೆ. ಹಾಯಾಗಿರು. ಮೊದಲೇ......ಪ್ರಯಾಣ ಮಾಡಿ ಬಂದಿದ್ದಿ. ಲಕ್ಷ್ಮೀ ಕರೀತಾ ಇರೋ ಹಾಗಿದೆ. ಹೋಗಿ ಕಾಫಿ ತಗೋ" ಎನ್ನುತ್ತಾ ತನ್ನ ಕೊಠಡಿಗೆ ಹೊರಟುಹೋದರು ಗೋಪಾಲರಾವ್.

ಕಾಲೇಜಿಗೆ ಹೋಗುವ ಹುಡುಗರ ಊಟ, ಕಾಫಿ, ಟಿಫನ್ ಬೇಗ ಬೇಗ ಸಿದ್ಧಪಡಿಸಿ ಅವರಿಗೆ ಕೊಟ್ಟು, ಅವರು ಕಾಲೇಜಿಗೆ ಹೊರಡುತ್ತಿದ್ದರೆ, ಬೀದಿಯ ಬಾಗಿಲಲ್ಲಿ ನಿಂತು ತೃಪ್ತಿಯಿಂದ ನೋಡುತ್ತಿದ್ದಳು ಮಧುಮತಿ.

ಪದ್ಮಜ, ಶೀನು ಬಸ್ ಸ್ಟ್ಯಾಂಡ್‌ವರೆಗೂ ನಡೆದು ಹೋಗುತ್ತಿದ್ದರು. ಗೇಟಿನ ಒಳಗಿನಿಂದಲೇ ವಾಸು ಸ್ಕೂಟರನ್ನ ನಡೆಸುತ್ತಾ ಭರ್ರನೆ ಬೀದಿಗೆ ಹೋಗುತ್ತಿದ್ದ. ಅವಳ ಹೃದಯ ಡವಡವನೆ ಹೊಡೆದುಕೊಳ್ಳುತ್ತಿತ್ತು. ಯಾವ್ಯಾವುದೋ ಆಕ್ಸಿಡೆಂಟ್‌ಗಳು ಜ್ಞಾಪಕಕ್ಕೆ ಬರುತ್ತಿದ್ದವು. ಭಯಪಡುತ್ತಿದ್ದ ಮಧುಮತಿ ಒಂದು ದಿನ, ಅವನಿಗೆ ''ಸ್ಕೂಟರ್ ಯಾಕೆ ? ಎಲ್ಲರ ಹಾಗೆ ಬಸ್ಸಿನಲ್ಲೆ ಹೋಗ್ತಾನೆ. ನೀನು ಉಪಯೋಗಿಸ್ಕೊ ಸ್ಕೂಟರ್‌ನಾ ಗೋಪಿ !'' ಎಂದು ಗೋಪಾಲ್‌ರಾವ್ ಹೇಳಿದರು.

"ಯೂನಿವರ್ಸಿಟಿ ಇಲ್ಲಿಂದ ತುಂಬ ದೂರ ಆಗುತ್ತೆ, ಅಕ್ಕಾ ! ನನ್ನ ಆಫೀಸು ಪಕ್ಕದ ಬೀದೀಲೇ ಇದೆ. ನನಗ್ಯಾಕೆ ಸ್ಕೂಟರ್ ?"

"ಅದಕ್ಕಲ್ಲ ಗೋಪಿ."

"ಪರವಾಗಿಲ್ಲ, ಅವನಿಗೆ ಗೊತ್ತು ಹೇಗೆ ಓಡಿಸಬೇಕೂಂತ. ನೀನೇನೂ ಭಯಪಡಬೇಡ" ಎಂದರು ಗೋಪಾಲರಾವ್.

ಎಂಟು ಸೀರೆಗಳನ್ನು ಮಧುಮತಿಗೆ ಕೊಟ್ಟರು ಗೋಪಾಲರಾವ್. "ಏನೋ ಚಿಕ್ಕಂದಿನಲ್ಲಿ ಚೆನ್ನಾಗಿ ಬದುಕಿದ ದಿನಗಳಲ್ಲಿ ಈ ಸೀರೆಗಳಂದ್ರೆ ಆಸೆ ಪಡ್ತಿದ್ದೆ. ಈ ಬಣ್ಣಗಳೆಲ್ಲಾ ತುಂಬಾ ಇಷ್ಟವಾಗ್ತಿತ್ತು. ಅಂದು ನಾನು ಹೇಗಿದ್ದೆ ಅನ್ನೋದನ್ನ ಜ್ಞಾಪಕ ಇಟ್ಕೊಂಡು ಈಗ ಇಷ್ಟು ಹಣ ಸುರಿದು ಈ ಸೀರೆಗಳನ್ನೇಕೆ ತಂದ್ರಿ ? ನಾ ಎಂತಹ ಸೀರೆ ಉಟ್ರೆ ಏನು ? ದಿನ ಕಳೆಯೋದಿಲ್ವಾ ? ಒಂದಾನೊಂದು ದಿನ ಸಂತೋಷದಿಂದ ಉಟ್ಕೊಂಡ ತರಹ ಈ ಸೀರೆಗಳನ್ನು

ಈಗ ಯಾವ ಮುಖ ಇಟ್ಕೊಂಡು ಉಟ್ಕೋಬೇಕು? ಗೋಪಿಗೆ ಹೇಗೆ ಹೇಳೋದೋ ನನಗೆ ನಾಚಿಕೆಯಾಗುತ್ತೆ, ಲಕ್ಷ್ಮಿ ನೀನೇ ಹೇಳು. ಸಾಧಾರಣ ವಾದ ನೂಲಿನ ಸೀರೆಗಳು ಸಾಕು ನನಗೆ ಅಂತ" ಸಂಕೋಚದಿಂದ ತಗ್ಗಿ ಹೋಗಿತ್ತು ಮಧುಮತಿಯ ಧ್ವನಿ.

"ಆ ಸೀರೆಗಳೇ ನಿಮಗೆ ಚೆನ್ನಾಗಿ ಕಾಣುತ್ತೆ. ಯಾತಕ್ಕೆ ಉಟ್ಕೋಬಾರ್ದು? ಒರಟಾದ ಅರವತ್ತನೆ ನಂಬರ್ ಸೀರೆ ಏನು ಚೆನ್ನಾಗಿರುತ್ತೆ? ನಾಳೆ ಕಲೆಕ್ಟರ್ ತಾಯಿ ಆಗ್ತಿದ್ದೀರಲ್ಲಾ......ಫ್ಯಾಷನ್‌ಗೆ ಅಂತಲ್ಲ. ಮೆತ್ತಗಿರುತ್ತೆ ಅಂತ ತಂದಿದ್ದಾರೆ.....ಅಲ್ಲಾ ಅಂತಹ ಒರಟು ಸೀರೇಲಿ ನಿಮ್ಮನ್ನ ನಾನು ನೋಡಲಾರೆನಪ್ಪ!" ಚಮತ್ಕಾರದಿಂದ ಅಂದಳು ಲಕ್ಷ್ಮಿ.

"ನನ್ನ ತಲೆ.....ಯಾರ ತಾಯಿಯಾದ ಮಾತ್ರಕ್ಕೆ ಏನು?" ಮತ್ತೊಂದು ಮಾತು ಬಾಯಿಂದ ಹೊರಡದೆಯೇ ತುಟಿ ಬಿಗಿದುಕೊಂಡಿತು." ಏನೋ ಒಂದು ಅರ್ಥವಾಗ್ತಿಲ್ಲ. ಮುವ್ವತ್ತು, ನಲವತ್ತು ರೂಪಾಯಿನ ಎಂಟು ಸೀರೆಗಳೂ...... ಸ್ಕೂಟರ್.....ಜಮೀನುದಾರರ ಮಗನಂತೆ ಓಡಾಡೋ ವಾಸು.....ಇದೇನು ಗಾರುಡಿಯೋ! ಕನಸೋ, ವಾಸ್ತವವೋ ನನಗೇನೂ ಅರ್ಥವಾಗ್ಲಿಲ್ಲ....ನನ್ನ ತಲೆಯ ಮೇಲೆ ಏನು ಕಲ್ಲು ಬೀಳಲಿದೆಯೋ!"

ನಿಸ್ಸಹಾಯಳಾಗಿ ಉಸಿರುಗರೆದಳು ಮಧುಮತಿ.

ಆ ಇಬ್ಬರ ಸಂಭಾಷಣೆ ಕೇಳಿದ ವಾಸು–"ಅಮ್ಮನಿಗೆ ಇಷ್ಟವಾದ ಸೀರೆಗಳನ್ನು ಜ್ಞಾಪಕದಲ್ಲಿಟ್ಟುಕೊಂಡು ಅವನ್ನೇ ಕೊಂಡಿದ್ದಾರೆ ಅಪ್ಪ" ಎಂದುಕೊಂಡ. ಅವನ ಹೃದಯ ತುಂಬಿಬಂತು.

ಏರು ತಗ್ಗುಗಳಿಲ್ಲದೆ ಹಾಯಾಗಿ, ಸಂತೋಷವಾಗಿ ಸಾಗಿ ಹೋಗುತ್ತಿರುವ ಸಂಸಾರ. ಅಭಿಮಾನ, ಪ್ರೀತಿ ಇರುವ ತಮ್ಮ, ಆದರಿಸುವ ನಾದಿನಿ, ಕ್ಷಣ ತನ್ನನ್ನು ಬಿಟ್ಟು ಕದಲದ ಆಪ್ಯಾಯತೆಯಿಂದ ಬಾಯಿ ತುಂಬಾ 'ಅತ್ತೆ' ಎಂದು ಕರೆಯುವ ಮಕ್ಕಳು. ರೂಪ, ವಿದ್ಯೆ, ನಯ ವಿನಯ ಎಲ್ಲವನ್ನೂ ತನ್ನಲ್ಲಿ ಅಡಗಿಸಿಕೊಂಡು ದಿನದಿನಕ್ಕೂ ಪ್ರವರ್ಧಮಾನಕ್ಕೆ ಬರುತ್ತಿರುವ ತನ್ನ ಮಗ ಭೂತಕಾಲದಲ್ಲಿ ಉಂಟಾಗಿದ್ದ ಕತ್ತಲಿನಲ್ಲಿ ಎದ್ದುಕಾಣುವ ಪ್ರಕಾಶಮಾನವಾದ ಕಿರಣಗಳು. ಮಧುಮತಿಗೇನೋ ತೃಪ್ತಿ. ವಾಸುವಿನೆಡೆಗೆ ಸಂಪೂರ್ಣವಾಗಿ ಆಕರ್ಷಿತಳಾಗಿ ಅವನನ್ನು ಆರಾಧಿಸುವ ಪದ್ಮಜ, ತುಂಟತನ

ಮಾಡುವ ಶೀನು, ಚಲನರಹಿತವಾಗಿ ಏಕಾಗ್ರ ದೃಷ್ಟಿಯಿಂದ ತನ್ನ ಗಮ್ಯ ತನ, ಧ್ಯೇಯ, ತನ್ನ ಭವಿಷ್ಯ ಏನೋ ಸಾಧಿಸಬೇಕೆಂಬ ದೃಢಸಂಕಲ್ಪದಿಂದ ಓದಿ ನಲ್ಲಿ ಮಗ್ನನಾಗಿದ್ದ ವಾಸು, ದಿನಗಳು ಉರುಳಿಹೋಗುತ್ತಿದ್ದವು.

o o o o

ಒಂದು ಸಂಜೆ ಐದು ಗಂಟೆಯ ವೇಳೆ, ಆಗಸ ಮೇಘಾವೃತ್ತವಾಗಿತ್ತು. ಸುಂಟರಗಾಳಿ ಬೀಸುತ್ತಿತ್ತು. ಇನ್ನು ಮಳೆ ಪ್ರಾರಂಭವಾಗಬಹುದು. ಕಳ ವಳದಿಂದ ಪ್ರಕೃತಿಯನ್ನು ವೀಕ್ಷಿಸುತ್ತಿದ್ದಳು ಬಸ್ಸಿಗಾಗಿ ಕಾಯುತ್ತಿದ್ದ ಪದ್ಮಜ.

ಸ್ಕೂಟರ್ ಮೇಲೆ ವೇಗವಾಗಿ ಮುಂದಕ್ಕೆ ಹೋಗುತ್ತಿದ್ದ ವಾಸು, ಸಡನ್ ಬ್ರೇಕ್ ಹಾಕಿ, ಚಪ್ಪಾಳೆ ತಟ್ಟಿ, "ಪದ್ಮಜಾ" ಎಂದು ಕೂಗಿದ.

"ಅಯ್ಯಮ್ಮ" ಎಂದು ಮುಗುಳ್ನಕ್ಕು ಸರಸರನೆ ಅವನ ಬಳಿಗೆ ಬಂದು, "ಮನೆಗೆ ಹೋಗ್ತಿಯಾ ?" ಎಂದು ಪ್ರದರ್ಶಿಸಿದಳು ಪದ್ಮಜ.

ಮೇಲೆ ಮೋಡ ಕವಿದ ಆಕಾಶ, ಧೂಳನ್ನೆಬ್ಬಿಸುವ ಸುಂಟರಗಾಳಿ. ಬಸ್ಸಿಗಾಗಿ ಕಾದಿದ್ದ ನಾಲ್ಕು ಜನ ಕಾಲೇಜ್ ವಿದ್ಯಾರ್ಥಿಗಳು. ಇವೆಲ್ಲದರ ಮಧ್ಯೆ ತನ್ನ ಕಡೆ ಆಸೆಯಿಂದ ನೋಡುತ್ತಿರುವ ಪದ್ಮಜ.

"ಊಂ, ಮನೆಗೇ ! ಬರ್ತೀಯಾ ?" ಆತುರದಿಂದ ಅವಳ ಕಡೆ ನೋಡಿದ.

"ಬಸ್ಸು ಬಂದ್ಬಿಡುತ್ತೇನೋ ?" ಬಸ್ ಸ್ಟಾಪಿನಲ್ಲಿ ನಿಂತು ತನ್ನನ್ನೇ ದುರುಗುಟ್ಟಿ ನೋಡುತ್ತಿರುವ ವಿದ್ಯಾರ್ಥಿಗಳ ಕಡೆ ನೋಡಿದ ಪದ್ಮಜ-"ಕೆಟ್ಟ ಹುಡುಗರು" ಎಂದು ಮೆಲ್ಲಗೆ ಗೊಣಗಿದಳು.

"ಇಲ್ಲಿ ಬಸ್ಸಿಗೆ ಕಾದರೆ ಇನ್ನೇನೂ ಪ್ರಯೋಜನವಿಲ್ಲ. ಮಳೆ ಬಂದ್ಬಿಡುತ್ತೆ, ನನ್ನ ಜೊತೇಲಿ ಬಂದ್ಬಿಡು" ಎನ್ನುತ್ತಾ ಸ್ಕೂಟರ್ ಸ್ಟಾರ್ಟ್ ಮಾಡಿದ ವಾಸು.

ಸಂಕೋಚದಿಂದ ಹಿಂದೆ ಕೂತಳು ಪದ್ಮಜ. "ಹುಷಾರ್, ನನ್ನ ಭುಜದ ಮೇಲೆ ಕೈಹಾಕು" ಎಂದು ವಾಸು, ವೇಗದಿಂದ ಹೋಗುತ್ತಿದ್ದ ಸ್ಕೂಟರ್ ಎತ್ತಿ ಹಾಕಿದಾಗ ಅವನ ಸ್ಪರ್ಶ ಅವಳ ಶರೀರದಲ್ಲಿ ವಿದ್ಯುತ್ ಪ್ರವಹಿಸಿದಂತಾಯಿತು. ಏನೋ ಮಧುರಾನುಭವ. ಮನೆ ಸೇರುವ ಮೊದಲೇ ಧಾರಾಕಾರವಾಗಿ ಮಳೆ.

"ಮಕ್ಕಳಿಬ್ಬರೂ ಮನೆ ಸೇರಿಲ್ಲ. ನೆನೆದುಹೋದರೇನೋ ?" ಜೀಜಿಯು

ಬಾಗಿಲಲ್ಲಿ ನಿಂತು ಆ ಕಡೆ ಈ ಕಡೆ ಆತುರದಿಂದ ದೃಷ್ಟಿ ಹರಿಸಿದಳು ಮಧುಮತಿ.

ಪೂರ್ತಿಯಾಗಿ ನಡೆದು ಮುದ್ದೆಯಾಗಿ ನೆನೆದು ಸ್ಕೂಟರ್ ಇಳಿಯುತ್ತಿದ್ದ ವಾಸು, ಪದ್ಮಜ ಇಬ್ಬರನ್ನೂ ನೋಡುತ್ತಾ "ನೆನೆದುಹೋಗ್ತೀರಿ ಅಂತ ಅಂದ್ಕೊತಾಲೇ ಇದ್ದೆ" ಎನ್ನುತ್ತಾ ಬೇಗನೆ ಒಬ್ಬೊಬ್ಬರಿಗೆ ಒಂದೊಂದು ಟವಲ್ ತುಂಡು ಕೊಟ್ಟು, "ಛೆ ! ದಟ್ಟವಾದ ಕೂದಲು....ಬಿಚ್ಚು, ಆಗಲಿ ಸ್ವಲ್ಪ ಸಾಂಬ್ರಾಣಿ ಹಾಕ್ತೀನಿ, ನಡಿ. ಬಸ್ ಸಿಗಲಿಲ್ವಾ ?" ಎಂದಳು ಮಧುಮತಿ ಪದ್ಮಜಳ ಜಡೆಯನ್ನು ಬಿಚ್ಚುತ್ತಾ.

ಛೆ ! ಛೆ ! ಈವತ್ತು ಬಸ್ ಸಿಗದೆ ಇದ್ದದ್ದು.....ಶನಿ ತರಹ ಈ ಮಳೆ, ನಾಚಿಕೆ ಆಗೋಯ್ತು ಅತ್ತೆ" ಎನ್ನುತ್ತಾ ಥಟಕ್ಕನೆ ಟವಲನ್ನು ಹೊದ್ದುಕೊಂಡಳು.

"ಶನಿ ತರಹಾನೇ ಇರುತ್ತೆ ಅಲ್ವಾ ಮತ್ತೆ ! ಆ ತುಂಟಕೋರ ಹುಡುಗರ ಮಧ್ಯೆ ಬಿಟ್ಟುಬರಬೇಕಾಗಿತ್ತು. ನಾಚಿಕೆ ಎಲ್ಲಾ ಬಿಟ್ಟುಹೋಗ್ತಿತ್ತು" ಎನ್ನುತ್ತಾ ಪೂರ್ತಿ ನೆನೆದಿದ್ದ ಅವಳ ಕಡೆ ನೋಡಿ ಥಟಕ್ಕನೆ ತನ್ನ ನೋಟ ಬೇರೆಡೆ ತಿರುಗಿಸಿದ.

ತುಂಟತನದಿಂದ ಅವಳ ಕಡೆ ನೋಡಿ ರಭಸದಿಂದ ಒಳಗೆ ಹೊರಟುಹೋದಳು ಪದ್ಮಜ.

ಪೂರ್ತಿ ನೆನೆದಿದ್ದ ಅವಳು ತುಂಬಾ ಸುಂದರಳಾಗಿ ಕಂಡು ಒಮ್ಮೆ ಅವನ ಮನಸ್ಸು ಚಲಿಸಿತು. "ದಟ್ಟವಾದ ಕೂದಲು ನೆನೆದುಹೋಯ್ತು ಅಂತ ಒದ್ದಾಡ್ತಿದ್ದೀ, ನಿನಗೆ ಪ್ರಾಣಸಮಾನವಾದ ಹುಡುಗೀನ ಸುರಿಯೋ ಮಳೇಲಿ ಅಷ್ಟು ಜಾಗ್ರತೆಯಾಗಿ ಮನೆಗೆ ಕರೆದುಕೊಂಡು ಬಂದೆನಲ್ಲಾ ನನ್ನನ್ನೇನಾದ್ರೂ ಹೊಗಳಿದ್ಯಾ ?" ನಗುತ್ತಾ ಕೇಳಿದ ಮಧುಮತಿಯನ್ನು.

"ಚೆನ್ನಾಗಿದೆ ! ಬಿಟ್ಬಿಡ್ತೀಯೇನು ! ಯಾರಿಗೋಸ್ಕರ ಕರ್ಕೊಂಡುಬರ್ತೀ ? ತಲೆ ಗಟ್ಟಿಯಾಗಿ ಒರಸ್ತೀನಿ, ಇಲ್ಲಿ ಬಾ, ನೆಗಡಿ ಹಿಡಿಯುತ್ತೆ." ಎನ್ನುತ್ತಲೇ ವಾಸು ತಲೆ ಒರೆಸಿ, "ಬಟ್ಟೆ ಬದಲಾಯಿಸು, ಕಾಫಿ ಕೊಡ್ತೀನಿ. ಪಾಪ, ಅವಳು ಮೊದಲೇ ನಾಚ್ಕೋತಾ ಇದ್ರೆ ನೀನು ಹಾಸ್ಯ ಬೇರೆ ಮಾಡ್ತೀಯಾ ?" ಎಂದಳು ಮಧುಮತಿ ನಗುತ್ತಾ.

ಬಿಸಿ ಕಾಫಿ ಲೋಟದೊಂದಿಗೆ ಬಂದ ಮಧುಮತಿಯ ಕಡೆ ನೋಡುತ್ತಾ,

ಹುಡುಗರ ಜವಾಬ್ದಾರಿನೆಲ್ಲಾ ನಿನಗೆ ಬಿಟ್ಬಿಟ್ಟಿರೋ ಹಾಗಿದೆ ನಮ್ಮಮ್ಮ. ನನಗೆ ಹೇಳತ್ತೆ, ನಿನಗೇನಾದ್ರೂ ಸಹಾಯ ಮಾಡ್ತೀನಿ" ಎಂದಳು ಪದ್ಮಜ.

"ಆದ್ರೆ ಮಹಡಿ ಮೇಲಿದ್ದಾನೇಂತ ಕಾಣುತ್ತೆ. ಭಾವನಿಗೆ ಕಾಫಿ ಕೊಟ್ಬಿಡು ಹೋಗುತ್ತೆ, ಮೊದಲೇ ನನಗೆ ನಾಚಿಕೆಯಾಗಿ ನಾನು ಒದ್ದಾಡ್ತಿದ್ರೆ, ಭಾವ ಅಂತೆ ಗೀವ. ಅಷ್ಟೇ ಅಲ್ಲ, ಕಾಫಿ ಬೇರೆ ತಗೊಂಡ್ಹೋಗಿ ಕೊಡು ಅಂತೀ !" ಹುಸಿಕೋಪ ಪ್ರದರ್ಶಿಸಿದಳು ಪದ್ಮಜ.

"ನನ್ನಮ್ಮ ಅಲ್ವಾ ?" ಗಡ್ಡಹಿಡಿದು ಅವಳ ಮುಖವನ್ನು ತನ್ನೆಡೆಗೆ ತಿರುಗಿಸಿದಳು ಮಧುಮತಿ.

"ನಾ ಹೇಗೆ ನಿನ್ನಮ್ಮ ಆದೆ ?" ಬರುತ್ತಿದ್ದ ನಗುವನ್ನು ತಡೆದು ಕೊಳ್ಳುತ್ತಾ ಕೇಳಿದಳು ಪದ್ಮಜ.

"ಈಗತಾನೆ ಹೇಳ್ದೆ, ನನ್ನ ಡ್ಯೂಟಿ ಯಾವುದಾದ್ರೂ ಹೇಳಿದ್ರೆ ಮಾಡ್ತೀನಿ ಅಂತ. ಈ ವೇಳೆಗೆ ನೂರು ಸಲ ಮಹಡಿ ಹತ್ತಿ ಇಳಿದೆನಲ್ಲಾ ! ನನ್ನ ಕಾಲು ಗಳು ನೋಯ್ತಾ ಇವೆ. ಕೊಟ್ಬಿಟ್ಟು ಬಾ, ಬಜ್ಜಿ ಇದೆ. ಆದರೆ ಆರಿಹೋಗಿದೆ. ತಿಂತಾನೇನೋ ಕೇಳು."

"ಸರಿ ಕೊಡು ಅತ್ತೆ !" ರಭಸದಿಂದ ಅವಳ ಕೈಯ್ಯಲ್ಲಿದ್ದ ಕಾಫಿ ಲೋಟ ವನ್ನು ತೆಗೆದುಕೊಂಡು ಮಹಡಿ ಹತ್ತಿದಳು ಪದ್ಮಜ. ಟಪ್ಪನೆ ಶಬ್ದ ಮಾಡುತ್ತಾ ಕಾಫಿ ಲೋಟವನ್ನು ಟೇಬಲ್ ಮೇಲಿಟ್ಟಳು.

ವಾಸು ಆ ಕಡೆ ನೋಡಿದ. ಅವಳು ಗಿರಕ್ಕನೆ ಹಿಂದಿರುಗಿದಳು.

"ತಿಂಡಿ ಏನಾದ್ರೂ ಇದೆಯಾ ? ಹಸಿವಾಗ್ತಿದೆ."

"ಬಜ್ಜಿ ಇದೆ, ಆರಿಹೋಗಿದೆ. ತಿಂತೀಯಾ ?"

"ತಗೊಂಡ್ಬಾ !"

"ಅಮ್ಮಾ ! ಇಷ್ಟು ತಿನ್ನೋಕಾಗುತ್ತಾ ?" ಅವಳ ಕೈಯಿಂದ ಪ್ಲೇಟನ್ನು ತೆಗೆದುಕೊಳ್ಳುತ್ತಾ ಕೇಳಿದ ವಾಸು.

"ಹಸಿವು ಅಂದ್ಯಲ್ಲಾ ?" ಎಂದಳು ನಗುತ್ತಾ.

"ನೀನೂ ತಿನ್ನು......ನಾ ಇಷ್ಟು ತಿನ್ನಲಾರೆ." ಅವನ ಪ್ಲೇಟನಿಂದ ಎರಡು ಬಜ್ಜಿ ಕೈಗೆ ತೆಗೆದುಕೊಂಡಳು ಪದ್ಮಜ. ಆ ರಾತ್ರಿ ಅವನ ಮನಸ್ಸಿನಲ್ಲಿ ಯಾವುದೋ ಮಧುರವಾದ ಹೊಸ ಊಹೆಗಳು. ಆ ಊಹೆಗಳೆಲ್ಲಾ ವಾಸುವಿ

ನತ್ತ ಹೆಣೆದುಕೊಂಡಿದ್ದವು. ಮೂರನೆಯ ದಿನ ಅವನನ್ನು ನೋಡಿದೊಡನೆ ಅವಳ ಕಣ್ಣುರೆಪ್ಪೆಗಳು ಭಾರವಾಗಿ ಮುಚ್ಚಿಕೊಂಡವು.

"ರಾತ್ರಿ ಟ್ಯೂಷನ್‌ಗೆ ಯಾಕೆ ಬರಲಿಲ್ಲ ? ಯಾಕೆ ಹಾಗಿದೀಯ ? ಮೈ ಸರಿಯಾಗಿಲ್ವಾ ?" ವಾಸು ಮಾಮೂಲಾಗಿ ಪ್ರಶ್ನಿಸಿದ.

"ಹೌದು, ವಾಸು ! ಇಂಪಾರ್ಟೆಂಟ್ ಲೈಸನ್ಸ್ ಇವೆ, ಕೇಳ್ಬೇಕು ಅಂದ್ಕೊಂಡೆ. ಈಗ ಹೇಳಿಕೊಡೋದಕ್ಕೆ ಸಾಧ್ಯಾನಾ ?" ಎಂದಳು ಮಾತನ್ನ ತರಿಸುತ್ತಿದ್ದ ಊಹೆಗಳನ್ನು ತಳ್ಳುತ್ತಾ.

"ಈವತ್ತು ದಿನಕ್ಕಿಂತ ಅರ್ಧ ಗಂಟೆ ಮುಂಚೇನೇ ಹೋಗ್ಬೇಕು. ಸಾಯಂ ಕಾಲ ಹೇಳ್ಕೊಡ್ತೀನಿ. ಕಾಲೇಜ್‌ಗೆ ಚಕ್ಕರ್ ಹಾಕ್ಬಿಡು." ಪದ್ಮಜ ನಕ್ಕಳು.

ಪ್ರತಿನಿತ್ಯ ಅರ್ಧ ಗಂಟೆಯೋ, ಕಾಲುಗಂಟೆಯೋ–ಹಗಲೋ, ರಾತ್ರಿಯೋ ತಾನೆ ಕರೆದು ಪಾಠ ಹೇಳಿಕೊಡುತ್ತಿದ್ದ ವಾಸು. ಅವನು ಹೇಳಿ ಕೊಡುತ್ತಿದ್ದರೆ ಮಂತ್ರಮುಗ್ಧಳಂತೆ ಅವನ ಮಾತುಗಳನ್ನು ಕೇಳುತ್ತಿದ್ದಳು ಪದ್ಮಜ.

ಒಂದು ಭಾನುವಾರ, ಸಂಜೆ ಐದು ಗಂಟೆಯ ವೇಳೆಯಲ್ಲಿ ವಾಸುವಿನ ಕೊಠಡಿಯ ಕಡೆ ಹೋಗುತ್ತಿದ್ದ ಮಧುಮತಿ ತಟಕ್ಕನೆ ನಿಂತು, ಕೊಠಡಿಯಿಂದ ಕೇಳಿಬಂದ ಮಾತುಗಳನ್ನು ಶ್ರದ್ಧೆಯಿಂದ ಕೇಳಿದಳು.

"ಛಿ ! ಛಿ ! ನಿನಗೆ ತಲೇಲಿ ಬುದ್ದಿ ಇಲ್ಲ. ನೆನ್ನೆ ಹೇಳ್ಕೊಟ್ಟ ಪಾಠ ಪುನಃ ಈವತ್ತು ಹೇಳ್ಕೊಡಬೇಕು. ಇಷ್ಟಕ್ಕೆ ನಿನಗೆ ಓದಬೇಕು ಅನ್ನೋ ಆಸೆ ಇಲ್ಲ, ಪದ್ಮಜಾ ! ಸುಮ್ನೆ ಅಡಿಗೆ ಮಾಡೋದನ್ನ ಕಲಿ, ಓದೋದಕ್ಕೆ ಸ್ವಸ್ತಿ ಹೇಳು. ನಿಮ್ಮ ತಂದೆ ದುಡ್ಡು ಹಾಳ್ಮಾಡ್ತೆ, ನಿನಗೆ ಪಾಠ ಹೇಳ್ಕೊಟ್ರೆ ನನಗೆ ತಲೆ ಕೆಟ್ಟುಹೋಗುತ್ತೆ, ನನ್ನ ಓದೂ ಹಾಳು. ದಯವಿಟ್ಟು ನನ್ನ ಕೊಠಡಿಗೆ ಪುನಃ ಬರಬೇಡ" ಎಂದ ವಾಸು ಬೇಸರದಿಂದ ಇಂಗ್ಲೀಷಿನಲ್ಲಿ.

"ವಾಸೂ !" ಕೋಪದಿಂದ ಕೂಗಿದ ಮಧುಮತಿಯ ಧ್ವನಿ ಕೇಳಿ ಬೆಚ್ಚಿ, "ಊಂ, ಅಲ್ಲಮ್ಮಾ !" ಎಂದ.

"ಅತ್ತೆಗೆ ಇಂಗ್ಲೀಷ್ ಬರುತ್ತೆ, ಇನ್ಯಾರಿಗೂ ಅರ್ಥ ಆಗೋದಿಲ್ಲ ಅಂತ ನನ್ನನ್ನ ಇಂಗ್ಲೀಷ್‌ನಲ್ಲಿ ಬಯ್ತಿದ್ದಿ. ಅಲ್ಲಾ ಕೋಪ ಬಂದ್ರೆ ನೀನು ಹೇಗಿರ್ತೀಯೋ ನೋಡ್ಬೇಕು ಅಂತ......" ಎನ್ನುತ್ತಾ ಪಕಪಕನೆ ನಕ್ಕಳು ಪದ್ಮಜ.

"ಸರಿ ಸಂತೋಷ. ಆದ್ರೂ ಇನ್ಮೇಲೆ ನನಗೆ ಅಗತ್ಯವಿಲ್ಲ. ನಾನು ಪಾಠ ಹೇಳೋದಿಲ್ಲ." ಉದಾಸೀನದಿಂದ ಕಂದಿಹೋಯಿತು ವಾಸುವಿನ ಮುಖ.

"ವಾಸೂ ! ಏನೋ ಆ ಅರ್ಥವಿಲ್ಲದ ಕೋಪ.....?" ಕಳವಳದಿಂದ ಕೂಡಿತ್ತು ಮಧುಮತಿಯ ಧ್ವನಿ.

"ಏನೂ ಪರ್ವಾಗಿಲ್ಲ ಬಿಡು ಅತ್ತೆ ! ಒಂದೇ ಸಮ ಬೋರ್ ಮಾಡ್ತಿದ್ರೆ ಏನ್ಮಾಡ್ತಾನೆ ಪಾಪ ! ಕನ್ನಡ, ಇಂಗ್ಲೀಷ್ ಬೆರಸಿ ನಾಲ್ಕು ಮಾತಂದ. ಏನೋ ಕಾಲೇಜಲ್ಲಿ ಓದಿರೋವನು ಎಷ್ಟು ತಮಾಷೆಯಾಗಿರ್ಬೇಕು ? ಚಾಲಾ ಕ್ಯಾಗಿರ್ಬೇಕು ? ಛೆ ! ನಿನ್ನ ಮಗ ಬರೀ ಬುದ್ಧನ ಅವತಾರವಂತಿದ್ರೆ ಇವನಿಗೆ ಕೋಪ, ತಾಪ ಇಂತಹುದೇನಾದ್ರೂ ಇದೆಯೋ ಇಲ್ವೋ ಅಂದ್ಕೊತಿದ್ದೆ. ಇವನಿಗೆ ಚೆನ್ನಾಗಿ ಕೋಪ ಬರೋಹಾಗೆ ಮಾಡ್ಬೇಕು ಅಂತ ಒಂದು ವಾರ ದಿಂದ ಟ್ರೈ ಮಾಡ್ತಿದ್ದೀನಿ. ಊಹುಂ ಪ್ರಯೋಜನವಾಗಲಿಲ್ಲ. ಈವತ್ತು ಕೋಪ ಬರ್‍ತಾ ಇದ್ರೆ ಮಧ್ಯದಲ್ಲಿ ನೀನು ಬಂದ್ಬಿಟ್ಟೆ" ನಡುನಡುವೆ ನಗುತ್ತಾ ಹೇಳುತ್ತಿದ್ದಳು ಪದ್ಮಜ.

ನಿನ್ನ ತರಹ ತಾಯಿ ತಂದೆಯರ ಮಧ್ಯೆ ಇರೋ ಅದೃಷ್ಟ ನನಗಿದ್ದಿದ್ರೆ ನಿನಗಿಂತ ತಮಾಷೆಯಾಗಿ ಚಾಲೂಕಾಗಿ ಇರ್ತಿದ್ದೆ" ಎಂದ. ನಿಷ್ಠುರ ಸ್ವರ ಕೇಳಿ "ವಾಸೂ !" ಎಂದಳು ನೋವಿನಿಂದ, "ಯಾಕಪ್ಪಾ ಅಷ್ಟು ದೊಡ್ಡ ಮಾತುಗಳೂ." ಕೋಪಿಸಿಕೊಂಡಳು ಮಧುಮತಿ.

ಒಡನೆಯೇ ಪದ್ಮಜಳ ಕಣ್ಣುಗಳಲ್ಲಿ ನೀರು ಬಂದಿತು. "ಹಾಸ್ಯಕ್ಕಂತೆ ನಾಗ್ಲೀ ನೀನು ಇಷ್ಟು ಸೀರಿಯಸ್ಸಾಗಿ ತಗೋತಿ ಅಂದ್ಕೊಳ್ಳಿಲ್ಲ" ಎಂದಳು ಪದ್ಮಜ ಹೂತುಹೋದ ಧ್ವನಿಯಲ್ಲಿ.

''ನೋಡು ಪಾಪ ! ಎಷ್ಟು ಸಂಕಟಪಡ್ತಿದ್ದಾಳೋ ! ಸ್ವಲ್ಪ ಮೃದು ವಾಗಿ ಮಾತಾಡೋದನ್ನ ಕಲಿ" ಎನ್ನುತ್ತಾ ವಾಸುವನ್ನು ಬಯ್ದು, ಪದ್ಮಜಳ ಕಣ್ಣೀರನ್ನು ತನ್ನ ಸೀರೆಯ ಸೆರಗಿನಿಂದ ಒರೆಸಿದಳು.

''ಈವತ್ತು ರಜಾ, ಒಳ್ಳೇ ಪಿಕ್ಚರ್ ಇದೆ. ಹೋಗೋಣ ಅಂದ್ಕೊಂಡಿದ್ದೀನಿ, ಅಮ್ಮಾ !"

''ಸರಿ, ಹೋಗು" ಎಂದಳು ಮಧುಮತಿ ವಾಸುವಿನ ಮಾತನ್ನು ತಡೆಯುತ್ತಾ.

''ಸಾರಿ ! ನಡೆದಿದ್ದೆಲ್ಲಾ ಮರೆತುಹೋಗೋಣ, ನನ್ನ ಕೋಪ ನಿನ್ನ ಕಣ್ಣಲ್ಲಿ ನೀರು ತರಿಸಿತು. ಕ್ಷಮಿಸು, ಹೋಗೋಣ್ವಾ ಪಿಕ್ಚರ್‌ಗೆ ?" ಮೃದು ವಾಗಿ ಕೇಳಿದ ವಾಸು.

ಒಂದು ಸಲ ಮಧುಮತಿಯ ಕಡೆ ನೋಡಿ ತಲೆ ತಗ್ಗಿಸಿದಳು ಪದ್ಮಜ.

“ಹತ್ತು ನಿಮಿಷದಲ್ಲಿ ಹೊರಡೋದಕ್ಕೆ ಸಾಧ್ಯವಾ ?” ಎನ್ನುತ್ತಾ ವಾಚ್ ನೋಡಿಕೊಂಡ ವಾಸು.

“ಯಾವ ಟಾಕೀಸಿನಲ್ಲಿದೆ ವಾಸೂ ! ದೂರಾನಾ !” ಇನ್ನೂ ಪದ್ಮಜಳ ಧ್ವನಿಯಲ್ಲಿ ದುಃಖದ ಛಾಯೆ ಇತ್ತು.

“ಮಿನರ್ವ ದೂರಾನೇ, ಶೀನು ಬರ್‍ತ್ತಾನಾ ?”

“ಅವನು ಬರೋದಿಲ್ಲ. ಸ್ಕೂಟರ್ ಇದೆಯಲ್ಲಾ ? ಹೋಗ್ಲಿ ನೀ ಹೋಗು” ಎಂದು ವಾಸುವಿಗೆ ಹೇಳಿ ಮಧುಮತಿಯ ಕಡೆ ನೋಡಿದಳು ಪದ್ಮಜ.

“ಹಿಂದೆ ಕೂತ್ಕೊಂಡು ಹೋದ ಮಾತ್ರಕ್ಕೆ ಏನೂ ಮುಳುಗಿಹೋಗೋ ದಿಲ್ಲ, ಹೋಗ್ಬಿಟ್ಟು ಬನ್ನಿ” ಎಂದಳು ಮಧುಮತಿ.

“ಬರ್‍ತೀಯಾ ?” ನಗುತ್ತಾ ಕೇಳಿದ ವಾಸು.

ಅವನನ್ನು ಹೇಗಾದರೂ ಸಂತೋಷಪಡಿಸಬೇಕೆಂದುಕೊಳ್ಳುತ್ತಿದ್ದ ಪದ್ಮಜ ಸರಸರನೆ ಸಿದ್ಧವಾಗಿ ಬಂದಳು.

o o • o

ಬೀದಿಯ ವರಾಂಡದಲ್ಲಿ ಶಥಪಥ ತಿರುಗುತ್ತಿದ್ದ ಗೋಪಾಲರಾವ್ ಸ್ಕೂಟರ್ ಇಳಿಯುತ್ತಿದ್ದ ವಾಸುವನ್ನೂ, ಪದ್ಮಜಳನ್ನೂ ನೋಡಿ, ಮುಗುಳ್ನಗುತ್ತಾ, “ಹೇಗಿತ್ತು ಪಿಕ್ಚರ್ ?” ಎಂದು ಪ್ರಶ್ನಿಸಿದರು.

“ಅಷ್ಟು ಏನೂ ಅಂದ್ಕೊಳ್ಳಲಿಲ್ಲ. ನಿರಾಳವಾಗಿ ಉಸಿರಾಡಿದಳು ಪದ್ಮಜ. “ಬಹಳ ಚೆನ್ನಾಗಿದೆ. ನೋಡಬೇಕಾದ ಸಿನಿಮಾ. ನೀನೂ ಒಂದು ಸಲ ಹೋಗಿ ನೋಡ್ಕೊಂಡು ಬಾ ಮಾವ” ಎಂದ ವಾಸು.

ಇಬ್ಬರಿಗೂ ಬಡಿಸುತ್ತಾ, “ಹೇಗಿತ್ತು ಪಿಕ್ಚರ್ ? ನೀವು ಹೋಗೋ ಹೊತ್ತಿಗೆ ಕಮೆನ್ಸ್ ಆಗಿ ಹೋಗಿತ್ತಾ ?” ಎಂದು ಕೇಳಿದಳು ಮಧುಮತಿ.

“ನಿನ್ನ ಮಗ ಬರೀ ಸುಳ್ಳು ಹೇಳ್ತಾನೆ.....ಒಂದೇ ಬೋರ್. ಒಂದು ಹಾಡಿಲ್ಲ, ಡಾನ್ಸಿಲ್ಲ......ಎಲೆಕ್ಷನ್ನು....ರಾದ್ಧಾಂತ.....ಇವನು ಬಹಳ ಆಸಕ್ತಿಯಿಂದ ನೋಡಿದ ಬಿಡು.’’ ವಾಸುವಿನ ಕಡೆ ತುಂಟ ನೋಟ ಬೀರುತ್ತಾ ಅಂದಳು ಪದ್ಮಜ.

“ಓ, ನಿನಗಿಷ್ಟವಾಗಲಿಲ್ಲ ಅಂದಹಾಗಾಯ್ತು......ಪಕ್ಕದ ಥಿಯೇಟರ್‌ಗೆ

ಕಳಿಸ್ತಿದ್ದೆನಲ್ಲಾ ! ನಿನಗೆ ಪ್ರೇಮ, ಡ್ಯಾನ್ಸು, ಹಾಡು ಇಷ್ಟಾ ಅನ್ನೋದು ನನಗೆ ಗೊತ್ತಿರಲಿಲ್ಲ."

"ನಿಜವಾಗಿ ಹೇಳು, ತಲೆನೋವು ಬರ‍್ಲಿಲ್ವಾ ?"

"ನಾಳೆ ಪುನಃ ನೋಡಿ ಹೇಳ್ತೀನಿ."

ಪಕಪಕನೆ ನಕ್ಕಳು ಪದ್ಮಜ.

ಎಲ್ಲ ಕಡೆಗಳಿಗೂ......ಕಾಲೇಜು, ಸಿನಿಮಾ, ಪಿಕ್‌ನಿಕ್‌ಗೆ ನಿರಭ್ಯಂತರವಾಗಿ ವಾಸು ಸ್ಕೂಟರ್ ಮೇಲೆ ಹೋಗಿಬರುತ್ತಿದ್ದಳು ಪದ್ಮಜ.

o o o o

"ನೀನು ನನಗೋಸ್ಕರ ಕಾಯಬೇಡ, ಹೊರಟುಹೋಗು ವಾಸೂ ! ನಾನು ಬಸ್ಸಿನಲ್ಲಿ ಹೋಗ್ತೀನಿ."

ಪದ್ಮಜಳ ಧ್ವನಿ ಕೇಳಿದ ವಾಸು ಬೂಡ್ಸು ಹಾಕಿಕೊಳ್ಳುತ್ತಿದ್ದವನು ತಲೆ ಎತ್ತಿ ನೋಡಿದ ಪ್ರಶ್ನಾರ್ಥಕವಾಗಿ.

ಹಿಂದಕ್ಕೆ ತಿರುಗಿ ನಾಲ್ಕು ಹೆಜ್ಜೆ ಹಾಕಿದಳು ಪದ್ಮಜ.

"ಯಾಕೆ ಪದ್ಮಜಾ ! ಯಾಕೆ ಹಾಗೆ ಹೇಳ್ತಿದ್ದೀ ? ಮನೇಲಿ ಏನಾದ್ರೂ ಕೆಲಸ ಇದೆಯಾ ? ಕಾಲೇಜಿಗೆ ಲೇಟಾಗಿ ಹೋಗ್ತೀಯಾ ?" ಎಂದು ಕೇಳಿದ.

ಅವಳು ಉತ್ತರ ಕೊಡಲಿಲ್ಲ. ಸಪ್ಪೆ ಮುಖಮಾಡಿ ನಿಂತಳು.

"ಯಾರಾದ್ರೂ ಏನಾದ್ರೂ ಅಂದ್ರಾ ? ಊಹೂಂ ಏಕಂತಾರೆ ? ಒಂದೇ ಮನೇಲಿರೋವ್ರು, ಅಕ್ಕ ತಮ್ಮನ ಮಕ್ಕಳು......" ಹೆದರುತ್ತಾ ಸರಸರನೆ ಕೇಳಿದ ವಾಸು.

"ನಮ್ಮ ಕಾಲೇಜಿನವರೇ......ನಮ್ಮನ್ನ ನೋಡಿದೊಡನೆ ಬಹಳ ಅಸಹ್ಯವಾಗಿ ವ್ಯಂಗ್ಯವಾಗಿ ನಗೋದು, ಮಾತಾಡೋದು......ಇವೆಲ್ಲಾ ನೋಡಿ ನನಗೇನೋ ಕಷ್ಟವಾಗಿದೆ." ಅವಳ ಕಣ್ಣುಗಳ ತುಂಬಾ ನೀರು.

ಛೆ ! ಎಷ್ಟು ಓದಿದರೂ ನಮ್ಮವರ ಮನಸ್ಸತ್ವ ಬದಲಾಯಿಸೋದಿಲ್ವೇನೋ! ಅಣ್ಣ-ತಂಗೀಯರಾದ್ರೂ, ಸ್ನೇಹಿತರಾದ್ರೂ ಅವರು ಯಾರೆಂಬುದನ್ನು ಗ್ರಹಿಸದೆ ಇಷ್ಟಬಂದಂತೆ ಮಾತಾಡಿಬಿಡೋದೇ ? ನೊಂದುಕೊಂಡ ವಾಸು.

ಅಂದಿನಿಂದ ಒಂದು ವಿಧದಲ್ಲಿ ಅವನಿಂದ ದೂರವಾಗಿರುತ್ತಿದ್ದಳು.

ಪದ್ಮಜ ಬಸ್ ಛಾರ್ಜ್ ಆವಶ್ಯಕತೆ ಇಲ್ಲ. ಶೀನು ಪ್ರತಿನಿತ್ಯ ವಾಸುವಿನ ಜೊತೆ ಸ್ಕೂಟರ್‌ನಲ್ಲೇ ಹೋಗುತ್ತಿದ್ದ.

ಗಟಗಟನೆ ಅರ್ಧಕ್ಕೂ ಹೆಚ್ಚು ಹಾಲು ಕುಡಿದ ವಾಸು ಹೊರಟು ಹೋಗುತ್ತಿದ್ದ ಮಧುಮತಿಯನ್ನು ''ಅಮ್ಮಾ!" ಎಂದು ಕರೆದ.

"ಯಾತಕ್ಕೋಸ್ಕರ ಕರೆದೆ?" ನಿಂತಳು ಮಧುಮತಿ.

"ಈ ಹಾಲನ್ನ ಪದ್ಮಜಾಗೆ ಕೊಟ್ಬಿಡು.''

ಯಾಂತ್ರಿಕವಾಗಿ ಅವನ ಕೈಯಲ್ಲಿದ್ದ ಲೋಟವನ್ನು ತೆಗೆದುಕೊಳ್ಳುತ್ತಾ ಅರ್ಥವಾಗದಂತೆ ನೋಡಿದಳು ಮಧುಮತಿ.

''ಯಾಕೆ, ಪದ್ಮಜ ತರಲಿಲ್ಲ? ನೋಡಿದೆಯಾ? ಅವತ್ತಿನಿಂದ ನನ್ನಹತ್ರ ಹೆಚ್ಚು ಕಡಿಮೆ ಮಾತಾಡೋದೇ ಬಿಟ್ಬಿಟ್ಟಿದಾಳೆ.

ಅವಳು ಬಹಳ ಒಳ್ಳೆ ಹುಡುಗಿನೋ ವಾಸು ಹಾಗಲ್ಲಾ ಮನಸ್ಸಿನಲ್ಲಿ ಟ್ಕೊಂಡು ಸಂಕಟಪಡೋ ಹುಡುಗಿ ಅಲ್ಲ....ಪ್ರತಿನಿತ್ಯ ಅವಳೇ ತಂದು ಕೊಡ್ತಾ ಇದ್ಲು. ಪಾಪ, ಈವತ್ತು ಜ್ವರ ಬಂದಿದೆ. ಕಾಲೇಜಿಗೆ ಹೋಗಲಿಲ್ಲ; ಮಲಗೇ ಇದ್ದಾಳೆ.''

''ಡಾಕ್ಟರನ್ನ ಕರೆಸಿದ್ರಾ?'' ಕಳವಳದಿಂದ ಹೇಳಿದ ವಾಸು.

''ನೆಗಡಿ ಹಿಡಿದಿದೆ. ಅದಕ್ಕೇ ಇರ್ಬೇಕು ಜ್ವರ ಬರ್ತೀನಿ, ಅವಳು ಕುಡೀದೇಇದ್ರೆ ನೀನೇ ಕುಡೀಬೇಕು......ಶೀನು ಕುಡಿಯೋದಿಲ್ಲ......'' ಎನ್ನುತ್ತಾ ಹೊರಟು ಹೋದಳು ಮಧುಮತಿ.

ನಾಲ್ಕು ದಿವಸ ಕಳೆಯುವವರೆಗೂ ನಾರ್ಮಲ್‌ಗೆ ಬರಲಿಲ್ಲ ಪದ್ಮಜಳಿಗೆ ಬಂದಿದ್ದ ಜ್ವರ.

ಅನ್ನವನ್ನು ತುಪ್ಪದಲ್ಲಿ ಕಲೆಸಿ ತುತ್ತನ್ನು ಬಾಯಿಗಿಟ್ಟು ಮಧುಮತಿಯ ಕಡೆ ಕೃತಜ್ಞತೆಯಿಂದ ನೋಡುತ್ತಾ, "ವಾಸು ಊರಲಿಲ್ವ ಅತ್ತೆ? ನನಗೆ ಜ್ವರ ಬಂದದ್ದು ಹೇಗಾದ್ರೂ ಆಗಲಿ, ನೀನು ಸುಸ್ತಾಗಿಹೋಗಿದ್ದಿ. ನನ್ನಕೈಯಲ್ಲೇ ನಾ ತಿಂತೀನಿ ಬಿಡು'' ಎನ್ನುತ್ತಾ ಮಧುಮತಿಯ ಕೈ ಹಿಡಿದುಕೊಂಡಳು ಪದ್ಮಜ.

''ನಿನ್ನೆ ಮೊನ್ನೆ ವಿಚಾರಿಸಿದ ನಿನಗೆ ಜ್ವರ ಇಳಿದಿದೆಯಾ ಅಂತ......ಡಾಕ್ಟರು ನಿನಗೆ ಹಾಲು ಕೊಡಬೇಡ ಅಂತ ಹೇಳಿದ್ದಾರೆ ಅನ್ನೋದನ್ನೂ ಹೇಳ್ದೆ. ಅವರು

ಅವರ ಕಾಲೇಜ್ ಎಲೆಕ್ಷನ್ ಗಲಾಟೇಲಿರೋ ಹಾಗಿದೆ ಮಗು. ಅವಳನ್ನು ವಿಚಾರಿಸದೇ ಇದ್ದುದ್ದಕ್ಕೆ ಕಾರಣವನ್ನು ಹೇಳಿದಳು ಮಧುಮತಿ.

ಅಂದು ಹಾಲಿನ ಲೋಟ ಹಿಡಿದು ರಾತ್ರಿ ಎಂಟು ಗಂಟೆಯ ವೇಳೆಗೆ ವಾಸುವಿನ ಕೊಠಡಿಗೆ ಹೋದಳು ಪದ್ಮಜ. ವಾಸು, ಶೀನು ಪಕಪಕನೆ ನಗುತ್ತಾ ಹರಟುತ್ತಿದ್ದರು. ಶೀನುವಿನೊಂದಿಗೆ ಎಷ್ಟು ಸಲುಗೆಯಿಂದ ಮಾತಾಡ್ತಿದ್ದಾನೆ, ಎಷ್ಟು ನಗ್ತಿದ್ದಾನೆ. ನನ್ನ ಹತ್ರ ಮಾತಾಡೋವಾಗ ಈ ನಗು ಸರಸ ಎಲ್ಲಿ ಹೋಗುತ್ತೋ. ನನ್ನನ್ನ ನೋಡಿದ ಕೊಡಲೆ ಸೀರಿಯಸ್ಸಾಗಿ ಗಂಭೀರವಾಗಿ ಬದಲಾಯಿಸಿಬಿಡ್ತಾನೆ. ನಾನೇನು ಪಾಪ ಮಾಡ್ದೆ ಅಂತ. ನಾಲ್ಕು ದಿವಸ ಜ್ವರ ಬಂತು; ಮೈಮೇಲೆ ಜ್ಞಾನವಿಲ್ಲದೆ ಬಿದ್ಕೊಂಡಿದ್ದೆನಲ್ಲಾ. ಹೇಗಿದೆ ಅಂತಾದ್ರೂ ಕೇಳಿದ್ನಾ? ಇವನಿಗೆ ನಾನ್ಯಾಕೆ ಹಾಲಿನ ಲೋಟ ತಗೊಂಡು ಹೋಗಿ ಕೊಡ್ಬೇಕು. ನನಗೇನು ಹಿಡಿದಿದೆ. ತುಟಿಗಳು ಅದುರಿದವು, ಕಣ್ಣುಗಳು ಒದ್ದೆಯಾದವು. ಎರಡು ಕ್ಷಣ ಮೌನವಾಗಿ ನಿಂತಿದ್ದ ಪದ್ಮಜ ಸರಸರನೆ ಬಂದು ಟೇಬಲ್ ಮೇಲೆ ಲೋಟವನ್ನಿಟ್ಟು ಕೊಡಲೆ ಹಿಂದಿರುಗಿದಳು.

ಒಮ್ಮೆಗೇ ಅಲ್ಲಿನ ವಾತಾವರಣ ನಿಶ್ಶಬ್ದವಾಯಿತು. ಹೊರಡುತ್ತಿದ್ದ ಪದ್ಮಜಳ ಕಡೆ ನೋಡುತ್ತಾ, ''ನಾಲ್ಕು ದಿನ ಜ್ವರ ಬಂದಿದ್ದಕ್ಕೇ ಹೀಗಾಗಿ ಹೋಗಿದ್ದೀಯಲ್ಲಾ, ಅಮ್ಮತರ್ತಾ ಇದ್ರು, ಇಲ್ದಿದ್ರೇ ನಾನೇ ಬರ್ತಿದ್ದೆ. ನೀನ್ಯಾಕೆ ಬಂದೆ?'' ಎಂದ ವಾಸು.

''ನಿನ್ನನ್ನ ಮಾತನಾಡಿಸಬೇಕೂಂತ, ನಿನ್ನನ್ನ ನೋಡಬೇಕೂಂತ'' ರೋಷದಿಂದ ಅವನ ಕಡೆ ನೋಡುತ್ತಾ ಹೇಳಿದಳು ಪದ್ಮಜ.

ಬಿಳಚಿಹೋಗಿ ಅವಳ ಕಡೆ ನೋಡಿದೊಡನೆ ಏನೋ ಅರ್ಥವಾದಂತೆ ''ಸಾರಿ ಪದ್ಮಜಾ, ಒಂದು ಸಲ ಬಂದು ನಿನ್ನನ್ನು ನೋಡ್ಬೇಕು ಅಂದ್ಕೊಂಡೆ. ಆದರೆ.....''

''ಏನು ಮಹಾ ಅಂತ ಸುಮ್ನ ಆಗ್ಬಿಟ್ಟೆ ಅಲ್ವಾ?''

''ಅವನು ಡಾಕ್ಟರೇನು? ನಿನ್ನನ್ನು ನೋಡಿ ಮಾತ್ರ ಏನ್ಮಾಡ್ತಾನೆ?'' ಎಂದ ಶೀನು.

''ಎಸ್ ಕರೆಕ್ಟ್......'' ಮುಗುಳ್ನಗುತ್ತಾ ಹೇಳಿದ ವಾಸು.

ಆಗ ನಕ್ಕುಬಿಟ್ಟಳು ಪದ್ಮಜ...... ''ನನಗೆ ಬಂದ ಜ್ವರ, ಫ್ಲೂ, ನಿಮಗೂ ಬರಬಹುದು......ಆಗ......?''

"ನೀನೂ ಅವನನ್ನು ನೋಡಬೇಡ" ಪಕಪಕನೆ ನಗುತ್ತಾ ಹೇಳಿದ ಶೀನು.

ಆ ಕುಟುಂಬದ ಸದಸ್ಯರೆಲ್ಲರಿಗೂ, ಕೊನೆಯಲ್ಲಿ ವಾಸುವಿಗೂ ಬಾತು ಜ್ವರ. ಖಾಯಿಲೆ ಬಿದ್ದ ಮಧುಮತಿ ಇನ್ನೂ ಊಟ ಮಾಡಿರಲಿಲ್ಲ. ಲಕ್ಷ್ಮಿಗೆ ಮನೆಯ ಕೆಲಸದೊಂದಿಗೇ ಸರಿಹೋಗುತ್ತಿತ್ತು. ಜ್ವರದಿಂದ ಬಳಲಿ ನಿತ್ರಾಣ ನಾಗಿದ್ದ ವಾಸುವಿನ ಶುಶ್ರೂಷೆಯನ್ನು ಪದ್ಮಜಳಿಗೆ ವಹಿಸಿದರು ಗೋಪಾಲ್ ರಾವ್. "ಜಾಗ್ರತೆ ಪದ್ಮಜಾ, ಡಾಕ್ಟರ್ ಹೇಳಿದ ಟೈಂ ಪ್ರಕಾರ ಔಷಧಿ ಕೊಡ್ತಿದ್ದೀ ತಾನೇ......ವಾಸೂ, ಪರವಾಗಿಲ್ಲ ಏನು ಬೇಕೋ ಪದ್ಮಜಾಗೆ ಹೇಳು" ಎಂದು ಹೇಳಿ ಆಫೀಸಿಗೆ ಹೊರಡುತ್ತಿದ್ದರು ಗೋಪಾಲ್‌ರಾವ್.

ಅವಳು ಕೊಡಬೇಕಾಗಿದ್ದ ಔಷಧ, ಹಣ್ಣಿನ ರಸ, ಬಾರ್ಲಿ ಯಾವುದೇ ಆಗಲಿ ನಿತ್ರಾಣನಾಗಿದ್ದ ವಾಸು ಏಳಲಾಗದೆ ಬಾಯನ್ನು ತೆರೆಯುತ್ತಿದ್ದ, ಅವನ ಬಾಯಿಗೆ ಲೋಟವನ್ನು ಹಿಡಿಯುತ್ತಾ ಅವನನ್ನು ನೋಡುತ್ತಾ ಯಾವುದೋ ಮಧುರವಾದ ಯೋಚನೆಗಳಿಂದ ಚಲಿಸುತ್ತಿದ್ದಳು ಪದ್ಮಜ.

ಜ್ವರ ಕಡಿಮೆಯಾಗಿ ವಾಸುವಿನ ದೇಹಸ್ಥಿತಿ ಉತ್ತಮಗೊಂಡ ಮೇಲೂ ಅದೇ ಅಭ್ಯಾಸವಾಗಿಹೋಯಿತು. ಅವರಿಗೆ, ಅವಳು ತಿಂಡಿ ತಂದರೆ ಪೆನ್ನು, ಕಾಗದ ಬಿಡದೆ ಬಾಯಿ ತೆಗೆಯುತ್ತಿದ್ದ ವಾಸು. ಕುಡಿಯುವ ನೀರಿನ ಲೋಟ ವನ್ನು ಕೂಡ ಅವನ ಬಾಯಿಗೆ ಹಿಡಿದು, "ಏನದು, ಹೇಳು" ಎಂದು ಪರಿಹಾಸ್ಯ ಮಾಡುತ್ತಿದ್ದಳು.

"ಪ್ಲೀಸ್....ನನಗೆ ಗೊತ್ತಿಲ್ಲ; ಆಮೇಲೆ ಹೇಳ್ತೀನಿ. ನನ್ನನ್ನ ಡಿಸ್ಟರ್ಬ್ ಮಾಡಬೇಡ." ಎನ್ನುತ್ತಾ ಬೇಸರಪಡುತ್ತಿದ್ದ ವಾಸು.

ಅವನ ದೃಷ್ಟಿಯಲ್ಲಿ ಅವಳು ಒಳ್ಳೆಯ ಮನಸ್ಸನ್ನು ಹೊಂದಿರುವ ಮಾವನ ಮಗಳು. ಒಬ್ಬ ಆತ್ಮೀಯಳು. ಅವಳ ದೃಷ್ಟಿಯಲ್ಲಿ ಅವನು ಅವಳ ಜೀವನ ಜ್ಯೋತಿ. ಎಂದಿಗಾದರೂ ಅವನಿಗೇ ತನ್ನ ಸರ್ವಸ್ವವನ್ನೂ ಅರ್ಪಿಸುವುದು. ಅವನ ರೂಪ, ಮಾತು, ನಗು, ಅವನ ಪ್ರತಿ ಕದಲುವಿಕೆಯೂ ಅವಳನ್ನು ಆಕ ರ್ಷಿಸುತ್ತಿತ್ತು.

೦ ೦ ೦ ೦

ಅಡಿಗೆಯವನನ್ನು ಗೊತ್ತುಮಾಡಿಕೊಂಡಿದ್ದೀನಿ. ನನ್ನ ದೇಹಸ್ಥಿತಿ ಉತ್ತಮವಾಗಿದೆ. ನಿಮ್ಮೆಲ್ಲರ ಕ್ಷೇಮ ಸಮಾಚಾರ ತಿಳಿಸಿ ಗೋಪಿ ಕಾಗದ ಬರೆ

ಯುತ್ತಿರುತ್ತಾನೆ. ನೀನು ಓದಿನಲ್ಲಿ ಸಂಪೂರ್ಣವಾಗಿ ಮಗ್ನವಾಗಿಬಿಟ್ಟಂತಿದೆ. ಸಂತೋಷ, ಆದರೆ ವಾಸೂ ! ಅಹರ್ನಿಶಿ ನಿನಗಾಗಿ, ನಿನ್ನ ಕಾಗದಕ್ಕಾಗಿ ತಪಿಸಿ ಹೋಗುವ ವ್ಯಕ್ತಿಯೊಬ್ಬನಿದ್ದಾನೆ ಎಂಬ ವಿಷಯವನ್ನು ಮರೆಯಬೇಡ. ಮರೆ ತರೆ ನಾನು ಸಹಿಸಲಾರೆ. ನಿನ್ನನ್ನು ನೋಡಿ ಬಹಳ ದಿವಸವಾಯಿತು. ಹೇಗಿ ದ್ದೀಯೋ ನೋಡಬೇಕೆನ್ನಿಸಿದೆ. ಒಮ್ಮೆ ಬಂದು ಹೋಗುವಿ ತಾನೇ ?'' ಎಂದು ಬರೆದ ಪ್ರಸಾದರಾವ್ ಕಾಗದಕ್ಕೆ ಉತ್ತರವಾಗಿ ಮುಂದಿನ ವಾರ ಬರುತ್ತೇನೆಂದು ಕಾಗದ ಬರೆದ ವಾಸು.

ಸೂಟ್ ಕೇಸಿನಲ್ಲಿ ಬಟ್ಟೆಗಳನ್ನು ಜೋಡಿಸಿಕೊಳ್ಳುತ್ತಿದ್ದ ವಾಸುವನ್ನು ''ಎಲ್ಲಿಗೆ ಪ್ರಯಾಣ ? ಇದೋ ಮಿಠಾಯಿ ನೋಡು. ಅತ್ತೆ ಎಷ್ಟು ಚೆನ್ನಾಗಿ ಮಾಡಿದಾರೋ !" ಎಂದಳು ಪದ್ಮಜ.

''ಪ್ರಯಾಣ ಹೊರಡುವಾಗ ಎಲ್ಲಿಗೆ ಎಂದು ಕೇಳಬಾರದು ಗೊತ್ತಾ ?"

''ಮಹಾ ರಾಜಕಾರ್ಯ--ಏನೂ ಕೆಡೋದಿಲ್ಲ......ಆಗ್ಲೆ ಎಲ್ಲಿಗೆ ? ಟೂರಾ"

''ಊಂ... ಬದುಕಿಸಿದೆ.....ಅದೇನು ಈವತ್ತು ಮಿಠಾಯಿ ಮಾಡಿರೋದು ಏನು ವಿಶೇಷ ?

''ನನ್ನ ಬರ್ತ್‌ಡೆ, ನಾಚುತ್ತಿರುವಂತೆ ತಲೆ ತಗ್ಗಿಸಿದಳು ಪದ್ಮಜ.

''ಐದು ವರ್ಷಕ್ಕೊಂದು ಸಲ ಬರುತ್ತಾ? ಅಥವಾ ಐದು ವರ್ಷಕ್ಕೊಂದು ಸಲ ಹುಟ್ಟಿದಹಬ್ಬ ಆಚರಿಸ್ತೀಯಾ ?" ತುಂಟನಗೆ ನಗುತ್ತಾ ಕೇಳಿದ ವಾಸು.

ಇಷ್ಟು ವರ್ಷಗಳು ನಿನಗೆ ಹೇಳಿರಲಿಲ್ಲ. ಈವತ್ತು ನೀನು ಕೇಳಿದ್ದರಿಂದ ಹೇಳ್ದೆ ಅಷ್ಟೇ" ಎಂದು ಹೇಳಿದಳು ಪದ್ಮಜ.

"ಊಟದ ಜೊತೇಲಿ ತಿಂತೀನಿ, ಪದ್ಮಜ. ಈಗ ಸ್ವಲ್ಪ ಹೊರಗಡೆ ಹೋಗಿ ಬರಬೇಕು. ಅರ್ಜೆಂಟಾಗಿ ನಾಳೆ ಬೆಳಗಿನ ಜಾವನೇ ಹೋಗೋದು.''

" ಎಲ್ಲಿ, ಬಾಯಿ ತೆಗಿ ?" ಅವನ ಬಾಯಲ್ಲಿ ಮಿಠಾಯಿ ತುರುಕಿ ನೀರಿನ ಲೋಟವನ್ನು ಕೈಗೆ ಕೊಟ್ಟು ಹೊರಟುಹೋದಳು ಪದ್ಮಜ.

ಅಡಿಗೆ ಮನೆ ಕಡೆ ನೋಡುತ್ತಾ, " ಅಮ್ಮಾ" ಎಂದು ಕರೆದ ವಾಸು.

" ಕರೆದೆಯಾ ವಾಸೂ !" ಎನ್ನುತ್ತಾ ಹೊರಗೆ ಬಂದಳು ಮಧುಮತಿ.

" ಈವತ್ತು ಪದ್ಮಜ ಬರ್ತ್‌ಡೇ ಅಲ್ವಾ ?" ಸಾವಧಾನವಾಗಿ ಕೇಳಿದ.

" ಹೌದು ನಾನೇನು ಕೊಡಬಲ್ಲೆ ? ಮಿಠಾಯಿ ಮಾಡು ಅಂದ್ಲು, ಮಾಡ್ದೆ " ಎಂದಳು ಮಧುಮತಿ ಖಿನ್ನವದನಳಾಗಿ.

" ಕೊಡಲಾರ್ದೆ ಏನಮ್ಮಾ ! ಇದೋ, ಕೊಟ್ಬಿಡು " ಎನ್ನುತ್ತಾ ಒಂದು ಪ್ಯಾಕೆಟ್ ಕೊಟ್ಟ ವಾಸು.

ಪ್ಯಾಕೆಟ್ ಬಿಚ್ಚಿ ನೋಡಿದ ಮಧುಮತಿ, "ಮೈಸೂರ್ ಸಿಲ್ಕ್ ಅಲ್ವಾ" ಎನ್ನುತ್ತಾ ವಾಸುವನ್ನು ಪರಿಶೀಲನಾ ದೃಷ್ಟಿಯಿಂದ ನೋಡಿದಳು; "ಈ ಸೀರೆಗೆ ಹಣ ಎಲ್ಲಿಂದ ಬಂತು?" ಎನ್ನುವ ಪ್ರಶ್ನೆಗೆ ಉತ್ತರ ಅವಳಿಗೆ ಬೇಕಾಗಿದ್ದರೂ ಅವಳು ಏನೂ ಕೇಳಲಿಲ್ಲ.

" ನಾನು ತಂದೆ ಅಂತ ಅತ್ತೆಗೆ ಹೇಳಿ, ಪದ್ಮಜಳಿಗೆ ಕೊಟ್ಬಿಡಮ್ಮ " ಎನ್ನುತ್ತಾ ಹೊರಟುಹೋದ.

ರಾತ್ರಿ ಊಟ ಮಾಡುತ್ತಾ, ತಾನು ತಂದಿದ್ದ ಹೊಸ ಸೀರೆಯನ್ನುಟ್ಟಿದ್ದ ಪದ್ಮಜಳ ಕಡೆ ನೋಡುತ್ತಾ, ಮುಗುಳ್ನಗೆಯಿಂದ, "ಸೀರೆ ಚೆನ್ನಾಗಿದೆಯಾ ಪದ್ಮಜಾ ! ನಿನಗೆ ಇಷ್ಟವಾಯ್ತಾ ? ಎಂದು ಕೇಳಿದ ವಾಸು.

" ನೀನು ಯಾವುದು ತಂದ್ರೂ ನನಗೆ ಇಷ್ಟವಾಗುತ್ತೆ " ಅವನ ನೋಟ ಮಾಮೂಲಿನಂತೆಯೇ ಇದ್ದರೂ, ಅವಳ ಭಾವನೆಗಳು ಬೇರೆಯಾದ್ದರಿಂದ ನಾಚಿಕೆಯಾಗಿ ಕಣ್ರೆಪ್ಪೆಗಳು ಮುಚ್ಚಿಕೊಂಡವು.

ಏನೇನೋ ಡಬ್ಬಗಳನ್ನು ತಂದು ಬ್ಯಾಗಿನಲ್ಲಿಟ್ಟಳು ಲಕ್ಷ್ಮಿ.

" ಅದೇನು ?" ಎಂದು ಕೇಳಲಿದ್ದ ವಾಸುವಿಗೆ ಉತ್ತರವೆಂಬಂತೆ.

" ಅಡಿಗೆ ಮಾಡಿಸ್ಕೊಂಡು ಊಟ ಮಾಡ್ತಿದಾರಂತೆ, ಉಪ್ಪಿನಕಾಯಿ ತಗೊಂಡು ಹೋಗಿ ಕೊಡು" ಎಂದರು. ಗೋಪಾಲರಾವ್.

ಡಬ್ಬವನ್ನು ತೆಗೆದು ನೋಡುತ್ತಾ, "ನಿಮ್ಮ ಅಮ್ಮ ಮಾಡಿದ್ರಾ ಈ ಮಿಠಾಯಿ " ಎಂದು ಕೇಳಿದರು ಪ್ರಸಾದರಾವ್.

" ಅಮ್ಮ ಮಾಡಿದ್ದನ್ನು ಇವರು ತಿನ್ನೋದಿಲ್ವಾ ?" ವಾಸುವಿನ ಮೃದು ಹೃದಯ ಭಾರವಾಯಿತು ಕ್ಷಣದಲ್ಲಿ ಸಾವರಿಸಿಕೊಂಡು " ಏನಾದ್ರೂ ಆಗ್ಲಿ, ನಿಜ ಹೇಳ್ತೀನಿ " ಎಂದುಕೊಂಡ ವಾಸು.

" ಹೌದು. ನಿನ್ನೆ ಪದ್ಮಜಳ ಹುಟ್ಟು ಹಬ್ಬ. ಅತ್ತೆ ನಿಮಗೆ ಕೊಡು ಅಂತ ಬ್ಯಾಗ್‌ನಲ್ಲಿಟ್ರು, ಅಮ್ಮ ಮಾಡಿರೋದೆ ಆ ಮಿಠಾಯಿ, ಯಾಕೆ ಹಾಗೆ ಕೇಳ್ತಿದ್ದೀರಿ ?" ವಾಸುವಿನ ಧ್ವನಿ ಕಂಪಿಸಿತು.

" ಅಂ.......... ಏನಿಲ್ಲ, ನಿಮ ಅಮ್ಮ ಮಿಠಾಯಿ ತುಂಬಾ ಚೆನ್ನಾಗಿ ಮಾಡ್ತಿದ್ರು " ಎನ್ನುತ್ತಾ ಒಂದು ಮಿಠಾಯಿ ಚೂರನ್ನು ಕೈಗೆ ತೆಗೆದುಕೊಂಡು

ಕಿಟಕಿಯ ಬಳಿ ಹೋಗಿ ಶೂನ್ಯವನ್ನು ನೋಡುತ್ತಾ ವಾಸು ಹುಟ್ಟುವುದಕ್ಕೆ ಮೊದಲು ತಾನು ಕಳೆದ ದಿನಗಳನ್ನು ಜ್ಞಾಪಿಸಿಕೊಳ್ಳುತ್ತಾ, ಪ್ರೀತಿಯಿಂದ ಆ ಮಿಠಾಯಿಯನ್ನು ಅಗಿಯಲಾರಂಭಿಸಿದರು ಪ್ರಸಾದರಾವ್. ವರ್ತಮಾನ ವನ್ನು ಮರೆತು ಹಿಂದಿನದನ್ನು ನೆನೆದು ಮನಸ್ಸು ಪ್ರಶಾಂತವಾಗಿತ್ತು. ಭೂತ ಕಾಲದ ಕೆಲವು ಸಂಘಟನೆಗಳು ಮಧುರವಾಗಿದ್ದವು. "ಇನ್ನೊಂದು ತಗೊಳ್ಳಿ ಅಪ್ಪಾ !" ಅವನ ಭೂತಕಾಲದ ನೆನಪು ಚೆದುರಿಹೋದವು. ಯಾಂತ್ರಿಕವಾಗಿ ವಾಸುವಿನ ಕೈಯಲ್ಲಿದ್ದ ಮಿಠಾಯಿ ಚೂರನ್ನು ಕೈಗೆ ತೆಗೆದುಕೊಳ್ಳುತ್ತಾ, " ಬಹಳ ಚೆನ್ನಾಗಿದೆ ಮಿಠಾಯಿ ಅಂದ್ರೆ ನಿಮಗೆ ತುಂಬಾ ಇಷ್ಟ " ಎಂದು ಬಿಟ್ಟರು ಪ್ರಸಾದರಾವ್.

ತೃಪ್ತಿಯಿಂದ ಸಂತೋಷದಿಂದ ತಂದೆಯ ಕಡೆ ನೋಡಿದ ವಾಸು.

ನಂತರ, ಅಡಿಗೆ ಚೆನ್ನಾಗಿ ಮಾಡಿದ್ದಾನೆ ಅಂತೀಯಾ ? ನಿನಗೆ ಇಷ್ಟ ವಾಯ್ತಾ ? ಈ ಮನೆ ಹೇಗಿದೆ '' ಎಂದು ಕೇಳಿದರು ಪ್ರಸಾದರಾವ್.

" ಹೋಟೆಲ್ ಊಟಕ್ಕಿಂತ ಚೆನ್ನಾಗೇ ಇದೆ. ಮನೆ ಚೆನ್ನಾಗಿದೆ ಅಪ್ಪಾ? ಬಾಡಿಗೆ ಎಷ್ಟು ? ಇಷ್ಟು ದೊಡ್ಡಮನೆ ಯಾಕೆ ತಗೊಂಡ್ರಿ ?

" ಬಾಡಿಗೆ ಮನೆ ಅಲ್ಲ, ಮನೆ ನಮ್ಮದೇ ಏನೋ ಚಾನ್ಸ್ ಬಂತು. ಕೊಂಡ್ಕೊಂಡುಬಿಟ್ಟೆ.''

ನಂಬಲಾಗದಂತೆ ಆಶ್ಚರ್ಯದಿಂದ ನೋಡುತ್ತಾ "ಮೂವತ್ತು, ನಲವತ್ತು ಸಾವಿರವಾದ್ರೂ ಆಗಿರಬೇಕಲ್ವಾ ?'' ಎಂದ ವಾಸು.

"ಹರಾಜು ಹಾಕಿದ್ದು......ಇಪ್ಪತ್ತು ಸಾವಿರಕ್ಕೇ ಸಿಕ್ತು. ಚೆನ್ನಾಗಿದೆ ತಾನೇ ?"

''ಚೆನ್ನಾಗಿದೆ."

"ನಿಮ್ಮ ಅಮ್ಮ ಬಂದಮೇಲೆ ಮಾವನ ಮನೆಯವರಿಗೂ, ನಿಮಗೂ ಏನೂ ಅಸಮಾಧಾನಗಳೇನೂ ಆಗಿಲ್ಲ ತಾನೇ"ಎನ್ನುತ್ತಾ ಒಂದೊಂದು ವಿಷಯ ವನ್ನೂ, ಅವರ ಮನೆಯಲ್ಲಿ ಎಲ್ಲರೂ ಹೇಗೆ ನಡೆದುಕೊಳ್ಳುತ್ತಾರೆಂಬ ವಿಷ ಯವನ್ನು ಕೇಳಿ ತಿಳಿದುಕೊಂಡು ತೃಪ್ತಿಯಿಂದ ನಿಟ್ಟುಸಿರು ಬಿಟ್ಟರು ಪ್ರಸಾದ ರಾವ್.

ಎರಡು ದಿನಗಳ ನಂತರ ಊರಿಗೆ ಹೊರಡಲು ಸಿದ್ಧನಾಗುತ್ತಿದ್ದ ವಾಸು

ವಿಗೆ ಸಪೋಟಾದ ಚೀಲ ತೋರಿಸುತ್ತಾ, ''ಹೋಗುವಾಗ ಮರೆತು ಹೋಗ್ಬೇಡ ಮಕ್ಕಳು ತಿನ್ನಾತ್ರೆ.'' ಎಂದರು ಪ್ರಸಾದರಾವ್.

"ಎಲ್ಲಿದೂ ? ಕೊಂಡ್ಕೊಂಡ್ರಾ ?" ಕೇಳಿದ ವಾಸು.

"ಓಹೋ! ಆದರೆ ಮನೆ ಎಲ್ಲಾ ನೀನು ನೋಡಲೇ ಇಲ್ಲ ಅಂದ ಹಾಗಾಯ್ತು. ಹಿತ್ತಲಿನಲ್ಲಿ ಸಪೋಟ ಗಿಡ ಇದೆ. ಒಂದು ಸಲ ಮನೆಯಲ್ಲಿ ಸರಿಯಾಗಿ ನೋಡು. ನಿನಗೆ ಹಿಡಿಸದೆ ಇದ್ರೆ ಹೇಗೋ ಹತ್ತು ಸಾವಿರ ಲಾಭಕ್ಕೆ ಮಾರಿಬಿಡ್ತೀನಿ" ಎಂದರು ಪ್ರಸಾದರಾವ್ ನಗುತ್ತಾ.

ವ್ಯಾಪಾರ ಲಕ್ಷಣಗಳನ್ನೆಲ್ಲಾ ಜೀರ್ಣಿಸಿಕೊಂಡು ಮೆರೆಯುತ್ತಿರುವ ತಂದೆಯ ಕಣ್ಣುಗಳನ್ನೇ ದಿಟ್ಟಿಸಿ ನೋಡಿದ ವಾಸು.

ಎರಡು ಕ್ಷಣ ನಿಶ್ಶಬ್ದವಾಗಿ ಕಳೆದ ನಂತರ, "ಏನಂತೀ ?" ಎಂದು ಪ್ರಶ್ನಿಸಿದರು ಪ್ರಸಾದರಾವ್.

''ಪಾಪ ! ಯಾರೋ ಆ ನಿರ್ಭಾಗ್ಯರು ! ಆ ಹತ್ತು ಸಾವಿರದ ಜೊತೆಗೆ ಇನ್ನೂ ಹತ್ತು ಸಾವಿರ ಅವರಿಗೇ ಕೊಟ್ಟು ಕೊಂಡಿದ್ದರೆ ಸರಿಹೋಗುತ್ತಿತ್ತು...... ಹೋಗ್ಲಿ ನೀವು ಇದರ ಮೇಲೆ ಹಾಕಿದ ದುಡ್ಡಿಗೆ ಬಡ್ಡಿ ಬರುತ್ತೆ. ಬಾಡಿಗೆಗೆ ಕೊಡಿ. ಯಾರಿಗಾದರೂ ಬಡವರಿಗೆ ಉಚಿತವಾಗಿ ಕೊಡಿ. ಇಷ್ಟು ದೊಡ್ಡ ಮನೆ ಯಾಕೆ ?"

ಮಗನ ಮಾತುಗಳು ಇಷ್ಟವಾಗದ ಪ್ರಸಾದರಾವ್, ''ದೊಡ್ಡದು ಹೇಗಾಗುತ್ತೆ ? ಬಿಲ್ಡಿಂಗ್ ಕಂಟ್ರಾಕ್ಟುಗಳು ತಗೋತಾನೇ ಇರ್ತೀನಲ್ಲಾ? ಸಿಮೆಂಟು, ಕಬ್ಬಿಣ ಅವೆಲ್ಲಾ ಸ್ಟೋರ್ ಮಾಡೋದಕ್ಕೆ ಎಷ್ಟು ದೊಡ್ಡದಾದ್ರೂ ಸಾಕಾಗೋದಿಲ್ಲ" ಎಂದರು.

"ಇದೆಲ್ಲಾ ತಗೊಂಡುಹೋದ್ರೆ, ಅಲ್ಲಿ ಎಲ್ಲರೂ ಲಕ್ಷ ಪ್ರಶ್ನೆಗಳನ್ನು ಕೇಳ್ತಾರೆ. ನಮ್ಮದೆಲ್ಲಾ ಚಿದಂಬರ ರಹಸ್ಯ" ಗೊಣಗಿದ ವಾಸು.

ಕೇಳಲಿಲ್ಲವೆಂಬಂತೆ ಮೌನವಾಗಿದ್ದು ಬಿಟ್ಟರು ಪ್ರಸಾದರಾವ್.

ಸ್ಟೇಷನ್‌ಗೆ ಹೊರಟ. ರಿಕ್ಷಾದಲ್ಲಿ ಸಪೋಟ ಚೀಲವೂ ಇತ್ತು. ರೈಲಿನಿಂದ ಹೊರಗೆ ಬಿಸಾಡಿಬಿಡೋಣ ಎಂದುಕೊಂಡ ವಾಸು. ಆದರೆ ಮನಸ್ಸು ಒಪ್ಪಲಿಲ್ಲ. ಸುಳ್ಳುಗಳು ಹೇಳುವುದು ಅಭ್ಯಾಸವಾಗಿಹೋಗಿತ್ತು. ಎಲ್ಲಿಯದು ಎಂದು ಕೇಳಿದಾಗ ಏನೋ ಉತ್ತರ ಹೊಳೆಯುತ್ತೆ ಎಂದು ಮನಸ್ಸಿನಲ್ಲಿ ನಕ್ಕ.

ಓದು ಮುಗಿಯುವವರೆಗೂ ಈ ಅಜ್ಞಾತ ವಾಸ ತಪ್ಪೋದಿಲ್ಲವೇನೋ ಎನ್ನಿಸಿತು.

೦ ೦ ೦ ೦ ೦

"ಎಲ್ಲಿಯದು ಇಷ್ಟು ಸಪೋಟ? ಕೊಂಡ್ಕೊಂಡ್ಯಾ?......ಎಲ್ಲಿಯದು ಹಣ ವಾಸೂ. ಮೊನ್ನೆ ಅಷ್ಟು ಬೆಲೆ ಬಾಳೋ ಸೀರೆ ತಂದೆ." ಚೀಲವನ್ನು ಬಿಚ್ಚಿ ಆಶ್ಚರ್ಯದಿಂದ ನೋಡುತ್ತಾ ಕೇಳಿದಳು ಪದ್ಮಜ.

"ಎಲ್ಲಿಂದ ಬರುತ್ತಾ? ನನ್ನ ಖಜಾನೆಯಲ್ಲಿ ಸಾಲ."

"ಅಂದ್ರೆ ?"

"ಅಂತಹ ಋಣ ಹೇಗಾದ್ರೂ ತೀರಿಸಲೇಬೇಕಾಗುತ್ತೆ."

"ಹೇಗೆ ತೀರಿಸ್ತೀ ?"

"ನೀನು ಟ್ಯೂಷನ್ ಫೀ ಕೊಡಬೇಕು."

"ನಾನೇನೂ ಟ್ಯೂಷನ್‌ಗೆ ಬರ್ತಿಲ್ಲ ಮಹಾ ನೀನು ಹೇಳಿಕೊಡೋದು..... ಬುಡ್ಡಮೂತಿ ಮಾಡಿಕೊಂಡು ಕೋಪ ನಟಿಸಿದಳು ಪದ್ಮಜ.

"ಹೋಗ್ಲಿ, ಇಷ್ಟು ದಿನ ಹೇಳಿಕೊಟ್ಟಿದ್ದಕ್ಕೇ ಕೊಡು!" ತುಂಟನಗೆ ನಕ್ಕ ವಾಸು.

ಏನೋ ಹೇಳಬೇಕೆಂದು ಅವಳ ತುಟಿಗಳು ಅಲ್ಲಾಡಿದವು. ಆದರೆ ಮಾತು ಹೊರಬರಲಿಲ್ಲ.

"ಸ್ಕೂಟರ್ ಬಾಡಿಗೇನೂ ಕೊಡಬೇಕು ?" ರೇಗಿಸಿದ ವಾಸು. ರೋಷದಿಂದ ವಾಸುವಿನ ಕಡೆ ನೋಡಿದಳು ಪದ್ಮಜ. ಅವಳ ಕಡೆ ನೋಡಿದ ಅವನಲ್ಲಿ ತುಂಟತನ ಹೆಚ್ಚಿತು.

"ಎಲ್ಲಿಯದು ಸಪೋಟ ?" ಅಣಗಿಸಿದಂತೆ ಅಂದು "ಬಾಯಿ ಮುಚ್ಕೊಂಡು ಗಂಭೀರವಾಗಿ ಒಳಗೆ ತಗೊಂಡು ಹೋಗಿಡು. ನಮ್ಮ ಫ್ರೆಂಡ್ ಮನೇಲಿ ದೊಡ್ಡ ಸಪೋಟ ಗಿಡ ಇದೆ, ಕೊಟ್ರು, ಸರಿಯಾ !" ಅಂದ ವಾಸು.

"ಹಾಗೇಂತ ಮೊದಲೇ ಯಾಕೆ ಹೇಳಬಾರ್ದು ? ನಿನಗೆ ಅಹಂಕಾರ" ಕೋಪ ಬಂದ ಪದ್ಮಜಳ ಮುಖ ಕೆಂಪಾಯಿತು.

"ಅಲ್ವಾ ಮತ್ತೆ!" ಬೇಗ ಬೇಗ ಬಟ್ಟೆಗಳನ್ನು ಬದಲಾಯಿಸಿದ ವಾಸು.

"ಛಿ! ಏನಿದು? ಇಬ್ಬರ ಮಧ್ಯೆ ಸಲುಗೆ ಹೆಚ್ಚಾಗಿಹೋಯ್ತು ಅಲ್ವಾ ವಾಸೂ, ಅವಳು ಏನೋ ಗೊತ್ತಿಲ್ದೆ ಕೇಳಿದರೆ ಹಾಗೆ ಗದರಿಸ್ಕೋತೀಯಲ್ಲಾ? ವರಾಂಡಾದಿಂದ ಕೊಠಡಿಗೆ ಬರುತ್ತಾ ಕೇಳಿದಳು ಮಧುಮತಿ.

"ಎಲ್ಲಿಯದು? ಯಾರು ಕೊಟ್ರು? ಈ ಪ್ರಶ್ನೆ ಕೇಳಿದರೆ ನನಗೆ ಗಂಟಲಲ್ಲಿ ಬೇವಿನಕಾಯಿ ಸಿಕ್ಕಕೊಂಡಹಾಗಾಗುತ್ತೆ. ಪರವಾಗಿಲ್ಲ, ಒಂದು ದಿವಸ ಲೆಕ್ಕ ಹೇಳಿಕೊಡೋವಾಗ ಕೋಪ ಮಾಡ್ಕೊಂಡೇಂತ ನನ್ನನ್ನು ಕೇಳೋದೇ ಬಿಟ್ಬುಬಿಟ್ಳು. ಇನ್ಮೇಲೆ ನನ್ನನ್ನು ಹಾಗೆ ಪ್ರಶ್ನೆ ಕೇಳೋದನ್ನು ಬಿಟ್ಬುಬಿಡ್ತಾಳೆ." ನಿರ್ಲಕ್ಷ್ಯದಿಂದ ನಕ್ಕ ವಾಸು. ಉದಾಸೀನಳಾಗಿ ಹೊರಟು ಹೋದಳು ಪದ್ಮಜ.

ಮಹಡಿಯ ಮೇಲೆ ಏ ಕಾಂ ತ ದ ಲ್ಲಿ ವಾಸುವಿನೊಂದಿಗೆ ಮಾತನಾಡುತ್ತಿದ್ದ ಗೋಪಾಲರಾವ್ ಸಪೋಟ ಹಣ್ಣಿನ ಸಿಪ್ಪೆ ಬಿಡಿಸಿ ತಿನ್ನುತ್ತಾ, "ಬಹಳ ಚೆನ್ನಾಗಿದೆ. ನಿಮ್ಮ ಅಪ್ಪ ಕೊಂಡ್ಕೊಂಡಿರೋ ಮನೆ ಹಿತ್ತಲಿನಲ್ಲಿ ಸಪೋಟ ಮರ ಇದೆಯಾ?" ಎಂದರು.

"ಇಲ್ದಿದ್ರೆ, ಕೊಂಡ್ಕೊಂಡು ಬಂದೆ ಅಂದ್ಕೊಂಡ್ರಾ? ಎಂದ ನಗುತ್ತಾ.

"ಸಪೋಟ ಹಣ್ಣು ತುಂಬಾ ಚೆನ್ನಾಗಿದೆ, ಅಲ್ವಾ?" ಪದ್ಮಜಳನ್ನು ಕೇಳಿದ ವಾಸು.

"ನಾನು ತಿನ್ನಿಲ್ಲ, ನನಗೆ ಬೇಕಿಲ್ಲ" ಎಂದಳು ಪದ್ಮಜಕೋಪದಿಂದ.

ಅವಳ ಕೋಪವನ್ನು ಹೋಗಲಾಡಿಸಬೇಕೇಂಬ ಉದ್ದೇಶದಿಂದ ಬಲವಂತದಿಂದ ಸಪೋಟ ಹಣ್ಣನ್ನು ಸುಲಿದು ಅವಳ ಬಾಯಲ್ಲಿ ತುರುಕಿದ ವಾಸು.

ಅವನ ಆ ಚೇಷ್ಟೆಯಿಂದ ಅವಳಿಗೆ ತುಂಬಾ ಸಂತೋಷವಾಯಿತು. ಅವಳ ಶರೀರ ಪುಳಕಿತಗೊಂಡಿತು. ಊಹಾಲೋಕದಲ್ಲಿ ಮೈಮರೆತಳು.

o o o o

ಎಂ.ಎ. ಫಸ್ಟ್ ಕ್ಲಾಸಿನಲ್ಲಿ ಪಾಸಾಗಿದ್ದ ವಾಸು. ಪದ್ಮಜ ಬಿ.ಎ. ಪಾಸ್ ಮಾಡಿದ್ದಳು. ಎಂ.ಎ. ಮುಗಿಯುವ ವೇಳೆಗೆ ಇನ್ನೆರಡು ಬಾರಿ

ಪ್ರಸಾದ್‌ರಾವ್ ಬಳಿಗೆ ಹೋಗಿಬಂದಿದ್ದ ವಾಸು, ಜಾನಕಮ್ಮ, ರಾಜಶೇಖರ್ ಅವರ ಮನೆಯವರನ್ನೆಲ್ಲಾ ನೋಡಿ ಬರಬೇಕೆಂದು ಅಲ್ಲಿಗೂ ಹೋಗಿ ನಾಲ್ಕು ದಿನಗಳಿದ್ದು ಬಂದಿದ್ದ ಜಯಳ ಸೌಂದರ್ಯ, ಸಂಗೀತ ಒಂದು ವಿಧದಲ್ಲಿ ವಾಸುವನ್ನು ಆಕರ್ಷಿಸಿತ್ತು.

ರಿಸಲ್ಟ್ ತಿಳಿದ ದಿನ–"ಇನ್ನೂ ಮುಂದಕ್ಕೆ ಓದ್ತೀಯಾ ?" ಎಂದು ಪದ್ಮಜಳ ಕಡೆ ನೋಡುತ್ತಾ ಸಂತೋಷದಿಂದ ಕೇಳಿದ.

"ತಾವು ?" ಎದುರು ಪ್ರಶ್ನೆ ಹಾಕಿದ್ದಳು ಪದ್ಮಜ.

"ನಿಮ್ಮ ದೊಡ್ಡಪ್ಪ ಆಶೀರ್ವಾದ ಮಾಡಿದ್ದಾರಲ್ಲಾ– ಐ.ಎ.ಎಸ್. ಆಫೀಸರ್ ಆಗ್ಬೇಕು ಅಂತ!" ಹೆಮ್ಮೆಯಿಂದ ನಕ್ಕ ವಾಸು.

ಕ್ಷಣಕಾಲದ ನಂತರ ನಿಧಾನವಾಗಿ, "ವಾಸೂ! ನನ್ನನ್ನು ಇನ್ನೂ ಓದೂ ಅಂತೀಯಾ ?" ಎಂದು ಕೇಳಿದಳು ಏನೋ ನಾಚಿಕೆ ಗಂಟಲಿಗೆ ಬಂದು ಒತ್ತರಿಸಿದಂತಾಗಿ.

ಪಕಪಕನೆ ನಕ್ಕ ವಾಸು, "ಅದು ನಿನ್ನಿಷ್ಟ. ಓದಿಸೋನಿಮ್ಮ ತಂದೆ ಇಷ್ಟ."

"ಹಾಗಲ್ಲ; ಓದಬಲ್ಲೆನಾ ಅಂತ ?" ಅವನ ಮಾತನ್ನು ತಡೆಯುತ್ತಾ ಕೇಳಿದಳು ಪದ್ಮಜ.

"ಮದುವೆಯಾಗ್ಬೇಕು ಅನ್ನೋ ಆಸೆ ಹುಟ್ಟಿದ್ರೆ.....ಮನೇಲಿ ಕೂತ್ಕೋ. ಇಲ್ದಿದ್ರೆ ಎಮ್.ಎ. ಓದು. ಪಾಸಾಗ್ತೀ ಕಷ್ಟಪಟ್ಟು ಓದಿದ್ರೆ ಮಾತ್ರ !" ಪುನಃ ನಕ್ಕ ವಾಸು.

"ಛೀ, ಹೋಗು, ಎಲ್ಲಾ ಹಾಸ್ಯಾನೇ !"

"ಹೇಗೂ ಹೋಗ್ತೀನಲ್ಲಾ ?"

ಎಂದು ಹೇಳುತ್ತಿದ್ದ ವಾಸುವಿನ ಕಡೆ ದುಃಖದಿಂದ ನೋಡಿ ತಲೆ ತಗ್ಗಿಸಿಕೊಂಡು ಹೊರಟುಹೋದಳು ಪದ್ಮಜ.

"ನನಗೆ ಸ್ಪೆಷಲ್ ಪಾರ್ಟಿ ಕೊಡಬೇಕಾ" ಅವಳಿಗೆ ಕೇಳಿಸುವಂತೆ ಅರಚಿದ ವಾಸು.

ವಾಸುವಿನ ಫಲಿತಾಂಶ ತಿಳಿದ ದಿನ ಮಧುಮತಿ ಆನಂದಬಾಷ್ಪವನ್ನು ಸುರಿಸಿದಳು. ಎಲ್ಲರೂ ಸೇರಿ ಸಂತೋಷ ವ್ಯಕ್ತಪಡಿಸಿದ ನಂತರ ಅವಳ ಹೃದಯ ಏನೋ ನೋವಿನಿಂದ ನರಳಿತು "ಮಧೂ, ನನಗೆ 'ಅಪ್ಪಾ' ಅಂತ

ಪ್ರೀತಿಯಿಂದ ಕರೆಯೋ ಮಗ ಬೇಕು !" ಎಷ್ಟು ಆಸೆ ಇತ್ತು ಆ ಧ್ವನಿಯಲ್ಲಿ. ಅವರು ಒಮ್ಮೆ ನೋಡಿದರೆ ಎಷ್ಟು ಚೆನ್ನಾಗಿರುತ್ತಿತ್ತು!? ಎಷ್ಟು ಕಠಿಣಹೃದಯ ಅವರದು ! ತಿಂದು ಬಿಸಾಕಿದ ಎಲೆಯಂತೆ ಹೆಂಡತಿ ಮಗನನ್ನು ವಿಸರ್ಜಿಸಿ, ಬೇರೊಬ್ಬ ಹೆಂಡತಿ, ಮಕ್ಕಳು ಸಂಸಾರ......ಛಿ.....ಛೀ !'' ಅವಳ ಹೃದಯ ಉರಿದುಹೋಯಿತು. ಮನಸ್ಸು ವಿಲವಿಲನೆ ಒದ್ದಾಡಿತು. ಅಂದು ಅವಳಿಗೆ ಊಟ ಹಿಡಿಸಲಿಲ್ಲ.

"ಅತ್ತಿಗೆ, ಆಗ್ಲೇ ಹೊಟ್ಟೆ ತುಂಬಿಹೋದರೆ ಹೇಗೆ? ಮಗನಿಗೆ ಉದ್ಯೋಗ, ಮದುವೆ, ಸೊಸೆ, ಮೊಮ್ಮಕ್ಕಳು ಈ ಸಂತೋಷಕ್ಕೆಲ್ಲಾ ಸ್ವಲ್ಪ ಸ್ಥಳ ಇಟ್ಕೊಳ್ಳಿ" ಎಂದು ಹಾಸ್ಯ ಮಾಡಿದಳು ಲಕ್ಷ್ಮಿ.

" ನನ್ನ ಪಾರ್ಟಿ ಅಂತ ರಗಳೆಮಾಡಿ ಎರಡು ಪ್ಲೇಟ್ ಬಜ್ಜಿ ಮುಗಿಸಿದೆ. ನೀನು ಪಾರ್ಟಿ ಕೊಡು ಅಂದ್ರೆ ಈವತ್ತು, ನಾಳೆ ಅಂತ ಸತಾಯಿಸ್ತಿದ್ದೀ ! ಬಲೆ ಪಿಸನಾರಿ, ನಾಳೆ ಊರಿಗೆ ಹೊರಟುಬಿಡ್ತೀಯಂತ. ಅಬ್ಬ ! ಎಷ್ಟು ಗಟ್ಟಿಗ'' ತುಂಟನಗೆ ನಗುತ್ತಾ ಕೇಳಿದಳು ಪದ್ಮಜ.

"ನಾಳೆ ಹೊರಟುಹೋಗ್ತಿದ್ದೀನಿ ಅಂತ ಯಾರು ಹೇಳಿದರು? ಹೋದ್ರೂ ಯಾವಾಗಲಾದ್ರೂ ಬರದೇ ಇರ್ತೀನಾ ?" ನಗುತ್ತಾ ಕೇಳಿದ ವಾಸು.

" ಓಹೋ ! ಇನ್ನೊಂದು ಸಲ ಬಂದಾಗ ಪಾರ್ಟಿ ಕೊಡ್ತೀ ಅಂದ ಹಾಗಾಯ್ತು ಅಲ್ವಾ! ಯಾವಾಗ ಅಂದ್ರೇ ಆವಾಗ ನಿನ್ನನ್ನು ತನ್ನ ಮನೆಗೆ ಕರಸ್ಕೊಂಡು, ತಾನು ಒಂದು ಸಲವಾದರೂ ನಿನ್ನನ್ನು ನೋಡೋಕೆ ಬರದೇ ಇರೋ ಅಂಥ ಫ್ರೆಂಡ್ ಯಾರಪ್ಪ ಅದು ? ಆ ಸಪೋಟ ಫ್ರೆಂಡು !''

ಪಕಪಕನೆ ನಕ್ಕು, " ಸಪೋಟ ಅಷ್ಟು ಸಿಹಿಯಾಗಿರ್‍ತಾನಾ ಫ್ರೆಂಡು!'' ಎಂದ ವಾಸು.

"ಇಷ್ಟಕ್ಕೆ ಬಾಯ್ ಫ್ರೆಂಡೋ, ಗರ್ಲ್ ಫ್ರೆಂಡೊ ?''

" ಗರ್ಲ್ ಫ್ರೆಂಡೇ!'' ತುಂಟತನದಿಂದ ಅವಳ ಕಡೆ ನೋಡುತ್ತಾ ಹೇಳಿದ ವಾಸು.

" ಅತ್ತಿಗೆ ಹೇಳ್ತೀನಿ. ಇರು, ಕಾಲು ಕಟ್ಟಿ ಮನೇಲೇ ಸರಿ ಹಾಕ್ತಾರೆ."

" ಮನೇಲೇ ಇದ್ದಾಳಲ್ಲಾ ಒಬ್ಬ ಗರ್ಲ್ ಫ್ರೆಂಡ್ "

"ಛಿ, ಹೋಗು......ಪಾರ್ಟಿ ತಪ್ಪಿಸೋದಕ್ಕೆ ಏನೋ ಪ್ಲಾನ್ ಮಾಡ್ತಿದ್ದೀ."

ನಗುತ್ತಾ, ಅದೂ ಇದೂ ಹರಟಿ, "ಅಯ್ಯಯ್ಯೋ! ಅದು ಹೇಗೆ ಸಾಧ್ಯವಾಗುತ್ತೆ, ಈವತ್ತು ನಿನ್ನನ್ನೂ, ಶೀನಿನ್ನೂ ಸಿನಿಮಾಗೆ ಕರ್ಕೊಂಡು ಹೋಗಿ, ಅಲ್ಲಿಂದ ಹೋಟಲಿಗೆ ನಿನ್ನ ದುಡ್ಡಿನಲ್ಲಿ ಡಿನ್ನರ್ ಮುಗಿಸಿದ ಮೇಲೆ" ಎನ್ನುತ್ತಿದ್ದ ವಾಸು.

"ನನ್ನ ಹತ್ರ ದುಡ್ಡಿಲ್ಲಪ್ಪ" ಹೊರಡುತ್ತಿದ್ದಳು ಪದ್ಮಜ.

ಥಟಕ್ಕನೆ ಅವಳ ಕೈ ಹಿಡಿದುಕೊಳ್ಳುತ್ತಾ, "ನಿಜವಾಗ್ಲೂ ಪದ್ಮಜಾ, ಐದೂವರೆಗೆ ರೆಡಿಯಾಗು. ಶೀನೂ ಥಿಯೇಟರ್ ಬಳಿಗೆ ಬರ್‍ತೀನಿ ಅಂತ ಹೇಳಿದಾನೆ. ನಾವಿಬ್ಬರೂ ಸ್ಕೂಟರ್‌ನಲ್ಲಿ ಹೊರಟುಹೋಗೋಣ......ಪ್ಲೀಸ್, ಇಲ್ಲ ಅನ್ನಬೇಡ. ಇನ್ನು ಹೊರಟುಹೋಗ್ತೀನಲ್ಲಾ? ಇಷ್ಟು ದಿವಸ, ಇಷ್ಟು ವರ್ಷಗಳಿಂದ ನಿಮ್ಮೆಲ್ಲರೊಂದಿಗೆ ಕಲೆತು ನಿಮಗೆ ಸರಿಸಮಾನವಾಗಿ ಆದರಣೆ ಪಡೆದಿದೀನಿ. ಅದರಿಂದ ಎಲ್ಲರೂ ಈವತ್ತು ಸಂತೋಷವಾಗಿ ಹೊರಗೆ ಹೋಗಿಬರೋಣ ಅಂದ್ರೆ ದೊಡ್ಡವರ್‍ಯಾರೂ ಬರೋದಿಲ್ಲ ಅಂದ್ರು. ಯಾರು ಏನಂದ್ಕೊಂಡ್ರೆ ನಮಗೇನು? ಬರ್‍ತಿತಾನೆ?" ಎಂದು ಕೇಳಿದ ವಾಸು.

ಮೌನವಾಗಿ ನಿಂತಿದ್ದ ಪದ್ಮಜಳ ಕಣ್ಣುಗಳಲ್ಲಿ ನೀರು ತುಂಬಿತು. ಸರಸರನೆ ಒರೆಸಿಕೊಳ್ಳುತ್ತಾ, "ವಾಸೂ, ಇಲ್ಲಿಂದ ಹೊರಟುಹೋಗಬೇಕು ಅಂದ್ರೆ ನಿನಗೇನೂ ದುಃಖ ಆಗ್ಲಿಲ್ವಾ?" ಎಂದಳು. ಅವಳ ಧ್ವನಿ ಭಾರವಾಗಿತ್ತು.

ಅವಳು ದುಃಖಪಡುತ್ತಿದ್ದಾಳೆಂದು ತಿಳಿದ ವಾಸು, "ಓದು, ಉದ್ಯೋಗ ಬೇಕಾದಾಗ ಒಂದು ಊರು, ಒಂದು ಮನೆಮೇಲೆ ಮಮಕಾರ ಬೆಳೆಸಿಕೊಂಡ್ರೆ ಹೇಗೆ? ನೀವು ಎಲ್ಲಿದ್ರೂ ಬೇಕಾದವರೇ! ನಾನು ನಿಮ್ಮಿಂದ ಹೇಗೆ ದೂರವಾಗ್ತೀನಿ?" ಎಂದು ಕೇಳಿದ, ತನ್ನ ಹೃದಯಕ್ಕೂ ಏನೋ ಒಂದು ವಿಧವಾದ ದುಃಖ ಉಂಟಾಗಿದ್ದರೂ ಆ ನೋವನ್ನು ತನ್ನ ಧ್ವನಿಯಲ್ಲಿ ತೋರ್ಪಡಿಸದೆ.

ಸಿನಿಮಾದಿಂದ ರಾತ್ರಿ ಹತ್ತುಗಂಟೆಗೆ ಸಂತೋಷದಿಂದ ನಗುತ್ತಾ, ಹರಟುತ್ತಾ ಮನೆಗೆ ಬಂದರು ವಾಸು, ಪದ್ಮಜ. ಇನ್ನೊಂದು ಕಾಲು ಗಂಟೆಯ ನಂತರ ಶೀನುವೂ ರಿಕ್ಷಾದಲ್ಲಿ ಬಂದ.

ಸುಸ್ತಾಗಿ ಮೈ ಮುರಿಯುತ್ತಾ ಹಾಸಿಗೆಯ ಮೇಲೆ ಮಲಗಲಿದ್ದ ವಾಸು ಮಧುಮತಿ ಬಂದದ್ದರಿಂದ ಎದ್ದು ಕುಳಿತ. "ಏನಮ್ಮಾ, ಬಂದೆ?" ಎನ್ನುತ್ತಾ.

"ಏನೋ ಎಲ್ಲರೂ ಹಾಸ್ಯಮಾಡ್ತಿದಾರೆ ಅಂದ್ಕೊಂಡಿದ್ದೆ. ನಿಜವಾಗ಼್ೂ ಐ. ಎ. ಎಸ್. ಆಫೀಸರ್ ಅಗ್ಬೇಕು ಅಂದ್ಕೊಂಡಿದ್ದೀಯಾ?'' ಆಶ್ಚರ್ಯದಿಂದ ನಂಬಲಾಗದಂತೆ ಕೇಳಿದಳು ಮಧುಮತಿ.

" ಬಾ, ಕೂತ್ಕೋ ನಾನಂದ್ಕೊಳ್ಳೋದೇನು ? ಅದೃಷ್ಟವಿದ್ರೆ ಆಗ್ತೀನಿ. ಇನ್ನೂ ಸೆಲೆಕ್ಟ್ ಆಗ್ಬೇಕಲ್ಲಾ ?'' ಎಂದ ಕಿರುನಗೆ ಸೂಸುತ್ತಾ.

" ಸರಿ, ಅದೇ ತಿಳ್ಕೊಳ್ಳೋಣ ಅಂತ ಬಂದೆ......ಇದೆಲ್ಲಾ ಒಂದು ಗಾರುಡಿಯ ಹಾಗಿದೆ, ನಡೀಲಿ......ರಾಜು ಕಾಗದ ಬರೆದಿದ್ದಾನೆ. ಅಜ್ಜೀನ ನೋಡ್ಕೊಂಡು ಬರೋಣ ಅಂತಿದ್ದೀನಿ. ಬರೋ ಶುಕ್ರವಾರ ನೀನೂ ಒಂದ್ಸಲ ಅಲ್ಲಿಗೆ ಬಾ " ಎಂದು ಹೇಳಿ ಅಲ್ಲಿ ನಿಲ್ಲದೆ ಹೊರಟುಹೋದಳು ಮಧುಮತಿ.

ಅವಳ ಕಡೆ ನೋಡಿದ ವಾಸು ಸಂಕಟದಿಂದ ನಿಟ್ಟುಸಿರು ಗರೆದ.

ಅವಳಿಗೆ ಆ ರಾತ್ರಿ " ತನಗರಿವಿಲ್ಲದಂತೆ ಇವರೆಲ್ಲಾ ಏನನ್ನೋ ಮುಚ್ಚಿಡುತ್ತಿದ್ದಾರೆ, ಎಲ್ಲಿಯದು ಹಣ ? ಯಾರು ಕೊಡ್ತಿದ್ದಾರೆ ವಾಸೂಗೆ? ಛೆ ! ಛೆ ! ನಾನೊಬ್ಬ ನಿರ್ಭಾಗ್ಯಳು. ಅಂದು ಗಂಡ, ಇಂದು ಮಗ..... ಇಬ್ಬರೂ ನನ್ನನ್ನು ಪ್ರೀತಿಸಲಿಲ್ಲ. ಗಂಡನಿಗೆ ಮಮಕಾರ ಇಲ್ಲ, ಮಗನಿಗೆ ನಂಬಿಕೆ ಇಲ್ಲ. ಎಲ್ಲರೂ ನನ್ನನ್ನು ಮೋಸಮಾಡ್ತಿದ್ದಾರೆ " ಎಂದುಕೊಂಡು ದುಃಖ ಉಕ್ಕಿಹರಿಯಿತು. ಕಣ್ಣಲ್ಲಿ ನೀರು ಇಂಗುವವರೆಗೂ ಅತ್ತು ಸುಸ್ತಾಗಿ ನಾಲ್ಕು ಗಂಟೆಯಲ್ಲಿ ನಿದ್ರಿಸಿದಳು ಮಧುಮತಿ.

ವಾಸು ಹೊರಡುತ್ತಿದ್ದರೆ, ಆ ಸಂಸಾರದ ಸದಸ್ಯರೆಲ್ಲರ ಕಣ್ಣಲ್ಲೂ ನೀರು ತಿರುಗಿತು. ಹೆಣ್ಣು ಮಗಳು ಅತ್ತೆಯ ಮನೆಗೆ ಹೊರಟುಹೋಗುತ್ತಿರುವಂತೆ ದುಃಖವಾಯಿತು ಲಕ್ಷ್ಮಿಗೆ. ಬಾಗಿಲನ್ನು ಭದ್ರಪಡಿಸಿ ಮಂಚದ ಮೇಲೆ ಬೋರಲು ಮಲಗಿ ಬಿಕ್ಕಿ ಬಿಕ್ಕಿ ಅತ್ತಳು ಪದ್ಮಜ. " ಅಬ್ಬಾ ! ಏನೂ ತೋಚೋದೇ ಇಲ್ಲ" ಎಂದು ಮನೆಯಲ್ಲಿ ಓಡಾಡಿದ ಶೀನು ನಗೇತ್ತಾ, "ವಾಸು ಅವರ ಫ್ರೆಂಡ್ ಮನೆಗೋ ಅಜ್ಜಿಯ ಮನೆಗೊ ಆಗಾಗ ಹೋಗ್ತಿದ್ದ. ಆವಾಗೆಲ್ಲಾ ಈವತ್ತು ಮನೆ ಬಿಕೋ ಎಂದಂತೆ ಅನ್ನಿಸಲಿಲ್ಲ. ಯಾಕಮ್ಮಾ ಬಿಂ ಅನ್ನಿಸುತ್ತೆ ಮನೆ ಈವತ್ತು ?'' ಎಂದು ಲಕ್ಷ್ಮಿಯನ್ನು ಕೇಳಿದ.

ನಕ್ಕಳು ಲಕ್ಷ್ಮಿ, " ಮನೆ ಅಲ್ಲ ಬಿಕೋ ಅನ್ನಿಸೋದು, ಶೀನು. ನಮ್ಮ ಮನಸ್ಸಿಗೆ ಬಿಕೋ ಅನ್ನಿಸುತ್ತೆ. ಇಷ್ಟು ದಿನ ಊರಿಗೆ ಹೋಗ್ತಾನೆ ಅಂದ್ರೆ

ಪುನಃ ಬರ್ತ್ತಾನೆ, ಇಲ್ಲೇ ಇರ್ತ್ತಾನೆ ಅಂದ್ಕೋತಾ ಇದ್ದದ್ದರಿಂದ ತೃಪ್ತಿಯಾಗು ತ್ತಿತ್ತು. ಏನೋ ನಮ್ಮ ಮನೆಗೆ ಬಂದ ಹುಡುಗ ಎಮ್. ಎ. ಪಾಸು ಮಾಡಿ ಇನ್ನೂ ಮುಂದಕ್ಕೆ ಓದ್ತಾನೆ. ನನಗೆ ತುಂಬಾ ಸಂತೋಷ. ಆ ಹುಡುಗನ ಮನಸ್ಸು ಒಳ್ಳೇದು. ಅವನು ತಾನು ಬೇರೆ ಅನ್ನೋ ಭಾವನೆ ಇಲ್ಲದೆ ನಾಲ್ಕು ಜನರ ಜೊತೇಲಿ ಬೆರೆತು ಹೊಂದಿಕೋತಾನೆ ಅವನ ಹಾಗೆ ನೀನು ಶ್ರದ್ಧೆ ಯಿಂದ ಓದಬೇಕು.''

ಇನ್ನು ಅಲ್ಲಿ ನಿಲ್ಲದೆ ಹೊರಟುಹೋದ ಶೀನು.

'' ಅಕ್ಕ ! ಯಾಕೆ ಹಾಗೆ ಅಳ್ತಿದ್ದೀ ? ಜ್ವರ ಬಂದಿದೆಯಾ ? ತಲೆ ನೋವಾ ?" ಕಳವಳದಿಂದ ಪದ್ಮಜಳ ಕನ್ನೆ ಮುಟ್ಟಿ ನೋಡಿದ ಶೀನು.

'' ಉಷ್, ಸುಮ್ನೆ ಇರು ತಲೆನೋವು......ದಯವಿಟ್ಟು ಹೊರಗೆ ಹೋಗು " ಗದರಿಸಿದಳು ಪದ್ಮಜ.

" ತಲೆನೋವಲ್ಲ, ನನಗೆ ಗೊತ್ತು, ಯಾಕಳ್ತೀ ಅಂತ !" ತುಂಟನಗೆ ನಕ್ಕ ಶೀನು.

" ಏನೋ ಗೊತ್ತಿರೋದು ನಿನಗೆ ?" ಬೇಸರದಿಂದ ಕೇಳಿದಳು ಪದ್ಮಜ.

" ಮದುವೆ ಬೇಡಾಂತ. ನಾಳೆ ಮದುವಣಿಗ ನೋಡೇದಕ್ಕೆ ಬರ್ತಿ ದ್ದಾನೆ ಅಂತ."

'' ಹೋಗ್ತೀಯೋ ಇಲ್ವೋ ನನ್ನ ರೂಮಿಂದ ?" ಅರಚಿದಳು ಪದ್ಮಜ.

'' ಟಾಟಾ.....ಬೈಬೈ !" ನಗುತ್ತಾ ಹೊರಟುಹೋದ ಶೀನು.

ನಿಜವಾಗಿಯೂ ಮಾರನೆಯ ದಿನ ಗಂಡಿನ ಕಡೆಯವರು ಬರ್ತಿದ್ದಾರೆ ಎಂದು ಹೇಳಿದ ಮಾತನ್ನು ಕೇಳಿ ಬೆಚ್ಚಿದಳು ಪದ್ಮಜ. ತಾಯಿಯೊಂದಿಗೆ ಮರೆ ಯಲ್ಲಿ '' ಬೇಡಮ್ಮ, ನಾನು ಮದುವೆ ಮಾಡ್ಕೊಳ್ಳೋದಿಲ್ಲ" ಎಂದು ಹೇಳಿದಳು.

'' ಎಲ್ರೂ ಹಾಗೇ ಹೇಳ್ತಾರೆ ಬಿಡು " ಎಂದು ನಕ್ಕುಬಿಟ್ಟಳು ಲಕ್ಷ್ಮಿ.

ತಾನು ಊಹಿಸುತ್ತಿದ್ದುದಕ್ಕೆ ವ್ಯತಿರಿಕ್ತವಾಗಿ '' ಇದೇನು ?" ಎಂದು ಯೋಚನಾಗ್ರಸ್ಥಳಾದಳು ಮಧುಮತಿ. ಪದ್ಮಜಳನ್ನು ನೋಡಲು ಗಂಡು ಬರು ತ್ತಿದ್ದಾನೆಂದರೆ ಅವಳ ಮನಸ್ಸೇಕೊ ವಿಲವಿಲನೆ ಒದ್ದಾಡಿತು.

ಏನೂ ಮಾಡಲಾರದ ನಿಸ್ಸಹಾಯ ಸ್ಥಿತಿಯಲ್ಲಿದ್ದ ಪದ್ಮಜ ಬಂದವರ ಮುಂದೆ ಹತ್ತು ನಿಮಿಷ ಕೂತು ಹೊರಟುಹೋದಳು. ಅವರು ಹೊರಟು ಹೋದೊಡನೆ ಯಾರೂ ಕೇಳದಿದ್ದರೂ "ಆ ಹುಡುಗ ನನಗೆ ಹಿಡಿಸಲಿಲ್ಲ" ಎಂದು ಹೇಳಿದಳು.

೦ ೦ ೦ ೦

ಅಂಗಡಿಗೆ ಬಂದ ವಾಸುವನ್ನು ಕನ್ನಡಕ ಸರಿಪಡಿಕೊಳ್ಳುತ್ತಾ ಪರಿಶೀಲಿಸಿ ನೋಡಿದ ಓನರ್ ರಂಗನಾಥ್, "ಪ್ರಸಾದರಾವ್ ಮಕ್ಕಳಲ್ವಾ ನೀವು?" ಎಂದರು.

"ಹೌದು ಸಾರ್; ನಮ್ಮ ತಂದೆ ಬರಲಿಲ್ವಾ!"

"ಬರ್ತಾರೆ ಕೂತ್ಕೊಳ್ಳಿ..........ಲೋ, ಒಂದು ಕಾಫಿ ತಗೊಂಡ್ಬಾ" ಅತಿಥಿ ಸತ್ಕಾರ ಮಾಡಿದರು.

ಸಂಕೋಚಪಡುತ್ತಲೇ ಕಾಫಿ ಕುಡಿದ ವಾಸು.

"ನೀವು...." ಎಂದು ನಿಲ್ಲಿಸಿದರು ರಂಗನಾಥ್.

"ಎಂ. ಎ. ಪಾಸು ಮಾಡಿದ್ದೀನಿ. ಐ. ಎ. ಎಸ್. ಗೆ ಇಂಟರ್ ವ್ಯೂಗೆ ಹೋಗಿದ್ದೀನಿ.

ಎಲ್ಲಾ ನಿಮ್ಮ ದಯೆ. ನಮ್ಮ ತಂದೆಯವರಿಗೂ ನಿಮಗೂ ಬಹಳ ಸ್ನೇಹ"

"ಅಯ್ಯಯ್ಯೋ, ನನ್ನ ದಯೆ ಏನ್ಬಂತು? ನಿಮ್ಮ ತಂದೆಯವರು ಎಷ್ಟು ಬುದ್ಧಿವಂತರು! ಅವರನ್ನು ಮೀರಿಸಿಬಿಟ್ರಿ ನೀವು!" ಎನ್ನುತ್ತಾ ವಾಸು ಮಾತನ್ನು ತಡೆದರು ರಂಗನಾಥ್.

"ನಮ್ಮ ವಾಸೂನ ಇಲ್ಲೇ ನಿಲ್ಲಿಸ್ಕೊಂಡ್ಬಿಟ್ರಾ! ಎದುರುನೋಡ್ತಾ ಮನೇಲೇ ಕೂತಿದ್ದೆ" ಎಂದರು ಒಳಬಂದ ಪ್ರಸಾದರಾವ್ ನಗುತ್ತಾ.

"ನೀವು ಬರೋ ಹೊತ್ತಾಗಿತ್ತಲ್ಲಾ. ಒಬ್ಬೊಬ್ಬರು ಒಂದೊಂದು ದಾರಿ ಆಗ್ತೀರಲ್ಲ ಎಂದು ಇಲ್ಲೇ ನಿಲ್ಲಿಸಿಕೊಂಡು ಆಳಿನ ಕೈಯ್ಯಲ್ಲಿ ಅಡಿಗೆ ಮಾಡೋದು ಬೇಡ ಅಂತ ಮನೆಗೆ ಹೇಳಿಕಳುಹಿಸಿ. ನೀವಿಬ್ಬರೂ ಈವತ್ತು ನಮ್ಮನೆಗೆ ಊಟಕ್ಕೆ ದಯಮಾಡಿಸಬೇಕು."

ಆಶ್ಚರ್ಯದಿಂದ ನೋಡಿದರು ಪ್ರಸಾದರಾವ್, ಇಷ್ಟು ವರ್ಷಗಳಲ್ಲಿ (ಆಗಾಗ ಏನಾದರೂ ತಿಂಡಿ ಕಳುಹಿಸುತ್ತಿದ್ದುದನ್ನು ಬಿಟ್ಟರೆ) ಒಂದು ಸಲವೂ

ತನ್ನನ್ನು ಊಟಕ್ಕೆ ಆಹ್ವಾನಿಸಿರಲಿಲ್ಲ. ಕ್ಷಣದಲ್ಲಿ ಸಾವರಿಸಿಕೊಂಡು "ಏನೂ ತೊಂದರೆ ತಗೋಬೇಡಿ. ವಾಸು ಇನ್ನೂ ಈವತ್ತೇ ಬಂದಿರೋದು ?'' ಎಂದರು ಇನ್ನೇನೋ ಹೇಳಬೇಕೆಂದಿದ್ದ ಪ್ರಸಾದರಾವನ್ನು ತಡೆಯುತ್ತಾ "ಇನ್ನೇನೂ ಅಭ್ಯಂತರ ಹೇಳ್ಬೇಡಿಲೋ ಸತ್ಯ ! ಪ್ರಸಾದರಾವ್ರೂ, ಅವರ ಮಗ ನಮ್ಮನೆಗೆ ಊಟಕ್ಕೆ ಬರ್ತಾರೆ ಅಂತ ಹೇಳ್ಬಿಟ್ಟು ಬಾ ಹೋಗು" ಎಂದರು ರಂಗನಾಥ್.

ಸಂಕೋಚದಿಂದಲೇ ಹೊರಟರು ಪ್ರ ಸಾ ದ ರಾ ವ್ ಮತ್ತು ವಾಸು, ಐಶ್ವರ್ಯವಂತರ ಮನೆ ಟ್ಯೂಬ್‌ಲೈಟ್ ಬೆಳಕಿನಲ್ಲಿ ಬೆಳ್ಳಿಯ ತಟ್ಟೆಗಳು ಥಳಥಳನೆ ಮೆರೆಯುತ್ತಿದ್ದುವು. ಹಾಸಿದ್ದ ಕರಿಯ ಮರದ ಮಣೆಯ ನಾಲ್ಕು ಮೂಲೆ ಗಳಲ್ಲೂ ಬೆಳ್ಳಿಯ ಹೂಗಳು. ಬೆಲೆ ಬಾಳುವ ಸೀರೆಯಲ್ಲಿ–ಮೈತುಂಬ ಒಡವೆ ಹಾಕಿಕೊಂಡು ಬಡಿಸುತ್ತಿದ್ದ ಮಧ್ಯವಯಸ್ಸಿನ ಸ್ತ್ರೀ. ನಾಲ್ಕು ವಿಧದ ಸ್ವೀಟ್ಸ್, ಇನ್ನೂ ವಿಧವಿಧವಾದ ಅಡಿಗೆ ವಿಶೇಷವಾದ ಔತಣವೆಂಬುದನ್ನು ಸಾರುತ್ತಿತ್ತು.

"ಮಗನಿಗೇನಾದರೂ ಸಂಬಂಧ ನೋಡ್ತಾ ಇದ್ದೀರಾ ?'' ಮುಸಿ ಮುಸಿ ನಗುತ್ತಾ ಕೇಳಿದರು ರಂಗನಾಥರಾವ್.

"ಇನ್ನೂ ಇಂಟರ್‌ವ್ಯೂಗೆ ಹೋಗ್ತಿದ್ದಾನೆ. ಸೆಲೆಕ್ಟ್ ಆಗ್ಬೇಕು. ಆಮೇಲೆ ಟ್ರೈನಿಂಗ್ ಮುಗೀಲಿ, ನೋಡೋಣ. ಕೆಲಸ ಆದ್ಮೇಲೆ ಮದುವೆ ಯೋಚನೆ ಎಂದರು ಪ್ರಸಾದರಾವ್.

ಬೆಳ್ಳಿ ತಟ್ಟೆಯಲ್ಲಿ ಎಲೆ, ಅಡಿಕೆ, ಸುಣ್ಣ, ಸೋಂಪು ಇವೆಲ್ಲವನ್ನೂ ಸಿದ್ಧ ಪಡಿಸಿಕೊಂಡು ಬಂದ ಹುಡುಗಿಯನ್ನು ನೋಡುತ್ತಾ, "ಬಾಮ್ಮ......ನಾಚಿಕೆ ಯಾಕೆ ? ಮಾವ ! ಅವರ ಜೊತೇಲಿರೋದು ಅವರ ಮಗ......ನಿಮ್ಮ ಹೆಸರು ವಾಸು ಅಲ್ವಾ ? ಇದೋ, ನಮ್ಮ ಮಗಳು ಮಂಜುಳ, ಏನೋ ಸಾಧಾರಣ ವಾದ ಓದು, ಪಿ.ಯು.ಸಿ. ಪಾಸ್ ಮಾಡಿದ್ದಾಳೆ. ಬಾಮ್ಮ, ಇಲ್ಲಿ ಕೂತ್ಕೋ" ಎಂದರು ರಂಗನಾಥ್.

ತಲೆ ಎತ್ತಿ ಅವಳ ಕಡೆ ನೋಡಿದ್ದ ವಾಸು, ಎರಡು ಕ್ಷಣ ನೋಟ ಬೇರೆ ಕಡೆ ತಿರುಗಿಸಲಾಗದಾದ. ಒಮ್ಮೆ ನೋಡಿದರೆ ಹತ್ತು ಬಾರಿ ನೋಡಬೇಕನಿ ಸುವ ರೂಪ ಅವಳದು. "ನಮಸ್ತೆ.'' ಎಂದಳು ನಿಧಾನವಾಗಿ. "ನಮಸ್ತೆ'' ತಡವರಿಸಿದ ವಾಸು.

ಹತ್ತು ನಿಮಿಷ ಪ್ರಸಾದರಾವ್, ರಂಗನಾಥ್ ಅವರ ವ್ಯಾಪಾರದ ವಿಷಯಗಳನ್ನೇನೋ ಮಾತನಾಡುತ್ತಿದ್ದರೆ ಮೌನವಾಗಿ ಕೂತಿದ್ದು ಹೊರಟು

ಹೋದಳು ಮಂಜುಳ. ಆ ಹತ್ತು ನಿಮಿಷಗಳಲ್ಲಿ ಅವಳ ಕಡೆ ಹತ್ತು ಬಾರಿಯಾದರೂ ನೋಡಿದನೇನೋ ವಾಸು.

ವಾಪಸ್ ಬರುವಾಗ "ಅವರು ಶೆಟ್ರಲ್ವಾಪ್ಪಾ" ಎಂದು ಕೇಳಿದ ವಾಸು.

"ಹೌದು, ಅವರ ಮಗಳು ಎಷ್ಟು ಚೆನ್ನಾಗಿದ್ದಾಳಲ್ಲಾ!" ಎಂದರು ಪ್ರಸಾದರಾವ್ ಕಿರುನಗುತ್ತಾ.

ಮೌನ ವಹಿಸಿದ್ದ ವಾಸು.

ಐ.ಎ ಎಸ್.ಗೆ ವಾಸು ಸೆಲೆಕ್ಟ್ ಆದನೆಂಬ ಸುದ್ದಿ ಕೇಳಿದ ಪ್ರಸಾದರಾವ್ ಆನಂದಾತಿಶಯದಿಂದ ಉಬ್ಬಿಹೋದರು.

"ಟ್ರೈನಿಂಗ್‌ಗೆ ಹೊರಟು ನಿಂತಿದ್ದ ವಾಸು......"ಟೈಂ ಇಲ್ಲ, ಅಪ್ಪಾ! ಅಮ್ಮ ಅಜ್ಜಿಯ ಮನೇಲಿದ್ದಾರೆ. ಅಲ್ಲಿಗೆ ಹೋಗಿ ಅವರಿಗೆ ಹೇಳ್ಬಿಟ್ಟು ಹಾಗೇ ಹೋಗ್ತೀನಿ" ಎಂದ.

"ಸರಿ, ಹಾಗೆ ಮಾಡು. ಸೆಲೆಕ್ಟ್ ಆಗಿರೋ ವಿಷಯ ಮಾವನಿಗೆ ಕಾಗದ ಬರೆದೆಯಾ? ನಾನೇನೋ ಬರೆದೆ" ಎಂದರು ಪ್ರಸಾದರಾವ್.

"ಊಂ, ನಾನೂ ಬರೆದಿದ್ದೀನಿ. ಹೋದ ಮೇಲೆ ಆಡ್ರೆಸ್ ಬರೀತೀನಿ, ಕಾಗದ ಬರೀತಾ ಇರಿ."

"ನಾ ಬರೀದೇ ಏನು? ನೀನು ಉತ್ತರ ಬರೀಬೇಕಲ್ಲಾ!"

"ಬರೀದೇ ಏನಪ್ಪಾ!" ನಕ್ಕ ವಾಸು.

ಹೊರಡುತ್ತಿದ್ದ ರೈಲಿನೊಂದಿಗೆ ಸರಸರನೆ ನಡೆಯುತ್ತಾ "ಗೋಪಿ ಮನೇಗೇ ಹೊರಟ್ಹೋಗು ಅಂತ ಹೇಳು ನಿಮ್ಮ ಅಮ್ಮನಿಗೆ" ಎಂದರು ಪ್ರಸಾದರಾವ್.

"ಆಗ್ಲಿ, ಹೇಳ್ತೀನಿ, ನೀವು ನಿಲ್ಲಿ" ಎಂದ ವಾಸು ಸಂತೋಷದಿಂದ.

೦ ೦ ೦ ೦ ೦

ತಾನು ಐ.ಎ.ಎಸ್. ಪಾಸ್ ಮಾಡಿದುದಾಗಿಯೂ, ಟ್ರೈನಿಂಗ್‌ಗೆ ಹೊರಡುತ್ತಿರುವುದಾಗಿಯೂ ಮಧುಮತಿಗೆ ಮತ್ತು ಇತರರಿಗೆ ತಿಳಿಸಿದ ವಾಸು.

"ನನ್ನ ಬಂಗಾರುಕಂದ! ಕಲೆಕ್ಟರ್ ಆಗಬಿಡ್ತೀ!!" ಎನ್ನುತ್ತಾ ಅವನ ತಲೆಗೆ ಮುದ್ದಿಟ್ಟರು ಜಾನಕಮ್ಮ.

ವಾಸುವಿನ ತಲೆ ಬಗ್ಗಿಸಿ ಮುತ್ತು ಕೊಡುತ್ತಿದ್ದ ಜಾನಕಮ್ಮನ ಕಡೆ ನೋಡುತ್ತಾ ಕಿಲಕಿಲನೆ ನಕ್ಕು, "ನಾನು ಪಾಸಾದೆ ಅಂತ ಹೇಳಿದ್ದಕ್ಕೆ, ಸರಿ ಒಳ್ಳೆ ಗಂಡನ್ನು ಹುಡುಕಿ ಮದುವೆಮಾಡು ಅಂತ ನಿಮ್ಮಪ್ಪನಿಗೆ ಹೇಳು, ಅಂದ್ರು ಅಜ್ಜ ನನ್ನು ದುರುದುರು ನೋಡ್ತಾ. ಈವತ್ತು ನಿನ್ನನ್ನು ಮಾತ್ರ ಮುದ್ದಿಸ್ತಾ ಇದ್ದಾರೆ'' ಎಂದಳು ಜಯ.

"ಹೌದೇ ತಾಯಿ? ನೀನು ಎಮ್.ಎ. ಓದಿ ಕೂತ್ಕೊಂಡ್ರೆ ನಿನಗೆ ನಿಮ್ಮಪ್ಪ ಗಂಡನ್ನ ಎಲ್ಲೀ ಹುಡುಕೋದು?"

"ಛೀ, ಹೋಗು, ಯಾವಾಗ್ಲೂ ಮದುವೆ ಅಂತ ಒಂದೇ ರಗಳೆ" ಕೋಪಿಸಿಕೊಂಡಳು ಜಯ.

"ಏನೋ ಅಂತೂ ಐ.ಎ.ಎಸ್. ಆಫೀಸರ್ ಆಗ್ಬಿಟ್ಟಿದ್ದೀಯಲ್ಲಾ!" ವ್ಯಂಗ್ಯದಿಂದ ನಕ್ಕರು ರಾಜಶೇಖರ್.

"ನಿನ್ನ ಆಶೀರ್ವಾದ!" ಒಡನೆಯೇ ನುಡಿದ ವಾಸು.

"ಚಿಕ್ಕಮಾವ ಚೆನ್ನಾಗಿ ಗಂಟು ಸರಿ ಮಾಡಿಕೊಡ್ತಿರೋ ಹಾಗಿದೆ" ಪುನಃ ಅದೇ ನಗೆಯೊಂದಿಗೆ ಹೇಳಿದ.

"ಮತ್ತೆ" ಎಂದು. ಇನ್ನೂ ಹೇಳಲಿದ್ದ ವಾಸು......"ವಾಸು" ಮಧುಮತಿ ಗದರಿಸಿದ್ದರಿಂದ ಮೌನವಾಗಿಬಿಟ್ಟ.

ವಾಸುವಿಗೆ ಪ್ರಿಯವಾದ ಪಾಯಸ ಮಾಡಿ ಬಡಿಸಿದರು ಜಾನಕಮ್ಮ. ಸಂಜೆ ಬಹಳ ಹೊತ್ತು ಜಯಳ ಸಂಗೀತ ಕೇಳುತ್ತಾ ಕಾಲ ಕಳೆದ ವಾಸು.

ಏನೋ ಕೇಳಿ ತಿಳಿದುಕೊಳ್ಳಬೇಕೆಂಬ ಆತುರದಿಂದ ಅದಕ್ಕೆ ಸರಿಯಾದ ಸಮಯವನ್ನು ಎದುರು ನೋಡುತ್ತಿದ್ದ ಮಧುಮತಿ ರಾತ್ರಿ ಹತ್ತು ಗಂಟೆಯಲ್ಲಿ ನಿದ್ರೆ ಮಾಡುತ್ತಿದ್ದ ವಾಸುವಿನ ಬಳಿ ಬಂದು ಅವನ ನಿರ್ಮಲವಾದ ವದನವನ್ನು ನೋಡುತ್ತಾ ನಿಂತಳು.

"ಯಾಕೆ ವಾಸು, ನಿಮ್ಮ ಅಮ್ಮನಿಗೆ ನಿಜ ಹೇಳೋದಕ್ಕೆ ಹೆದರ್ತಾ ಇದ್ದೀ? ಈ ಸೂಟುಗಳು, ವಾಚು, ಉಂಗುರ, ಬೆಲೆಬಾಳುವ ಪುಸ್ತಕಗಳು–ನಿನಗೆಲ್ಲಿಂದ ಬರುತ್ತೆ? ತಂದೆ ವರ್ಜಿಸಿದ ನಿರ್ಭಾಗ್ಯ ನೀನು. ದರಿದ್ರಳ ಮಗ ನೀನು! ಐ.ಎ. ಎಸ್. ಆಫೀಸರ್ ಆಗ್ತಿದ್ದೀ. ನಾ ನಂಬೋದಿಲ್ಲ. ನಾನು ನಂಬಲಾರೆ. ಇದರಲ್ಲಿ ಏನೋ ಮೋಸ ಇದೆ. ನನ್ನ ಮಗನ್ನ ಯಾರೋ ಮೋಸ ಮಾಡ್ತಿದ್ದಾರೆ. ಓದು ಮುಗಿದು ಪ್ರಯೋಜನನಾದ ಮೇಲೆ ನನ್ನಿಂದ ಕಸಿದುಕೊಂಡು ಹೋಗ್ತಾರೆ.

ಚಿಗುರು ಮೀಸೆಯೊಂದಿಗೆ ತಂದೆಯ ರೂಪವನ್ನು ಹೊರುವ ನನ್ನ ಮಗನಿಗೆ ಮೋಸ ಮಾಡಿದ್ದಾರೆ. ಹಣ ಕೊಟ್ಟು ಅವನ ಸುತ್ತಲೂ ಕೋಟೆ ಕಟ್ಟುತ್ತಿದ್ದಾರೆ. ಗೋಪಿಗೆ ಗೊತ್ತು. ಅಂದ್ರೆ–ಏನು ಗೊತ್ತು ? ಅವನೂ ಹೇಳೋದಿಲ್ಲ. ಇಷ್ಟು ದಿವಸವೂ ಅವನ ಮಗಳನ್ನ ಕೊಟ್ಟು ಮದುವೆ ಮಾಡ್ತಾನೆ, ಅದಕ್ಕೇ ಓದಿಸ್ತಿದ್ದಾನೆ ಅದ್ಕೊಂಡು ಒಂದು ವಿಧದಲ್ಲಿ ಸಂತೋಷಪಡ್ತಾ ಬಂದೆ. ಊಹುಂ, ಹಾಗಿದ್ದಿದ್ರೆ ಪದ್ಮಜಾಗೆ ಬೇರೆ ಸಂಬಂಧಗಳನ್ನ ಯಾಕೆ ಹುಡುಕ್ತಾರೆ ?' ಅನೇಕರೀತಿಯಲ್ಲಿ ಓಡುತ್ತಿದ್ದ ಮನಸ್ಸನ್ನು ಬಿಗಿ ಹಿಡಿದು "ವಾಸೂ" ಎಂದು ತಟ್ಟಿ ಎಬ್ಬಿಸಿದಳು ಮಧುಮತಿ.

"ಯಾಕಮ್ಮ ಯಾಕೆ ?" ಕಳವಳದಿಂದ ಎದ್ದು ಕೂತ ವಾಸು.

"ಏನಿಲ್ಲ ; ಹೆದರಬೇಡ. ಒಂದು ವಿಷಯವನ್ನ ಕೇಳಿ ತಿಳ್ಕೋಬೇಕೂಂತ'' ಎನ್ನುತ್ತಾ ಅವನ ಹಾಸಿಗೆಯ ಮೇಲೆ ಕೂತಳು ಮಧುಮತಿ.

"ಏನಮ್ಮ ಅದು ?" ಮುಗುಳ್ನಗುತ್ತಾ ಕೇಳಿದ.

"ಪದ್ಮಜಾನ ಮದುವೆ ಮಾಡ್ಕೊಳ್ಳೋದಿಲ್ಲ ಅಂತ ಹೇಳಿದೆಯಾ ?"

ಬಿಳಚಿಹೋಗಿ ತಾಯಿಯ ಕಡೆ ನೋಡುತ್ತಾ, "ಏನಂತಿದ್ದೀಯಮ್ಮಾ?" ಎಂದ ವಾಸು.

"ಅದೇ ಪದ್ಮಜಾಗೆ ಬೇರೆ ಸಂಬಂಧ ನೋಡಿದ್ದಾನೆ. ಗೋಪಿ ನಿನ್ನನ್ನ ಓದಿಸ್ತಿದ್ದಾನಲ್ಲ !" ಎಂದು ನಿಲ್ಲಿಸಿ ವಾಸುವನ್ನು ಪರಿಶೀಲಿಸಿದಳು ಮಧುಮತಿ.

ಒಮ್ಮೆಗೇ ಅವನ ಮುಖ ಕಳಾಹೀನವಾಯಿತು. "ನನ್ನ ಓದಿಗೂ ಪದ್ಮಜಳ ಮದುವೆಗೂ ಯಾವ ಸಂಬಂಧವೂ ಇಲ್ಲ. ನೀನು ದುಡುಕಿ ದಯವಿಟ್ಟು ಇಂತಹ ವಿಷಯಗಳಲ್ಲಿ ಏನೂ ಮಾತನಾಡಿಬಿಡಬೇಡ." ಗಾಂಭೀರ್ಯವಿತ್ತು ಆ ಧ್ವನಿಯಲ್ಲಿ.

ಕೋಪದಿಂದ ಮಾತನಾಡುವ ಪ್ರಸಾದರಾವ್ ರೂಪ ವಾಸುವಿನಲ್ಲಿ ಕಂಡ ಮಧುಮತಿ ಚಲಿಸಿದಳು.

"ಅವೇನೋ ಅರ್ಥವೇ ಆಗೋದಿಲ್ಲ ! ಬೇಕೂಂತ ತಿಂಡಿ ಕೇಳಿ ತರಿಸಿಕೊಳ್ಳೀ ನೀನು ಟೇಬಲ್ ಮೇಲಿಟ್ಟಿದ್ದ ಉಪ್ಪಿಟ್ಟನ್ನ ಹಾಗೇ ಬಿಟ್ಟಿಟ್ಟಿದ್ದೀ" ಎನ್ನುತ್ತಾ ಹೊರಟುಹೋದಳು ಮಧುಮತಿ.

'ಹೌದು, ಪಾಪ ಏನೂಂತ ಅರ್ಥ ಮಾಡ್ಕೋತಾರೆ ಅಮ್ಮ ? ಟೇಬಲ್ ಮೇಲಿಟ್ಟ ಉಪ್ಪಿಟ್ಟು ಮರೆತುಹೋದೆ ?' ಎಂದುಕೊಂಡ ವಾಸುವಿನ ಹೃದಯ

ದಲ್ಲಿ ಹಿಂದೆ ಟಿಫಿನ್ ಸಮಯದಲ್ಲಿನ ಕೆಲವು ನೆನಪುಗಳು ಜ್ಞಾಪಕಕ್ಕೆ ಬಂದವು.

"ವಾಸೂ, ನೀನು ಬರೀತಾ ಇರು. ಟೈಮೇನೂ ವೇಸ್ಟ್ ಆಗೋದಿಲ್ಲ. ಕೈ ತೊಳ್ಕೋಬೇಕಾಗಿಲ್ಲ. ಹೀಗೇ ತಿಂದ್ಬಿಡು"ಎನ್ನುತ್ತಾ ಬಾಯಲ್ಲಿ ಇಡುತ್ತಿದ್ದ ಪದ್ಮಜ ನೀರಿನ ಲೋಟವನ್ನು ಬಾಯಿಯ ಹತ್ತಿರ ಇಡುತ್ತಾ, "ಈಗೇನ್ ತಿಂದೆ? ಹೇಳು ನೋಡೋಣ"ಎಂದು ರೇಗಿಸೋ ಪದ್ಮಜ "ಛೆ! ಹೋಗು ನನ್ನನ್ನ ಡಿಸ್ಟರ್ಬ್ ಮಾಡಬೇಡ" ಎಂದು ಗದರಿಸುತ್ತಿದ್ದ ತಾನು "ಅಷ್ಟು ಏಕಾಗ್ರತೆ ನಮ್ಮಂತಹ ವರಿಗೆ ಪ್ರಯೋಜನವಿಲ್ಲ" ಎಂದು ತುಂಟನಗೆ ಸೂಸುತ್ತಿದ್ದ ಪದ್ಮಜ, 'ಏಯ್ ವಾಸೂ, ಇದು ಕ್ಲಾಸ್ ರೂಮಲ್ಲ, ನಿನ್ನ ಮುಂದೆ ಇರೋದು ಪೇಪರ್ ಅಲ್ಲ !' ಎನ್ನುತ್ತಾ ಪ್ಲೇಟಿನ ಮೇಲೆ ಚಮಚೆಯಲ್ಲಿ ಗೀಚುತ್ತಿದ್ದ ತನ್ನ ಕಡೆ ನೋಡಿದ ಪದ್ಮಜಳ ಕಿಲಕಿಲ ನಗು....ಎಲ್ಲವನ್ನೂ ಸರಸರನೆ ಕಲಸಿ ತಿಂದು ಏಳುತ್ತಿದ್ದ ತಾನು "ಅಬ್ಬ ! ಆರು ವರ್ಷ ಎಷ್ಟು ಸಂತೋಷವಾಗಿ ಕಳೆದುಹೋಯ್ತು. ಆ ಮನೇಲಿ, ಈಗತಾನೆ ಮುಗಿದಿದ್ದ ಆ ದಿನಗಳ ಸವಿ ನೆನಪು ಪುನಃ ಅದೇ ಘಟನೆ ಗಳು ನಡೆದರೆ ಎಷ್ಟು ಚೆನ್ನಾಗಿರುತ್ತೆ." ಎಂದುಕೊಂಡ ವಾಸುವಿನ ತುಟಿಗಳು ಕಿರುನಗೆಯಿಂದ ಅರಳಿದವು.

"ಪದ್ಮಜಾಗೆ ಸಂಬಂಧಗಳನ್ನ ನೋಡ್ತಿದ್ದಾರೆ. ಒಳ್ಳೆ ಹೃದಯ ಇರೋ ಹುಡುಗಿ. ಒಳ್ಳೆ ಸಂಬಂಧವೇ ಸಿಕ್ಕುತ್ತೆ. ಮದುವೆ ಮಾತು ಬಂದಾಗ ರಂಗ ನಾಥ್ ಜ್ಞಾಪಕ ಬಂತು ವಾಸುವಿಗೆ. ಅವರ ಮಗಳು ಅಬ್ಬಾ! ಎಷ್ಟು ಚೆನ್ನಾ ಗಿದ್ದಾಳೆ! ನಿದ್ದೆ ಓಡಿಹೋದ ವಾಸುವಿಗೆ ಮಂಜುಳಾಳ ರೂಪ, ಜಯಳ ಸಂಗೀತ ನೆನಪಿಗೆ ಬಂದು ಏನೋ ಸಂತೋಷವಾಯಿತು. ಸೌಂದರ್ಯವತಿ ಮಂಜುಳ, ಮಧುರ ಗಾಯಕಿ ಜಯ. ಇವರ ಜ್ಞಾಪಕ ಬರ್ತಿದೆ, ಚೆನ್ನಾಗಿದೆ. ಆದರೆ ಪದ್ಮಜ ಪ್ರತಿ ಕ್ಷಣವೂ ಜ್ಞಾಪಕ ಬರ್ತಾಳಲ್ಲಾ ? ತಾನು ಬರುವ ದಿನ ಉಬ್ಬಿ ಕೆಂಪಾದ ಕಣ್ಣುಗಳಿಂದ ಏನೋ ಅತ್ಯಮೂಲ್ಯವಾದ ನಿಧಿಯನ್ನು ಕಳೆದು ಕೊಂಡವನಂತೆ ದೀನವಾಗಿ ನೋಡಿದ ಪದ್ಮಜಳ ನೋಟ, ರೂಪ ಜ್ಞಾಪಕಕ್ಕೆ ಬಂದ ವಾಸು, "ಊಂ.....ಈ ಸಲ ನಾನು ಹೋಗುವ ವೇಳೆಗೆ ಮದುಮಗಳಾ ಗಿರುತ್ತಾಳೇನೋ ಎಂದುಕೊಳ್ಳುತಾ ನಿದ್ರೆ ಹಿಡಿಸದಿದ್ದ ವಾಸು, ಮಧುಮತಿ ತನ್ನನ್ನು ಎಬ್ಬಿಸಿದ್ದಕ್ಕೆ ಬೇಸರಪಟ್ಟುಕೊಳ್ಳುತ್ತಾ ಹೊರಳಾಡಿದ.

° ° ° ° °

ವಾಸು ಟ್ರೈನಿಂಗ್‌ಗೆ ಹೋಗಿದ್ದ. ಮಧುಮತಿ, ಗೋಪಾಲ್‌ರಾವ್ ಮನೆಗೆ ಬಂದಳು. ಕಾಲ ಉರುಳಿಹೋಗುತ್ತಿತ್ತು. ಪದ್ಮಜಳಿಗೆ ಅನೇಕ ಸಂಬಂಧಗಳು ಬಂದು ಹೋದವು. ಹುಡುಗಿಯನ್ನು ನೋಡಲು ಬರುತಿದ್ದಾರೆಂದಾಗ ಪದ್ಮಜಳಿಗೆ ಅಲಂಕಾರ ಮಾಡುತ್ತಿದ್ದ ಮಧುಮತಿಯ ಮನಸ್ಸಿಗೆ ವ್ಯಥೆಯಾಗುತ್ತಿತ್ತು. ತಂದೆಯ ಹೋಲಿಕೆ ಮಗನಿಗೆ ಬರುತ್ತದೆಂಬ ಭಯ. ವಾಸುವಿಗೇಕೆ ಕೊಡ್ತಾರೆ ಮಗಳನ್ನ? ಎಂದುಕೊಂಡು ಮನಸ್ಸನ್ನ ಸಮಾಧಾನಪಡಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಳು.

“ಯಾವುದನ್ನೂ ಒಪ್ತಾ ಇಲ್ವಲ್ಲಾ? ಹೋಗ್ಲೀ, ವಾಸೂನ ಮಾಡ್ಕೋತಾಳೇನೋ ಕೇಳ್ದಾ?” ಕೇಳಿದರು ಲಕ್ಷ್ಮಿ, ಗೋಪಾಲರಾಯರು.

“ಬೇಡ; ತಾಯಿಯೋ, ಮಗನೋ ಯಾರಾದರೂ ಅವರಾಗಿಯೇ ಆ ಮಾತೆತ್ತಿದರೆ ಅವಳನ್ನ ಕೇಳೋಣ ನಾವಾಗಿ ನಾವು ಆ ಪ್ರಸ್ತಾಪ ಮಾಡೋದು ಬೇಡ. ಮದುವೆ ಪ್ರಯತ್ನ ಮಾಡಿದ್ದೀವಿ ಅಂತ ಇಬ್ಬರಿಗೂ ಗೊತ್ತು. ಹಾಗಿಷ್ಟ ಇದ್ರೆ ಕೇಳ್ತಿದ್ರು. ಹೋಗ್ಲಿ, ಅಕ್ಕ ಆದ್ರೂ ವಾಸೂಗೆ ಕೊಡು ಅನ್ನಬಹುದಾಗಿತ್ತಲ್ಲಾ? ನಾವು ಕೇಳಿದರೆ ಏನಂದ್ಕೋತಾರೆ ಗೊತ್ತಾ? ಓದಿಗೆ ಸಹಾಯ ಮಾಡಿದ್ದು ಅದಕ್ಕೋಸ್ಕರವೇ ಅಂದ್ಕೊಳ್ಳುತ್ತಾರೆ. ಬೇಡ, ಬುದ್ಧಿ ಇಲ್ದೆ ಯಾರೊಂದಿಗೂ ಆ ಮಾತ್ತೆ ಬೇಡ” ಎಚ್ಚರಿಸಿದರು ಗೋಪಾಲರಾವ್.

“ಸುಮ್ನೆ ಏನೂ ಮಾಡ್ಕೋಬೇಕಾಗಿಲ್ಲ. ಬೇರೆಯವರಿಗೆ ಕೊಡೋ ಇಪ್ಪತ್ತೈದು ಸಾವಿರ ರೂಪಾಯಿ ಇವರಿಗೇ ಕೊಡೋಣ.”

“ನಮ್ಮ ಮನೆಗೆ ಬಂದ ದಿನ ವಾಸು ಏನಂದ? ‘ಹಣಕೋಸ್ಕರ ನನ್ನನ್ನ ನಾನು ಮಾರ್ಕ್ಕೊಳ್ಳೋದಿಲ್ಲ’ ಅಂತ......” ಜ್ಞಾಪಕ ಇದೆಯೊ? ಅಕ್ಕನಿಗೆ ಕೇಳಿಸಿತು, ಆ ಮಾತಾಡಬೇಡ” ಗದರಿಸಿದರು ಗೋಪಾಲರಾವ್.

೦ ೦ ೦ ೦ ೦

ದೀರ್ಘಾಲೋಚನೆ ಮಾಡುತ್ತಾ ಕೈಗಳನ್ನು ಹಿಂದಕ್ಕೆ ಕಟ್ಟಿಕೊಂಡು ಶತಪಥ ತಿರುಗುತ್ತಿದ್ದ ಪ್ರಸಾದರಾವ್, ಏನೋ ನಿರ್ಧಾರಕ್ಕೆ ಬಂದಂತೆ ಥಟಕ್ಕನೆ ನಿಂತು “ವಾಸೂ!” ಎಂದು ಕರೆದರು.

ಕೈಯಲ್ಲಿದ್ದ ನ್ಯೂಸ್ ಪೇಪರ್ ಮಡಿಸಿ ಟೇಬಲ್ ಮೇಲಿಟ್ಟು ಪ್ರಸಾದರಾವ್ ಹತ್ತಿರಕ್ಕೆ ಬರುತ್ತಾ, “ಕರೆದ್ರಾ ಅಪ್ಪಾ?” ಎಂದ ವಾಸು.

"ಊಂ, ಬಾ ಇಲ್ಲಿ ಕೂತ್ಕೋ. ನಿನ್ಹತ್ರ ಸ್ವಲ್ಪ ಮಾತಾಡ್ಬೇಕು" ಎನ್ನುತ್ತಾ ತಾನೊಂದು ಕುರ್ಚಿಯಲ್ಲಿ ಕೂಡುತ್ತಾ ತನ್ನೆದುರಿಗಿದ್ದ ಮತ್ತೊಂದು ಕುರ್ಚಿಯನ್ನು ತೋರಿಸಿದರು ಪ್ರಸಾದರಾವ್, ವಾಸುವಿಗೆ.

ಮುಗುಳ್ನಗುತ್ತಾ ಕೂತು ಪ್ರಶ್ನಾರ್ಥಕವಾಗಿ ಪ್ರಸಾದರಾವ್ ಕಡೆ ನೋಡಿದ ವಾಸು.

ಪೀಠಿಕೆ ಎಂಬಂತೆ ಮೆಲ್ಲಗೆ ಕೆಮ್ಮಿ, ಸರಿಯಾಗಿ ಕೂಡುತ್ತಾ, "ನಾವಂದು ಕೊಂಡಂತೆ ದೈವಾನುಗ್ರಹದಿಂದ ಓದು ಮುಗಿಯಿತು. ಇನ್ನೂ ಏನಾದ್ರೂ ಓದ್ತೀಯಾ ?" ಎಂದು ಕೇಳಿದರು ಪ್ರಸಾದರಾವ್.

"ಓದೋದಕ್ಕೆ ಒಂದು ಕೊನೆ ಅಂತ ಎಲ್ಲಿದೆ ? ಇನ್ನೇನೂ ಓದೋದಿಲ್ಲ. ಇಷ್ಟರಲ್ಲೇ ಆರ್ಡರ್ಸ್ ಬರುತ್ತೆ. ಎಲ್ಲಾದ್ರೂ ಒಂದು ಕಡೆ ಪೋಸ್ಟ್ ಮಾಡ್ತಾರೆ. ಅಮ್ಮ, ನೀವು ನನ್ಹತ್ರಕ್ಕೆ ಬಂದ್ಬಿಡ್ತೀರಂತೆ" ಎನ್ನುತ್ತಾ ಪ್ರಸಾದ ರಾವ್ ಕಡೆ ನೋಡಿ ಮುಗುಳ್ನಕ್ಕ ವಾಸು.

"ಓ......ಚೆನ್ನಾಗಿದೆ......ಪುನಃ ನಾನು ನಿಮ್ಮ ಅಮ್ಮ ಜೊತೇಲಿರೋದಾ?" ಎನ್ನುತ್ತಾ ಘೊಳ್ಳನೆ ನಕ್ಕು, ಅದು ಹೇಗಾದ್ರೂ ಇರಲಿ, ನಿನಗೆ ಮದುವೆ ಮಾಡ್ಬಿಟ್ರೆ ನನ್ನ ಜವಾಬ್ದಾರಿಯನ್ನು ನಾನು ನಿರ್ವಹಿಸಿದ ಹಾಗಾಗುತ್ತೆ. ಒಂದು ಸಲ ನಿಮ್ಮ ಅಮ್ಮನ್ನ ನೋಡಿ ನಡೆದ ಕಥೆ ತಿಳಿಸಿಬಿಡ್ತೀನಿ ಏನಂತೀ ? ನಿನ್ನ ಉದ್ದೇಶವೇನು ?'' ಎಂದರು ಪ್ರಸಾದರಾವ್.

ರೋಷದಿಂದ ಕೆಂಪಾದ ಮುಖವನ್ನು ಪಕ್ಕಕ್ಕೆ ತಿರುಗಿಸಿಕೊಂಡು, "ನನಗೆ ಮದುವೆ ಏನ್ಬಂತು, ಅಪ್ಪಾ" ಎಂದ ವಾಸು.

"ಅದ್ಯಾಕೆ ? ನಿನಗೆ ಮದುವೆ ಯಾಕಾಗಬಾರ್ದು ?"

"ಛಿ ! ಈಗ ನನ್ನ ಮದುವೆಗೇನು ಅವಸರ ?"

"ನಿನಗೆ ಮದುವೆ ಯಾವಾಗ ಮಾಡ್ಬೇಕು ಅನ್ನೋದು ನನಗೆ ಗೊತ್ತಿ ರೋದರಿಂದ ಈಗ ಮಾಡಬಹುದು ಅಂದ್ಕೋತಾ ಇದ್ದೀನಿ. ಮದುವೆ ಮಾಡ್ಕೊಂಡು ನಿಮ್ಮ ತಾಯೀನಾ, ಹೆಂಡತೀನಾ ಕರ್ಕೊಂಡು ಹೋಗಿ ಸಂಸಾರ ಹೂಡ್ತಿಯಂತೆ."

"ಬೇಡ ; ಈ ಒಂದು ವಿಷಯದಲ್ಲಿ ನನ್ನನ್ನ ಬಿಟ್ಬಿಡಿ !"

"ಅಂದ್ರೆ ?" ಪ್ರಸಾದರಾವ್ ಹುಬ್ಬುಗಳು ಗಂಟಿಕ್ಕಿದವು.

"ಮದುವೆ ವಿಷಯದಲ್ಲಿ"

"ನಿನಗೆ ಇಷ್ಟವಾದ ಹುಡುಗೀನೇ ಮಾಡ್ತೀನಿ ವಾಸು ! ಯಾವ ಜಾತಿಯೇ ಆಗಲಿ, ಮತವೇ ಆಗಲಿ, ಯಾರೇ ಅಡ್ಡ ಬಂದರೂ ಸರಿ, ನೀನು ಬೇಕು ಅನ್ನೋ ಹುಡುಗೀನೇ ಮದುವೆ ಮಾಡಿಸ್ತೀನಿ ! ಸರಿಯಾ ಈಗ ಹೇಳು–ಯಾರು ಆ ಹುಡುಗಿ ?"

ಉದ್ವೇಗದಿಂದ–ಕೇಳುತ್ತಿದ್ದ ಪ್ರಸಾದರಾವ್ ಕಡೆ ಕೃತಜ್ಞತಾಪೂರ್ವಕ ವಾಗಿ ನೋಡಿ ನಕ್ಕು, "ಯಾವ ಹುಡುಗೀನೂ ಇಲ್ಲ. ಇಷ್ಟಕ್ಕೆ ನನಗೆ ಮದುವೆ ಬೇಡ" ಎಂದ ವಾಸು.

"ಊಂ ! ಎಲ್ರೂ ಹಾಗೇ ಹೇಳ್ತಾರೆ ಬಿಡು" ಎಂದು ತೃಪ್ತಿಯಾಗಿ ನಕ್ಕು "ನಿಮ್ಮ ಮಾವಂದಿರ ಮಕ್ಕಳಲ್ಲಿ ಯಾರನ್ನಾದರೂ ಪ್ರೇಮಿಸಿದ್ದೀಯಾ ? ಅಂದೆ, ಅವರು ಕೊಡ್ತೀನಿ ಅಂತ್ಲೂ, ನೀನು ಮಾಡ್ಕೋಬಹುದು ಅನ್ನೋ ಉದ್ದೇಶ ಏನಾದ್ರೂ ಇದ್ರೆ ನನಗೆ ಸಂತೋಷಾನೇ. ಹಾಗಿಲ್ಲ ಅಂದ್ರೆ–ಅವರು ನನ್ನನ್ನು ಬಹಳ ಸಲ ಕೇಳಿದ್ದು. ಮಂಜುಳ ನನ್ನ ಸೊಸೆಯಾಗಿ ಲಕ್ಷ ರೂಪಾಯಿ ಆಸ್ತಿಯೊಂದಿಗೆ ನನ್ನ ಮನೆಗೆ ಬರ್ತಾಳೆ" ಎಂದರು ಪ್ರಸಾದರಾವ್.

"ಅಪ್ಪಾ......"

"ಹೋಗ್ಲಿ, ಅದು ಬೇಡ ಅಂದ್ರೆ ಯಾವುದಾದ್ರೂ ಸಂಬಂಧ ನೋಡು ಅಂತ ಗೋಪಿಗೆ ಬರೀತೀನಿ."

"ಈ ಜನ್ಮದಲ್ಲಿ ನಾನು ಮದುವೆ ಮಾಡಿಕೊಳ್ಳೋದಿಲ್ಲ."

"ವಾಸೂ......"

"ಹೌದು ಅಪ್ಪಾ ! ನಿಮ್ಮ ಮಾತು ಉಳಿಸೋದಕ್ಕೆ, ಅಮ್ಮನ, ಪೋಷಿ ಸೋದಕ್ಕೆ ಓದಿದೆ. ಉದ್ಯೋಗ ಮಾಡ್ತೀನಿ ಅಮ್ಮನ್ನ ಸಾಕ್ತೀನಿ. ಅವರನ್ನು ಸಂತೋಷಪಡಿಸ್ತೀನಿ."

"ನೀನು ಅವಿವಾಹಿತನಾಗೇ ಜೀವನ ಕಳೀತೀನಿ ಅಂದ್ರೆ ನಿಮ್ಮ ತಾಯಿ ಸಂತೋಷಪಡೋದಕ್ಕೆ ಸಾಧ್ಯವಾ ವಾಸೂ ?"

"ನೀವಿಬ್ಬರೂ ಒಬ್ಬೊಬ್ಬರು ಒಂದೊಂದು ಕಡೆ ಅವಸ್ಥೆಪಡ್ತಿದ್ರೆ ನನಗೆ ಮಾತ್ರ ಸಂತೋಷವಾಗಿರುತ್ತಾ ?"

"ನಾವು ಒಟ್ಟಿಗೆ ಇದ್ದದ್ದು ನೀ ನೋಡಲೇ ಇಲ್ವಲ್ಲಾ ? ಇದೇನೂ ನಿನಗೆ ಹೊಸದಲ್ವಲ್ಲಾ !"

"ಹೊಸ ಅನುಭವ-ಅದೇ-ನಿಮ್ಮಿಬ್ಬರ ಮಧ್ಯ ಒಂದೇ ಮನೇಲಿ ಓಡಾಡೋಅನುಭವ, ಅದೃಷ್ಟ ನನಗೆ ಬೇಕು."

"ಅಸಂಭವ!"

"ನಾನು ಸಂಸಾರಿಯಾಗೋದೂ ಅಸಂಭವವೇ."

"ಏನು ಮೊಂಡುವಾದ ?" ಬೇಸರಪಟ್ಟರು ಪ್ರಸಾದರಾವ್.

"ಎದುರಿಸಿ ಮಾತಾಡ್ತಿದ್ದೀನಿ ಅಂತ ನೊಂದ್ಕೋಬೇಡಿ. ಯಾರದು ಮೊಂಡುವಾದ ? ಯಾರದು ಮೊಂಡು ಹಟ ? ಯಾರದು ಹಗೆ ತುಂಬಿರೋ ಮನಸ್ಸು ?''

"ನೀನು ಲಕ್ಷ ಹೇಳು. ನಮ್ಮ ಮನಸ್ಸುಗಳು ಮುರಿದುಹೋಗಿವೆ."

"ಇಲ್ಲ."

"ನಿನ್ನ ಮುಖ."

"ಹಾಗಂದ ಮಾತ್ರಕ್ಕೆ ಆಗೋದಿಲ್ಲ. ಮನಸ್ಸು ಮುರಿದು ಹೋಗಿದ್ರೆ ನೀವು ಪುನಃ ಮದುವೆ ಯಾಕೆ ಮಾಡ್ಕೊಳ್ಳಿಲ್ಲ? ಅಮ್ಮ ಹೂ ಮುಡಿಯೋದಿಲ್ಲ, ಸಿನಿಮಾ ನೋಡೋದಿಲ್ಲ. ಮದುವೆ ಮುಂಜಿಗೆ ಹೋಗೋದಿಲ್ಲ. ಒಂದು ಒಳ್ಳೇ ಸೀರೆ ಉಡೋದಿಲ್ಲ. ಎಲ್ಲವನ್ನೂ ಮರೆತು ಹಾಯಾಗಿ ಯಾಕಿರೋದಿಲ್ಲ ? ಹಾಗ್ಯಾಕೆ ಕುಗ್ಗಿ ಕೃಶಿಸಿಹೋಗಿದ್ದಾರೆ ? ಮಮತೆ ಅನ್ನೋದು ಮನಸ್ಸಿನ ಮೂಲೇಲಿ ಇದ್ದೇ ಇದೆ. ನಿಮ್ಮ ಮನಸ್ಸುಗಳು ಮುರಿದಿಲ್ಲ.''

ತಲೆಯನ್ನು ರಭಸದಿಂದ ಅಲ್ಲಾಡಿಸುತ್ತಾ, ''ಛೆ, ಛೆ! ಏನೂ ಇಲ್ಲ. ಅವಳಿಗಿದ್ದೂ ನನಗಿಲ್ಲ. ಈಗ ಅದೆಲ್ಲಾ ಯಾಕೆ ವಾಸು? ನಿಮ್ಮನ್ನ ಸೇರಿ ಇರಿ ಅಂತ ಹೇಳೋದು ? ಇನ್ನೆಷ್ಟು ದಿನ ಬದುಕಬೇಕಾಗಿದೆ, ಏನು ಅನುಭವಿಸ ಬೇಕಾಗಿದೆ ?" ಎಂದರು ಪ್ರಸಾದರಾವ್.

"ನನಗೆ ಅಗತ್ಯವೋ, ಅನಗತ್ಯವೋ ಅದೆಲ್ಲಾ ಗೊತ್ತಿಲ್ಲ. ನೀವಿಬ್ಬರೂ ಸೇರಿ ಒಂದು ಕಡೆ ಬಾಳುವೆ ನಡೆಸಿದ ದಿನ......''

"ಬೇಡ, ಬೇಡ ; ಅದೊಂದನ್ನ ಬಿಟ್ಟು ಬೇರೆ ಏನ್ಬೇಕಾದ್ರೂ ಕೇಳು" ಎನ್ನುತ್ತಾ ಅವನ ಮಾತನ್ನು ತಡೆದರು ಪ್ರಸಾದರಾವ್.

"ಹೋಗ್ಲಿ, ನಿಮ್ಮ ಇಷ್ಟಪ್ರಕಾರವೇ ಸರಿ. ನನ್ನ ಮೇಲೆ ತಾನೆ ನೀವಿಬ್ಬರೂ ಹಗೆ ತೀರಿಸ್ಕೋತಿದ್ದೀರಿ ? ನಾನೇ ತಾನೆ ನಿಮ್ಮಿಬ್ಬರ ಮಧ್ಯೆ ನಲುಗಿಹೋಗ್ತಿ

ದ್ದೀನಿ ? ಬಾಲ್ಯದಲ್ಲಿನ ಅನುಭವಗಳನ್ನು ಅಮ್ಮ ನಾಶಪಡಿಸಿದರು. ಮುಂದಿನ ಜೀವನವನ್ನು ನೀವು ಹಾಳುಮಾಡಿ."

"ಕೆಲವು ಸತ್ಯಾಂಶಗಳನ್ನು ತಿಳಿದಿದ್ರೆ ಪುನಃ ನಮ್ಮನ್ನು ಒಂದಾಗು ಅಂತ ನೀನು ಹೇಳೋದಿಲ್ಲ ವಾಸೂ !"

"ಏನೋ ಆ ಸತ್ಯಾಂಶಗಳು ? ತಾತ ನಿಮ್ಮನ್ನ ಮನೆಯಿಂದ ಹೊರ ಗಟ್ಟಿದರು. ಅದಕ್ಕೆ ಅಮ್ಮನ ಮೇಲೆ ಯಾಕೆ ನಿಮಗಷ್ಟು ಹಗೆ? ನೀವು ಬಿಟ್ಟು ಬಂದಾಗ ಅಮ್ಮನಿಗೆ ಇಪ್ಪತ್ತೂರು ವರ್ಷ ಹೌದಾ ? ಅವರು ಅವಿವೇಕದಿಂದ ನಿಮ್ಮನ್ನು ನಿರಾಕರಿಸಿದರು. ಪೌರುಷದಿಂದ ನೀವು ಮನೆ ಬಿಟ್ಟು ಬಂದ್ಬಿಟ್ರಿ. ದೇವರ ಮುಖ ನೋಡಿ ನೀವು ನಿಜ ಹೇಳಿ. ಅಮ್ಮನ್ನ ನೀವು ಮರೆತಿಲ್ಲ. ಪ್ರತಿಕ್ಷಣವೂ ಅವರ ಜ್ಞಾಪಕ ನಿಮಗೆ ಬರುತ್ತೆ. ಅವರು ನಿಮಗೆ ಬೇಕು ಆದರೆ ಅವರನ್ನ......"

"ಛಿ ! ಛಿ ! ಬಾಯ್ಮುಚ್ಚು !" ಆರ್ಭಟಿಸಿದರು ಪ್ರಸಾದರಾವ್.

ವಾಸುವಿಗೆ ನಗು ಬಂತು, ಆದರೆ ನಗಲಿಲ್ಲ.

"ನಿನಗೆ ಗೊತ್ತಿಲ್ಲ. ವಾಸು ! ನಿಮ್ಮ ಅಮ್ಮನ ಪರವಾಗಿ ಇಷ್ಟು ಹೊತ್ತೂ ವಾದಿಸುತ್ತಾ ಬಂದೆ. ಆದರೆ ನನ್ನ ವಿಷಯ ಸ್ವಲ್ಪ ನ್ಯಾಯವಾಗಿ ಯೋಚನೆ ಮಾಡು. ನನ್ನ ಹೃದಯವನ್ನು ಹೊತ್ತಿಸಿದ ಬೆಂಕಿಯ ಕಿಡಿಗಳು, ನಾನು ಮರೆಯಲಾಗದ ಎರಡು ಘಟನೆಗಳನ್ನು ಹೇಳ್ತೀನಿ ಕೇಳು" ಎನ್ನುತ್ತಾ ಎರಡು ಕ್ಷಣ ಮೌನವಹಿಸಿ : "ನೀನು ಹುಟ್ಟಿ ಮೂರು ತಿಂಗಳಾಗಿತ್ತು. ಸಂಜೆ ಆಫೀಸಿನಿಂದ ಬಂದವನೇ ನೇರವಾಗಿ ನೀನಿದ್ದ ಕೊಠಡಿಗೆ ಹೋದೆ. ತೊಟ್ಟಿಲಲ್ಲಿ ನಿದ್ರೆ ಮಾಡುತ್ತಿದ್ದ ನೀನು, ಮೃದುವಾಗಿ ನಿನ್ನ ಕೆನ್ನೆ ನೇವರಿಸಿ ಮುದ್ದಿಟ್ಟೆ. ನೀನು ಎಚ್ಚರಗೊಂಡು ಕಣ್ಣು ಬಿಟ್ಟು ಮೈ ಮುರಿದೆ. ನಿನ್ನನ್ನು ನೋಡುತ್ತಿದ್ದ ನನ್ನ ಮನಸ್ಸು ತುಂಬಾ ಸಂತೋಷಗೊಂಡಿತ್ತು. ಅಂದವಾಗಿ ರಬ್ಬರ್ ಬೊಂಬೆಯಂತಿದ್ದ ನಿನ್ನ ತಲೆಯನ್ನು ಮುದ್ದಿಸಿದೆ. ಕೊಠಡಿಗೆ ಬಂದ ನಿಮ್ಮ ತಾಯಿ ರಭಸದಿಂದ ನಿನ್ನನ್ನು ನನ್ನ ಕೈಯಿಂದ ಕಿತ್ತುಕೊಂಡು, "ನಾಚಿಕೆ ಇಲ್ದಿದ್ರೆ ಸರಿ. ಅವನನ್ನ ಮುಟ್ಟಬೇಡಿ ಅಂತ ಎಷ್ಟು ಸಲ ಹೇಳಿದ್ದೀನಿ ? ನಿಮಗಿಂತ ನಮ್ಮ ಟಾಮಿ ವಾಸಿ'' ಎಂದಳು.

"ನಾಚಿಕೆ ಯಾಕೆ ನನ್ನ ಮಗನ್ನ ನಾನು ಎತ್ಕೊಳ್ಳೋಕೆ ?" ಎಂದು

ಗೊಣಗುತ್ತಾ ಹೊರಗೆ ಬಂದುಬಿಟ್ಟೆ. ಆಮೇಲೆ ಆ ಮನೆ ಬಿಟ್ಟು ಹೊರಗೆ ಬರುವಾಗ ನಿನ್ನನ್ನ ಎತ್ಕೊಂಡೆ. ಪುನಃ ಐದು ವರ್ಷಗಳಾದ ಮೇಲೆ ಬಸ್ಸಿನಲ್ಲಿ ನಿನ್ನನ್ನ ಎತ್ಕೊಂಡೆ ನಿಜವೇ, ನನಗೆ ನಾಚಿಕೆ ಇಲ್ಲ," ಎನ್ನುತ್ತಾ ನಕ್ಕು. "ಇನ್ನು ನಾಚಿಕೆ ಯಾಕೆ? ನೀನು ಹುಟ್ಟಿದ ನಾಲ್ಕು ತಿಂಗಳ ಮೇಲೆ–ಸತ್ಯವಾಗಿ ದೈವ ಸಾಕ್ಷಿಯಾಗಿ ಹೇಳ್ತಿದ್ದೀನಿ, ವಾಸು ! ನೀನು ಹಸುಮಗುವೇನೂ ಅಲ್ಲ; ಈಗ ಹೇಳ್ತೀನಿ. ಅಂದಿನವರೆಗೂ ನಡೆದದ್ದು ಮರೆತು ಹೋಗೋಣವೆಂದೂ, ನಿಮ್ಮ ತಾಯಿಯೊಂದಿಗೆ ಹಾಯಾಗಿ ಸಂಸಾರ ಮಾಡಬೇಕು ಎಂದು ನಿಶ್ಚಯಿಸಿ ಕೊಂಡು ನಾನು–ಆಫೀಸಿನಿಂದ ಬರ್‍ತಾ ಸಣ್ಣ ಜಾಜಿ ಹೂವಿನ ಮಾಲೆ ಕೊಂಡೆ. ನಮ್ಮ ಕೊಠಡಿಗಳು ಬೇರೆಯಾಗಿ ಆಗಲೇ ಆರು ತಿಂಗಳಾಗಿತ್ತು. ರಾತ್ರಿ ಹತ್ತು ಗಂಟೆ ಹೊತ್ತಿನಲ್ಲಿ ನಿಮ್ಮ ತಾಯಿ ಕೊಠಡಿಗೆ ಹೋದೆ. ಅವಳ ತಲೆ ಯಲ್ಲಿ ಹೂ ಮುಡಿಸಿದೆ. ಸರಕ್ಕನೆ ಹಿಂದಿರುಗಿ ರಭಸದಿಂದ ಆ ಹೂವನ್ನು ನನ್ನ ಮುಖದ ಮೇಲೆ ಎಸೆದಳು. ನನಗೆ ಅಂದು ಹೇಗಾದರೂ ಅವಳನ್ನು ದಾರಿಗೆ ತರಬೇಕೆಂಬ ಹಠ. ಬಲವಂತದಿಂದ ಅವಳನ್ನು ನನ್ನ ಹತ್ತಿರಕ್ಕೆಳೆದು ಕೊಂಡೆ, ಅಷ್ಟೆ. ಮರುಕ್ಷಣದಲ್ಲಿ ನನ್ನ ಕೆನ್ನೆಗೆ ಛಟೀರನೆ ಏಟು ಬಿತ್ತು. ದಿಕ್ಕು ತೋಚಲಿಲ್ಲ. ಅವಳನ್ನು ಸುತ್ತಿದ್ದ ನನ್ನ ಕೈಗಳು ವಾಲಿಹೋದವು. ಅವಳು ನನ್ನನ್ನು ಹೊಡೆದದ್ದು ನಿಜವೋ, ಕನಸೋ ನಂಬಲಾಗಲಿಲ್ಲ. ಆಮೇಲೆ ಅಂತಹ ಪ್ರಯತ್ನ, ಅಸಲು–ಅವಳ ಹತ್ತಿರ ಮಾತನಾಡೋದೇ ಬಿಟ್ಟುಬಿಟ್ಟೆ. ನಾನು ಮನೆ ಬಿಟ್ಟು ಬಂದ ಮೇಲೆ–ಯಾವ ಹೆಂಗಸೂ ಮಾಡದ ಕೆಲಸ......"ಎಂದರು ಪ್ರಸಾದರಾವ್.

"ಅಮ್ಮ......ಏನ್ಮಾಡಿದ್ರು ? ನಿಮಗೆ ದ್ರೋಹ ಮಾಡಿದ್ರಾ?" ವ್ಯಭಿಚಾರ ಮಾಡಿದ್ರಾ ?" ಅಸಹನೆಯಿಂದ ಕೇಳಿದ ವಾಸು.

"ವಾಸೂ" ಇನ್ನು ಸಹಿಸಲಾರದಂತೆ ಘರ್ಜಿಸಿದರು ಪ್ರಸಾದರಾವ್.

"ಮತ್ತೆ ? ಹೇಳಿ, ಅಪ್ಪಾ ? ಇಪ್ಪತ್ತೈದು ವರ್ಷದ ಮಗನಿಗೆ ಹೆಂಡತಿಯ ಅವಶ್ಯಕತೆ ಇದೆ ಎಂದು ಭಾವಿಸುವ ನೀವು ಇಪ್ಪತ್ತೊಂರು ವರ್ಷದ ಹೆಂಗಸಿಗೆ ಗಂಡ ಅಗತ್ಯವಿಲ್ಲ ಎಂದು ಭಾವಿಸಿದಿರಾ ? ಅದು ಸಾಲದೆ ಅವರ ಮೇಲೆ ಅಪ ವಾದ ಬೇರೆ ಹೊರಿಸ್ತೀರಾ ?"

"ಅವಳಿಗೆ ಅಗತ್ಯವಿಲ್ಲದೆ ಇದ್ದದ್ದರಿಂದ್ಲೇ ಮಂಗಳಸೂತ್ರವನ್ನು ಕಿತ್ತು ಬಿಸಾಡಿದಳು."

" ಯಾರು ಹೇಳಿದರು ನಿಮಗೆ ?" ನಡುಗಿಹೋದ ವಾಸು.

"ಯಾರು ಹೇಳಿದ್ರೆ ಏನು ? ಅವಳು ಮಂಗಳಸೂತ್ರ.....ಗಂಡ ಬದುಕಿರೋವಾಗ ಯಾವ ಹಿಂದೂ ಮಹಿಳೆಯೂ ಮಾಡದೇ ಇರೋ ಕೆಲಸ, ಮಂಗಳಸೂತ್ರ ತೆಗೆದುಹಾಕಿದ್ಲು."

"ಇಲ್ಲ, ಸುಳ್ಳು ! ಅಮ್ಮ ಬೆಳಿಗ್ಗೆ, ಸಾಯಂಕಾಲ ಮಂಗಳ ಸೂತ್ರವನ್ನ ಕಣ್ಣಿಗೆ ಒತ್ತಿಕೊಳ್ಳೋದನ್ನ ಅನೇಕ ಸಲ ನೋಡಿದ್ದೀನಿ."

"ನಿಮ್ಮ ತಾಯಿ ಮಂಗಳಸೂತ್ರವನ್ನ ಕಣ್ಣಿಗೊತ್ಕೋತಾಳೆ !" ನೀರಸ ನಗೆ ನಕ್ಕರು.

"ಹೋಗ್ಲಿ ಬಿಡಿ, ಅಪ್ಪಾ ! ಮದುವೆ ಮಾಡ್ಕೊಂಡು ಅಪ್ಪ ಬಿಟ್ಟರೋ ಅಮ್ಮನ್ನ ನಾಲ್ಕು ಜನರಿಗೆ ಪರಿಚಯ ಮಾಡಿಕೊಡಲಾರೆ. ಖಿನ್ನವಾಗೋ ಅವರ ಮುಖ ನೋಡಲಾರೆ."

" ಆದರೆ ನನ್ನನ್ನ ಏನು ಮಾಡೂಂತಿ ?" ಬೇಸರ ಬಂದ ಪ್ರಸಾದ ರಾವ್ ಕೆಲವು ಕ್ಷಣ ತೀವ್ರ ಆಲೋಚಿಸಿ ಏನೂ ತೋಚದೆ ಕೇಳಿದರು.

" ಅಮ್ಮನ್ನ ನಿಮ್ಮ ಹತ್ತಿರಕ್ಕೆ ಕರೆಸಿಕೊಳ್ಳಿ......"

" ಕರೆದರೆ ನಿಮ್ಮ ಅಮ್ಮ ಬರ್ತಾಳಾ ? ಎಲ್ರೂ ನಗ್ತಾರಷ್ಟೆ."

" ಯಾಕೆ ನಗೋದು ?"

"ಜುಟ್ಟು ಹಿಡಿದು ಎಳೆದರೆ ನಾಯಿಯ ಹಾಗೆ ಪುನಃ ಬಂದ ಎಂದು......"

" ಯಾಕಪ್ಪ ಅಷ್ಟು ಅನ್ಯಾಯವಾಗಿ ಮಾತಾಡ್ತೀರಿ ? ತಾತ ಎಂದೋ ಸತ್ತುಹೋದ್ರು. ನಿಮ್ಮನ್ನ ಅನ್ನೋದಕ್ಕೆ ಮಾವಂದಿರಿಗೆ ಏನು ಹಿಡಿದಿದೆ ಈಗ ? ಅವರೇಕೆ ನಿಮ್ಮನ್ನ ಇನ್‌ಸಲ್ಟ್ ಮಾಡ್ತಾರೆ ? ಸರಿ, ಈಗಲೇ ಅವಸರ ಏನು ? ನಾಳೆ ಅಮ್ಮನ ಬಳಿಗೆ ಹೋಗ್ತಿದ್ದೀನಿ. ನನ್ನನ್ನ ಏನ್ ಮಾಡು ಅಂತ ಹೇಳ್ತೀರೋ, ಹೇಳಿ. ನಾವೆಲ್ಲಾ-ಅಂದ್ರೆ ನಾವು ಮೂರು ಜನವೂ-ಸೇರಿ ಇರಬೇಕಾದರೆ ನಾನೇನು ಮಾಡಬೇಕು ಅನ್ನೋದನ್ನ ತಿಳಿಸಿ ಕಾಗದ ಬರೀರಿ. ಆಮೇಲೆ ನಿಮ್ಮಿಷ್ಟ ಪ್ರಕಾರ ನಾನು ನಡೆಯೋದು ಮದುವೆ-ನಿಮಗೂ ಇಷ್ಟವಾದ ಸಂಬಂಧವನ್ನೇ ಮಾಡ್ತೀರಂತೆ......" ಎನ್ನುತ್ತಾ ಅಲ್ಲಿ ನಿಲ್ಲದೆ ಹೊರಗೆ ಬಂದು ಸರಸರನೆ ಡ್ರೆಸ್ ಬದಲಾಯಿಸಿ, "ಹಾಗೇ ಪಾರ್ಕ್ ಕಡೆ ಹೋಗಿ ಬರ್ತೀನೆ" ಎನ್ನುತ್ತಾ ಹೊರಟುಹೋದ.

ಗಮ್ಯವಿಲ್ಲದ ಯೋಚನೆಗಳು. ನಿಲುಗಡೆ ಇಲ್ಲದ ನಿರ್ಧಾರಗಳು, ಹೃದಯ ತೀವ್ರವಾಗಿ ಸ್ಪಂದಿಸುತ್ತಿದ್ದರೆ ಮನಸ್ಸು ಏನನ್ನೂ ನಿರ್ಧರಿಸಲಾರದೇ. ಹೋಯಿತು. ರಭಸದಿಂದ ಶತಪಥ ತಿರುಗುತ್ತಿದ್ದ ಪ್ರಸಾದರಾವ್ ಕೆಲಸದ ಹುಡುಗ ಬಂದು ಕೊಠಡಿಯ ಸ್ವಿಚ್ ಹಾಕಿದಾಗ ಗಡಿಯಾರ ನೋಡಿಕೊಂಡರು. ಏಳೂವರೆ ಗಂಟೆಯಾಗಿತ್ತು.

''ವಾಸು ಬಂದ್ನಾ ?" ಎಂದು ಕಳವಳದಿಂದ ಪ್ರಶ್ನಿಸಿದರು.

"ಊಂ, ಬಂದಿದ್ದಾರೆ. ಪೇಪರ್ ನೋಡ್ತಿದ್ದಾರೆ."

ಜವಾಬು ಕೇಳಿ ಹಾಯಾಗಿ ಉಸಿರಾಡಿದರು ಪ್ರಸಾದರಾವ್. ರಾತ್ರಿ ತನ್ನ ಕೊಠಡಿಗೆ ಹೊರಡುತ್ತಾ, "ಆರ್ಡರ್ ಬರುವವರೆಗೂ ಅಮ್ಮನ ಹತ್ತಿರವೇ ಇರ್ತೀನಿ. ನಿಮ್ಮ ಉದ್ದೇಶವೇನೆಂಬುದನ್ನು ಬರೆಯಿರಿ. ಎಂದಿಗಾದರೂ ಸರಿ ನೀವಿಬ್ಬರೂ ಒಂದಾದ ದಿನ......ಬೇರೆ ಯೋಚನೆ !" ಎಂದ ವಾಸು.

ಹಾಗೆ ಹೇಳುತ್ತಿದ್ದ ವಾಸುವಿನ ಕಡೆ ನೋಡಿದರು ಪ್ರಸಾದ್‌ರಾವ್. ನಗಬೇಕೋ, ಅಳಬೇಕೋ ಅರ್ಥವಾಗಲಿಲ್ಲವೆಂಬಂತೆ.

೦ ೦ ೦ ೦ ೦

ಪೇಪರ್ ಓದುತ್ತಿದ್ದ ಪದ್ಮಜ, ಬೂಟ್ಸಿನ ಶಬ್ದ ಕೇಳಿ ಬಂದದ್ದರಿಂದ ಹಿಂದಿರುಗಿ ನೋಡಿ, ಸಂಭ್ರಮದಿಂದ ಎದ್ದು ನಿಂತು "ವಾಸು" ಎಂದಳು.

"ಚೆನ್ನಾಗಿದ್ದೀಯಾ, ಸಣ್ಣಗಾದಂತಿದೆ. ಯಾಕೆ ನ್ಯೆಟ್ಟ ಸರಿ ಇಲ್ವಾ?" ಎಂದುಮುಗುಳ್ನಗುತ್ತಾ ಕೇಳಿ ಕುರ್ಚಿಯಲ್ಲಿ ಕೂತು ಬೂಟ್ಸಿನ ದಾರ ಬಿಚ್ಚುತ್ತಾ

"ನಾನೇನೂ ಸಣ್ಣಗಾಗಿಲ್ಲ. ನೀನೇ ಇಳಿದುಹೋಗಿದ್ದೀ ! ನೀ ಬಂದಿರೋದು ಅತ್ತೆಗೆ ಗೊತ್ತಾ ? ಕಾಫಿ ತರ್ತೀನಿ ಇರು."

ಅವನು ಬಟ್ಟೆ ಬದಲಾಯಿಸುವ ವೇಳೆಗೆ ಕಾಫಿ ಕಪ್ಪಿನೊಂದಿಗೆ ಪ್ರವೇಶಿಸಿದಳು ಪದ್ಮಜ.

ಅವಳ ಕೈಯಿಂದ ಕಾಫಿ ತೆಗೆದುಕೊಳ್ಳುತ್ತಾ, ಅವಳ ಕಡೆ ನೋಡಿದ ವಾಸು, "ನಿಂದು ಒಳ್ಳೆ ಮನಸ್ಸು, ಪದ್ಮಜ ನನ್ನನ್ನ ನೋಡಿದೊಡನೆ ತೆಗೆದು ಹೋಗಿದ್ದೀನಿ ಅಂತ ಹೇಳಿ ಕಣ್ಣಲ್ಲಿ ನೀರು ತಂದ್ಕೊಂಡೆ. ನಿಜವಾಗ್ಲೂ...... ಊಂ......ಇಲ್ಲ. ನನ್ನನ್ನು ನೋಡಿ ಪರಿತಾಪಪಡಬೇಕಾದ ಅಗತ್ಯವಿಲ್ಲ. ಇಲ್ಲಾ

ದರೆ ನನ್ನ ಹೊಟ್ಟೆ ಹಸಿಯದ ಹಾಗೆ ನೀನು, ಅಮ್ಮ ನೋಡ್ಕೋತಿದ್ರಿ. ಅಲ್ಲಿ ಯಾರು ದಿಕ್ಕು ? ತಿಂಡಿ ಏನಾದ್ರೂ ಇದೆಯಾ ?" ಎಂದ ಆರ್ದ್ರ ಹೃದಯದಿಂದ ಅವಳ ಕಡೆ ಪ್ರಸನ್ನ ನೋಟ ಬೀರುತ್ತಾ.

ಮಧುಮತಿ, ಶೀನು, ಲಕ್ಷ್ಮಿ ಎಲ್ಲರೂ ವಾಸುವಿನ ಕೊಠಡಿಗೆ ಬಂದು ಒಬ್ಬೊಬ್ಬರೂ ಒಂದೊಂದು ಪ್ರಶ್ನೆ ಕೇಳುತ್ತಾ, ಅವನನ್ನು ದಿಗ್ಭ್ರಮೆಗೊಳಿಸಿದರು.

"ನೋಡಿ ಅತ್ತೆ! ನಿಮ್ಮ ಮಗಳು ತಿಂಡಿ ತರ್ತೀನಿ ಅಂತ ಹೇಳಿ ಹೋಗಿ ಒಂದು ಗಂಟೆ ಆಯ್ತು!" ಎಂದು ನಗುತ್ತಾ, "ಮದುವೆ ಮಾಡ್ತೀರೇನೋ, ಕಟ್ಕೊಳ್ಳೋವನಿಗೆ ಎಷ್ಟು ತೊಂದರೆ ಆಗುತ್ತೋ ಪಾಪ!" ಎಂದು ಹೇಳುತ್ತಿದ್ದವನು ಪದ್ಮಜ ಬಂದೊಡನೆ ನಿಲ್ಲಿಸಿಬಿಟ್ಟ.

"ಬರೀ ಉಪ್ಪಿಟ್ಟು ಮಾಡೋದಕ್ಕೆ ಒಂದು ಗಂಟೇನಾ ?" ಹಾಸ್ಯ ಮಾಡಿ ನಗುತ್ತಾ ಅವಳ ಕೈಯ್ಯಲ್ಲಿದ್ದ ಪ್ಲೇಟನ್ನು ತೆಗೆದುಕೊಂಡ ವಾಸು.

ನಾಲ್ಕು ದಿವಸ ಸಿನೆಮಾ, ನಾಟಕಗಳನ್ನು ನೋಡುತ್ತಾ ವಾಸುವಿನೊಂದಿಗೆ ಸಂತೋಷದಿಂದ ಕಳೆದಳು ಪದ್ಮಜ. ಆರ್ಡರ್ ಬಂತು. ಎಲ್ಲರ ಮುಖಗಳು ಅರಳಿದವು. ವಾಸು, ಪದ್ಮಜ ತೀವ್ರಾಲೋಚನೆಯಲ್ಲಿ ಮುಳುಗಿ ಹೋದರು.

ಅಂದೇ ಪ್ರಸಾದರಾವ್ ರಿಂದ ಬಂದಿದ್ದ ಕಾಗದದ ಸಾರಂಶ ಹೀಗಿತ್ತು:-

ನಿಮ್ಮ ಅಮ್ಮನಿಗೆ ಅಭ್ಯಂತರವಿಲ್ಲದಿದ್ದರೆ ನನಗೂ ಒಪ್ಪಿಗೆಯೇ. ನೇರವಾಗಿ ನಾನು ಕರೆಯುತ್ತಿದ್ದೇನೆಂದು ತಿಳಿಸದೆ, "ಅಮ್ಮ! ಒಂದು ವೇಳೆ ಅಪ್ಪ ನಿನ್ನನ್ನ ತನ್ನೊಂದಿಗೆ ಬಾ ಎಂದು ಕರೆದರೆ ಏನು ಹೇಳ್ತಿ " ಎಂದು ಕೇಳಿ ನೋಡು. ಅವಳು ಕೊಡುವ ಉತ್ತರವನ್ನು ನನಗೆ ಬರೆ.

ಹೇಗೆ ಕೇಳಬೇಕು, ಏನೆಂದು ಕೇಳಬೇಕು, ಯಾವಾಗ ಕೇಳಬೇಕು ಏನೂ ತೋಚದೆ ಮನೆಯೆಲ್ಲಾ ಸುತ್ತಿದ ವಾಸು.

ಅವನು ಹೊರಟುಹೋಗುವ ಮುನ್ನ ತನ್ನನ್ನು ಪ್ರೇಮಿಸುತ್ತಿದ್ದಾನೋ ಇಲ್ಲವೋ ತಿಳಿದುಕೊಳ್ಳಬೇಕು. ಹೇಗೆ ? ತಾನೇನು ಕೇಳಬೇಕು ? ಅದೇ ಗಂಡಸಾದರೆ ಕೇಳಿಬಿಡುತ್ತಾನೆ-ನಾನು ನಿನ್ನನ್ನು ಪ್ರೀತಿಸುತ್ತಿದ್ದೇನೆ. ನೀನೂ ನನ್ನನ್ನು ಪ್ರೀತಿಸ್ತಿದ್ದಿಯಾ ಎಂದು. ಛಿ ! ಛಿ ! ಅಮ್ಮ ಅಪ್ಪ ವಾಸೂನ ಬಿಟ್ಟು ಎಲ್ಲೆಲ್ಲೋ ಹುಡುಕ್ತಿದ್ದಾರೆ. ತಾಯಿ ತಂದೆಯರ ಮೇಲೆ ಹಠಿಸಲಾರ

ದಷ್ಟು ಕೋಪ ಬಂತು ಪದ್ಮಜಳಿಗೆ. ಕಣ್ಣುಗಳಲ್ಲಿ ನೀರು ಬಂದಿತು. ಕೊಠಡಿಯಿಂದ ಹೊರಗೆ ಬರದೆ ಅಲ್ಲೇ ಸ್ವಲ್ಪ ಹೊತ್ತು ಕೂತು, ಮಲಗಿ, ಕಿಟಕಿಯ ಕಂಬಿಗಳನ್ನು ಹಿಡಿದು ಶೂನ್ಯವನ್ನು ನೋಡಿ ಏನು ಮಾಡಲೂ ತೋಚದೆ ಪದ್ಮಜ ಅಡಿಗೆಯ ಮನೆಯಲ್ಲಿದ್ದ ಮಧುಮತಿಯ ಬಳಿಗೆ ಬಂದು, "ಅತ್ತೇ! ವಾಸೂಗೆ ಮದುವೆ ಮಾಡೋದಿಲ್ವಾ?" ಎಂದು ಕೇಳಿದಳು.

ಮುಗುಳ್ನಕ್ಕು, "ಏನಮ್ಮಾ, ಮ ದು ವೆ ಬೇಕು ಅಂತ ನಿನ್ಹತ್ರ ಹೇಳಿದ್ನಾ?" ಎಂದಳು ಮಧುಮತಿ.

"ಛಿ! ಹೋಗು, ನನ್ಹತ್ರ ಯಾಕೆ ಹೇಳ್ತಾನೆ?"

"ನೆನ್ನೆ ಎಲ್ಲಾ ಮನೆ ಸೇರ್ದ್ದೆ ಸುತ್ತಿದ್ರಿ, ಏನಾದ್ರೂ ಹೇಳಿದನೇನೋಂತ. ಈ ಪ್ರಶ್ನೆ ವಾಸೂನ್ನೇ ಕೇಳು ಪದ್ಮಜ! ಏನ್ ಹೇಳ್ತಾನೋ ನೋಡೋಣ. ಅವನ ಹತ್ರ ಮಾತಾಡಬೇಕು ಅಂದ್ರೇನೇ ನನಗೆ ಭಯ. ಜಯಾನ ಮಾಡ್ಕೋ ಅಂತ ರಾಜು ಕಾಗದ ಬರೆದಿದ್ದಾನೆ......"

"ಜಗಪತಿಗೆ ಕೊಡಬೇಕು ಅಂತಿದ್ರೇನೊ"! ಮಧುಮತಿಯ ಮಾತಿಗೆ ಅಡ್ಡ ಬರುತ್ತಾ ಹೇಳಿದಳು ಪದ್ಮಜ.

"ಊಂ, ಅಂದ್ಕೊಳ್ಳೋದೇನ್ಬಂತು? ಅಳಿಯ ಅಂತ ಹೇಳಿ ಹಬ್ಬಕ್ಕೆ ಉಡುಗೊರೆಗಳನ್ನು ಕೂಡ ಕೊಟ್ರು. ಅವಳು ಅವನು ಬಹಳ ಸಲುಗೆಯಿಂದ ಓಡಾಡ್ತಾ ಇದ್ರು."

"ಮತ್ತೆ ಈಗ ಯಾಕೆ ಅವನಿಗೆ ಕೊಡೋದಿಲ್ಲ?" ಪುನಃ ಪದ್ಮಜಳ ಪ್ರಶ್ನೆ.

"ನನಗೆ ಆ ವಿಷಯ ಗೊತ್ತಿಲ್ಲ."

"ಏನಿದೆ ವಿಷಯ? ಫಾರಿನ್‌ಗೆ ಹೋಗಿ ದೊರೆಸಾನೀನ ಮದುವೆಯಾಗಿ ಬಂದ." ಮಧುಮತಿಯ ಮಾತನ್ನು ಪೂರ್ತಿ ಮಾಡಿದಳು ಆಗತಾನೆ ಅಡಿಗೆಯ ಮನೆಗೆ ಕಾಲಿಟ್ಟ ಲಕ್ಷ್ಮಿ.

ಎರಡು ಕ್ಷಣ ನಿಶ್ಶಬ್ದವಾಗಿ ಕಳೆದ ನಂತರ—"ಅತ್ತಿಗೇ; ಭಾವನವರು ಬರೆದ ಕಾಗದವನ್ನು ವಾಸು ನೋಡಿದ್ನಾ?" ಎಂದು ಕೇಳಿದಳು ಲಕ್ಷ್ಮಿ.

"ಇಲ್ಲ" ಎಂದು ಮಾತ್ರ ಹೇಳಿ ಮಾತು ಬೆಳೆಸಲು ಅವಕಾಶ ಕೊಡದೆ ಅಲ್ಲಿಂದ ಹೊರಟುಹೋದಳು ಮಧುಮತಿ.

ಪದ್ಮಜಳ ಹೃದಯ ಡವಡವನೆ ಹೊಡೆದುಕೊಳ್ಳುತ್ತಿತ್ತು. ಜಯ ಅಂದರೆ ವಾಸೂಗೆ ಇಷ್ಟ. ಜಯ ಹಾಡನ್ನ ಬಹಳ ಸಲ ಮೆಚ್ಕೊಂಡಿದ್ದಾನೆ. ಅತ್ತೆ

ಕೇಳಿದಾಗ ಅವನು ಒಪ್ಕೊಂಡ್ಬಿಡ್ತಾನೆ. ಅವಳ ಹೃದಯ ಬಲವಾಗಿ ಹಿಡಿ ದಂತಾಯಿತು. ತಾನು ನಿರ್ಭಾಗ್ಯಳು ಎಂದು ಊಹಿಸಿಕೊಂಡ ಪದ್ಮಜಳ ಕಾಲುಗಳು ಅವಳನ್ನು ತನ್ನ ಕೊಠಡಿಗೆ ಎಳೆದೊಯ್ದಿತು.

○ ○ ● ○ ●

ಅಂದು ಅನೇಕ ಸಲ ಮಧುಮತಿಯ ಬಳಿಗೆ ಹೋಗಿ ಏನೇನೋ ಮಾತ ನಾಡಿ ಪುನಃ ತಾನೇನೆಂದು ಕೇಳಬೇಕೋ ಗೊತ್ತಾಗದೆ ಸಂಕೋಚದಿಂದ ಹೊರಟು ಹೋಗುತ್ತಿದ್ದ ವಾಸು, ಊಟ ಮುಗಿಸಿ ತನ್ನ ಕೊಠಡಿಗೆ ಹೋಗುತ್ತಾ "ಅಮ್ಮ, ನನ್ನ ಕೊಠಡಿಗೆ ಬಾ, ಸ್ವಲ್ಪ ಮಾತನಾಡಬೇಕು" ಎಂದು ಹೇಳಿ ಹೊರಟುಹೋದ.

ಕಿರುನಗೆ ಸೂಸುತ್ತಾ, "ನಾನೂ ಅಂದ್ಕೋತಾಲೇ ಇದ್ದೀನಿ'' ಎಂದಳು ಮಧುಮತಿ.

ಊಟ ಮಾಡದೆಯೇ ತಟ್ಟೆಯಲ್ಲಿ ಕೈ ತೊಳೆದು ಎದ್ದು ಹೊರಗೆ ಹೊರಟು ಹೋದಳು ಪದ್ಮಜ.

"ನೋಡಿದಿರಾ! ಅತ್ತಿಗೇ? ಇವಳನ್ನು ಹೇಗೆ ದಾರಿಗೆ ತರ್ತೀರೋ! ನನ ಗೇನೂ ಅರ್ಥವಾಗ್ತಾ ಇಲ್ಲ. ಅವರು ನಾಳೆ ಹುಡುಗೀನ ನೋಡೋಕೆ ಬರ್ತೀ ವೀಂತ ಫೋನ್ ಮಾಡಿದ್ದಾರೇಂತ ನಿಮ್ಮ ತಮ್ಮ ಹೇಳಿದರು. ಊಟ ಮಾಡಲ್ಲ ಅಂದರೆ ಬಲವಂತವಾಗಿ ಕರ್ಕೊಂಡು ಬಂದೆ. ಊಟ ಮಾಡದೇನೇ ಕೈ ತೊಳೆದು ಹೋಗ್ತಿದ್ದಾಳೆ. ಚಿಕ್ಕ ಹುಡುಗೀನಾ? ಏನಾದ್ರೂ ಸರಿ. ಈ ಸಲ ಬಿಡೋದಿಲ್ಲ." ಬೇಸರದಿಂದ ನೊಂದ ಧ್ವನಿಯಲ್ಲಿ ಹೇಳಿದಳು ಲಕ್ಷ್ಮಿ.

"ಎಷ್ಟು ಗಂಟೆಗೆ ಬರ್ತಾರೆ ? ಬೆಳಿಗ್ಗೇನೆ ಹೊರಟುಹೋಗ್ತಾನಂತೆ ವಾಸು ಮಧ್ಯಾಹ್ನ ಎರಡು ಗಂಟೆಗೆ ಬರ್ತಾರೆ. ನಾಡಿದ್ದು ಹೋಗಬಹುದು. ಇರೂಂತ ಹೇಳಿ, ಅತ್ತಿಗೆ."

"ಹೇಳ್ತೀನಿ ಬಿಡು."

○ ○ ● ● ●

ವಾಸುವಿನ ಕೊಠಡಿಯಲ್ಲಿ ಕಾಲಿಡೋ ವೇಳೆಗೆ ಶುಭ ಶಕುನವೆಂಬಂತೆ ಗೋಡೆಯಲ್ಲಿದ್ದ ಗಡಿಯಾರ ಒಂದು ಬಾರಿ ಠಣ್ಣನೆ ಹೊಡೆಯಿತು.

"ಒಂಭತ್ತೂವರೆ" ಎನ್ನುತ್ತಾ ಕುರ್ಚಿಯಲ್ಲಿ ಕೂತು, "ಎಲ್ಲಾ ತಗೊಂಡಿದ್ದೀಯಾ, ಪ್ರಯಾಣ ಯಾವಾಗ ?" ಎಂದಳು ಮಧುಮತಿ.

"ಬೆಳಿಗ್ಗೆಯೇ-ಹೋಗಿ ಒಂದು ವಾರದಲ್ಲಿ ವಾಪಸ್ ಬರ್ತೀನಿ. ನಮ್ಮ ಜೊತೇಲಿ ಅಜ್ಜೀನೂ ಕರ್ಕೊಂಡು ಹೊರಟುಹೋಗೋಣ."

"ನೋಡೋಣ !" ಎನ್ನುತ್ತಾ ಏನೋ ಆಲೋಚನೆಯಲ್ಲಿ ಮುಳುಗಿದಳು ಮಧುಮತಿ.

ಇಬ್ಬರ ಮಧ್ಯೆ ಕೆಲ ಹೊತ್ತು ನಿಶ್ಯಬ್ದ ತಾಂಡವಾಡಿತು."ನಾಳೆ ಪದ್ಮಜಾನ ನೋಡೋದಕ್ಕೆ ಹುಡುಗನ ಕಡೆಯವರು ಬರ್ತಾರಂತೆ. ಅವಳನ್ನ ಸ್ವಲ್ಪ ಗಮನಿಸ್ಕೋ ಎಂದ ಗೋಪಿ" ಎಂದು ಹೇಳುತ್ತಾ ನಕ್ಕಳು ಮಧುಮತಿ.

"ಗಮನಿಸ್ಕೊಳ್ಳೋದು ಅಂದ್ರೆ?" ಆಶ್ಚರ್ಯದಿಂದ ಕೇಳಿದ ವಾಸು.

"ಏನೋ ಯಾರ ಉದ್ದೇಶಗಳೂ ಅರ್ಥವಾಗೋದಿಲ್ಲ. ನಡೀತಿರೋದೆಲ್ಲಾ ಕನಸೋ, ವಾಸ್ತವವೋ ನನಗೇ ಗೊತ್ತಾಗ್ತಾ ಇಲ್ಲ. ಮಾವ, ಪದ್ಮಜ, ನೀನು ಯಾರ ವಿಷಯವೂ ನನಗೆ ಅರ್ಥವಾಗ್ತಿಲ್ಲ."

ಉದಾಸೀನಳಾಗಿ ಕಾಣುತ್ತಿದ್ದ ಮಧುಮತಿಯ ಕಡೆ ಕಿರುನಗೆಯಿಂದ ನೋಡುತ್ತಾ ಬೇಗ ಎಲ್ರೂ ಅರ್ಥವಾಗ್ತಾರೆ ಅಮ್ಮ. ಆಲ್ಲಾ, ಗಮನಿಸ್ಕೋ ಅಂದ್ರೆ ಬಲವಂತ ಮಾಡ್ತಾರಾ ಮದುವೆಗೆ ?" ಎಂದ ವಾಸು.

"ಅವಳ ಉದ್ದೇಶವೇನೋ. ಮತ್ತೆ ಯಾರಾದ್ರೂ ನೋಡೋದಕ್ಕೆ ಬರ್ತಾರೆ ಅಂದ್ರೆ ಕೋಪಿಸ್ಕೊಂಡು ಒಂದೊಂದು ಸಲ ಅತ್ತೂಬಿಡ್ತಾಳೆ.''

"ಆದ್ರೆ ಇವರಿಗ್ಯಾಕೆ ಇಷ್ಟು ಅವಸರ ?"

"ಇಪ್ಪತ್ತು ವರ್ಷದ ಮಗಳು. ಅವಸರ ಇರೋದಿಲ್ವಾ?"

''ಗಂಡಿನ ಕಡೆಯವರು ಬಂದ್ರೆ ಗಮನಿಸ್ಕೊಳ್ಳೋದೇನ್ಬಂತಮ್ಮಾ?'' ನಗುತ್ತಾ ಕೇಳಿದ ವಾಸು.

''ಅದೇ ವಾಸು! ಹಿಂದಿನ ಸಲ ಏನ್ಮಾಡಿದ್ಲು ಗೊತ್ತಾ? ಹುಡುಗನ ಕಡೆಯವರು ಬರ್ತೀನಿ ಅಂದ್ರೆ ಅವಳ ಫ್ರೆಂಡ್ ಜೊತೇಲಿ ಅವಳ ಎಸ್ಟೇಟ್ ನೋಡೋದಕ್ಕೆ ಹೊರಟುಹೋದ್ಲು.''

''ಹೋಗ್ಲಿ, ಅವಳ ಇಷ್ಟ ಏನೂಂತ ತಿಳ್ಕೊಂಡಿದ್ದೀಯಾ ?'' ಎನ್ನುತ್ತಾ ನಕ್ಕ ವಾಸು. ಅವರಮ್ಮ ನಾನು ಇಬ್ರೂ ಕೇಳಿದ್ವಿ. ಬಂದ ಪ್ರತಿ ಸಂಬಂಧವೂ ಹಿಡಿಸಲಿಲ್ಲ ಅಂತ ಸ್ವಲ್ಪ ದಿನ, ಸಂಬಂಧಗಳನ್ನ ನೋಡ್ಬೇಡ ಅಂತ ಸ್ವಲ್ಪ ದಿನ,

ಹೋಗ್ಲಿ, ನಿನ್ನ ಮನಸ್ಸಿನಲ್ಲಿ ಯಾರನ್ನಾದರೂ ಮಾಡ್ಕೊಳ್ಳೊ ಉದ್ದೇಶ ಇದೆಯಾ ಅಂತ ಕೇಳಿದ್ರೆ ಅದ್ಕೂ ಹೇಳೋದಿಲ್ಲ. ಮಾವನಿಗೆ ಬೇಜಾರಾಗ್ಬಿಟ್ಟಿದೆ. ಹೋದ ಸಲ ಏನ್ಮಾಡಿದ್ಲು ಗೊತ್ತಾ? ರಿಟೈರ್ಡ್ ಜಡ್ಜ್‌ಗಳ ಮಗ ಅಂತೆ. ಆ ಹುಡುಗನ ತಾಯಿ ಯಾವಾಗ್ಲೋ ಪದ್ಮಜಾನ ನೋಡಿದ್ಲಂತೆ. ಇಪ್ಪತ್ತೈದು ಸಾವಿರ ವರದಕ್ಷಿಣೆ, ಹುಡುಗೀನ ನೋಡೋದೊಂದು ಬಿಟ್ಟು ಎಲ್ಲಾ ಸೆಟಲ್ ಆದಹಾಗೇ ಇತ್ತು ಅಂದ್ಕೋ. ವೈಶಾಖ ಮಾಸದಲ್ಲಿ ಮದುವೆ ಅಂತೂ ತೀರ್ಮಾನವಾಗಿತ್ತು. ರಾತ್ರಿ ಊಟ ಮಾಡೋವಾಗ, ಮಾರನೆಯ ದಿನ ಮಧ್ಯಾಹ್ನ ಮೂರು ಗಂಟೆಗೆ ಮದುವೆ ಗಂಡು ಹುಡುಗೀನ ನೋಡೋದಕ್ಕೆ ಬರ್ತಾನೆ ಎಂದು ಹೇಳಿದ. ಲಕ್ಷ್ಮಿ ಸ್ವಲ್ಪ ಗಟ್ಟಿಯಾಗಿ ಹೇಳಿದಳು ಪದ್ಮಜಾಗೆ. ಆ ಸಂಬಂಧ ಒಪ್ಕೋ ಅಂತ. ಆಗ ಮೌನವಾಗಿದ್ದುಬಿಟ್ಲು. ಬೆಳಿಗ್ಗೆ ಎದ್ದೊಡನೆ ಡ್ರೆಸ್ ಮಾಡ್ಕೊಂಡು ತನ್ನ ಸ್ನೇಹಿತೆ ಮನೆಗೆ ಹೋಗ್ತೀನಿ ಅಂತ ಹೇಳಿ ಹೊರಟುಹೋದ ಪದ್ಮಜ ಮದುವೆ ಗಂಡು ಬಂದ್ಮೇಲೂ ವಾಪಸ್ ಬರಲಿಲ್ಲ. ಊಟ, ತಿಂಡಿ ಇಲ್ದೆ ಒದ್ದಾಡಿಹೋದ್ವಿ. ಅವಳ ಫ್ರೆಂಡ್ ಮನೆಗಳಿಗೆಲ್ಲಾ ಹೇಳಿ ಕಳಿಸಿದ್ವಿ. ಆ ಹುಡುಗ ಬಂದ ಮೇಲೆ ಫ್ರೆಂಡ್ ಎಸ್ಟೇಟ್‌ಗೆ ಹೋಗಿದ್ದಾಳೆಂದೂ ನಾಳೆ ಸಂಜೆವರೆಗೂ ಬರೋದಿಲ್ಲ ಎಂದು ಶೀನು ಹೇಳ್ದ."

"ಮತ್ತೆ ಏನ್ಮಾಡಿದ್ರಿ?" ನಗುತ್ತಾ ಆತುರದಿಂದ ಕೇಳಿದ ವಾಸು.

"ವಾಸಂತಿ ಇಲ್ವಾ? ನಮ್ಮ ಎದುರು ಮನೆ ಹುಡುಗಿ ..."

"ಅವರು ಒಪ್ಕೊಂಡ್ರಾ?"

"ಮಾವನ ಸ್ನೇಹಿತ ತಾನೆ ಆ ಹುಡುಗಿ ತಂದೆ, ಪರವಾಗಿ ವಾಸಂತೀನ ತೋರಿಸೋಣ ಗಪ್ ಚಿಪ್ ಆಗಿರಿ ಎಂದನಂತೆ."

ಪಕಪಕನೆ ನಕ್ಕ ವಾಸು. ತಾನೂ ನಗುತ್ತಾ, "ಆಮೇಲೆ ನಮ್ಮ ಹುಡುಗಿಗೆ ಹಿಡಿಲಿಲ್ಲ ಅಂತ ಹೇಳಿ ಕಳಿಸಿದ್ವಿ. ಅವಮಾನ! ಗೋಪಾಲರಾವ್ ಮಗಳು ಮದುವೆ ಗಂಡುಗಳಲ್ಲಿ ತಪ್ಪು ಕಂಡುಹಿಡೀತಾಳೆ ಅಂತ ಆಗ್ಲೇ ಹೆಸರು ಬಂದ್ಬಿಟ್ಟಿದೆ. ಈ ಸಂಬಂಧ ಅವಳು ಒಪ್ಪದಿದ್ರೂ ಮಾಡ್ಬಿಡ್ತಾನಂತೆ ಮಾವ" ಎಂದಳು ಮಧುಮತಿ.

"ಒಪ್ಪದೇ ಇದ್ರೂ ಮಾಡ್ತಾರಾ? ಅದೇನಮ್ಮ?" ಏನೂ ಅರ್ಥವಾಗದಂತೆ ನೋಡಿದ."

"ಅವಳ ರೀತಿ ನೋಡಿದ್ರೆಯಾರನ್ನೊ ಮನಸ್ಸಿನಲ್ಲಿಟ್ಟುಕೊಂಡಿರೋ ಹಾಗಿದೆ."

"ಹಾಗಾದ್ರೆ ನೀನಾದ್ರೂ ಕೇಳಿ ತಿಳ್ಕೊ ಅಮ್ಮಾ! ಬಲವಂತ ಮಾಡಿದ್ರೆ ಏನಾದ್ರೂ ಪ್ರಮಾದಕ್ಕೆ ದಾರಿಯಾಗಬಹುದು." ನಡುಗುವ ಧ್ವನಿಯಲ್ಲಿ ಹೇಳಿದ ವಾಸು.

"ಸರಿ ಬಿಡು. ಅದೆಲ್ಲಾ ಅವರ ತಂದೆ ತಾಯಿ ನೋಡ್ಕೋತಾರೆ. ದೊಡ್ಡಮಾವ ಕಾಗದ ಬರೆದಿದ್ದಾರೆ," ಎನ್ನುತ್ತಾ ಅವನ ಕೈಗೆ ಕವರ್ ಕೊಟ್ಟಳು ಮಧುಮತಿ.

ಕಾಗದ ನೋಡಿದ ವಾಸು ಕಿರುನಗೆ ಸೂಸುತ್ತಾ, "ಯಾಕೆ ಆ ಸಂಬಂಧ ಮುರಿದುಹೋಯ್ತಾ?" ಎಂದ.

"ಇರ್ಬೇಕು. ಬ್ರಹ್ಮ ಯಾರಿಗೆ ಯಾರನ್ನ ಮುಡಿ ಹಾಕಿರ್ತಾನೋ!" ಆಸೆಯಿಂದ ಮಗನ ಮುಖ ನೋಡಿದಳು.

ಸ್ಕೂಲ್ ಫೈನಲ್ ಪಾಸು ಮಾಡಿ ಮುಂದೆ ಓದಲು ಸಾಮರ್ಥ್ಯ, ಅವಕಾಶ ಇಲ್ಲದೆ ವಿಲಿವಿಲಿ ಒದ್ದಾಡಿದ ತನ್ನನ್ನು ಹಾಸ್ಯ ಮಾಡಿದರಾಜಶೇಖರ್, ಈ ದಿನ ತಾನು ಐ. ಎ. ಎಸ್. ಆಫೀಸರ್ ಆದೊಡನೆಯೇ ಮಗಳನ್ನು ಕೊಟ್ಟು ಮದುವೆ ಮಾಡ್ತಾರಾ? ತನ್ನ ತಾಯಿ ಅವರನ್ನು ಅವಲಂಬಿಸಿ ಊಟಕ್ಕೆ ಒದ್ದಾಡ್ತಿದ್ರಲ್ಲಾ! ಅವರ ಮಗಳು ರಾಜಭೋಗ ಅನುಭವಿಸಬೇಕೇನೋ!. ಎಷ್ಟು ಸ್ವಾರ್ಥ, ಛಿ! ಛಿ! ಏನು ಮನುಷ್ಯರು! ಹುಡುಗಿಗೆ ಇಷ್ಟವೇನಂತೆ. ಸದಾ ತನ್ನನ್ನೇ ಸ್ಮರಿಸುತ್ತಾ ನಾಟಕಗಳೂ, ಸಂಗೀತ, ಎಲ್ಲವನ್ನೂ ಮರೆತು ತನ್ನನ್ನ ಮದುವೆಯಾಗ್ತೀನಿ ಅಂತಾಳಾ? ಇವರಿಗೆ ಬೇಕಾಗಿರೋದು ತಾನಾ ತನ್ನ ದರ್ಜೇನಾ? ವಿಷಾದದ ನಗೆ ನಕ್ಕು ಮಧುಮತಿಗೆ ಕೊಟ್ಟುಬಿಟ್ಟ ಆ ಕಾಗದವನ್ನು.

"ಏನು ಜವಾಬು ಬರೀ ಅಂತೀ?" ಧ್ವನಿಯಲ್ಲಿ ಆತುರ.

"ಈಗ ವಾಸೂಗೆ ಮದುವೆ ಮಾಡೋ ಯೋಚನೆ ಇಲ್ಲ. ಬೇರೆ ಸಂಬಂಧ ನೋಡ್ಕೊಳ್ಳಿ." ಅಂತ ಬರಿ.

"ವಾಸೂ!"

"ಅಷ್ಟೆ, ಅಮ್ಮಾ!" ಅವನ ಧ್ವನಿಯಲ್ಲಿ ಕಾಠಿಣ್ಯವಿತ್ತು. ಮುಖ ಕೆಂಪಗಾಗಿತ್ತು. ಮತ್ತೆ ಪುನಃ ಕೆಲವು ಕ್ಷಣಗಳು ನಿಶ್ಶಬ್ದವಾಗಿ ಕಳೆದವು.

"ಮಾತಾಡ್ಬೇಕು, ಬಾ ಅಂದೆ, ಇದೇನಾ ?" ಎನ್ನುತ್ತಾ ಎದ್ದಳು ಮಧುಮತಿ. ಅವಳಿಗೆ ಕೋಪ ಬಂದಿದೆ ಎಂಬುದನ್ನು ಗ್ರಹಿಸಿದ ವಾಸು ಕಿರುನಗೆ ಸೂಸುತ್ತಾ, "ಕೂತ್ಕೊ ಅಮ್ಮ" ಎಂದ.

"ನಿದ್ದೆ ಮಾಡು ಬೆಳಿಗ್ಗೆ ಹೊರಡ್ತೀನಿ ಅಂತ ಹೇಳ್ತಿದ್ದೀ. ಅತ್ತೆ ಇರು ಅಂತಿದ್ದಾಳೆ," ಎಂದಳು ಮಧುಮತಿ ಪುನಃ ಕೂಡುತ್ತಾ.

"ನಾಳೆ ಇರ್ತೀನಿ. ಮಾವ ಹೇಳಿದ್ದಾರೆ. ಆದರೆ ಅಮ್ಮಾ." ಎಂದು ನಿಲ್ಲಿಸಿದ ವಾಸು.

ಪ್ರಶ್ನಾರ್ಥಕವಾಗಿ ನೋಡಿದಳು ಮಧುಮತಿ.

"ನಾನೊಂದು ಮಾತು ಕೇಳ್ತೀನಿ. ನೀನು ಮನಸ್ಸು ಬಿಚ್ಚಿ ನಿನ್ನ ನಿರ್ಧಾರ ಏನೂ ಅನ್ನೋದನ್ನ ನನಗೆ ಹೇಳ್ತೀಯಾ ಅಮ್ಮಾ ?" ಕಂಪಿಸುವ ಧ್ವನಿಯಲ್ಲಿ ಕೇಳಿದ ವಾಸು.

"ಅದೇನೋ ಕೇಳಪ್ಪಾ.'' ವಾಸೂ ! ಅವಳ ವದನ ಪ್ರಶ್ನಾರ್ಥಕವಾಯಿತು..

"ಏನು ಕೇಳ್ತಾನೆ ? ಯಾರನ್ನೋ ಪ್ರೀತಿಸ್ತಿದ್ದೀನಿ. ಮದುವೆ ಮಾಡು ಅಂತಾನೆ. ಅದು ಬಿಟ್ಟರೆ ಇನ್ನೇನಿರುತ್ತೆ ?" ಎಂದುಕೊಂಡಳು ಮಧುಮತಿ.

"ಕೇಳಪ್ಪ ವಾಸೂ ! ನಿನ್ನ ನಿರ್ಭಾಗ್ಯ ಅಮ್ಮ ನಿನಗೆ ಏನೂ ಕೊಡದೇ ಹೋದ್ರೂ ನನ್ನ ಹತ್ತಿರ ಮನಸ್ಸು ಬಿಚ್ಚಿ ಮಾತೂ ಆಡೋದಿಲ್ವಾ !" ಎಂದು ಖಂಡಿಸಿ ಕೇಳಿದಳು.

"ಹಾಗೇನಿಲ್ಲ, ನನಗೆ ಬೇಕಾದ ಉತ್ತರ ಬರುತ್ತೋ ಇಲ್ವೋ ! ನಾಳೆ ಮಾವನ ಹತ್ತಿರಾನೂ ಮಾತನಾಡಿ.........."

"ನಿನಗೆ ಬೇಕಾದ ಜವಾಬನ್ನೇ ಕೊಡ್ತೀನಿ. ನಿನ್ನನ್ನ ಸಂತೋಷಪಡಿಸೋದಕ್ಕಿಂತ ಹೆಚ್ಚಿನದು ನನಗೇನು ಬೇಕು ? ಕೇಳು. ವಾಸೂ !" ಅವಳ ಗಂಟಲು ಗದ್ಗದವಾಯಿತು.

"ನನಗೆ ಬೇಕಾದ ಜವಾಬೇ ಬರುತ್ತಲ್ವಾ ?"

"ಅಬ್ಬ ! ಅದೇನೋ ಹೇಳು ವಾಸು !"

"ಅಮ್ಮ ! ಅಪ್ಪ ನಿನ್ನನ್ನು ಬಾ ಅಂತ ಕರೆದರೆ ಹೋಗುವುದಕ್ಕೆ ನಿನಗೇನೂ ಅಭ್ಯಂತರ ಇಲ್ಲ ತಾನೆ ?"

ತಾನು ಊಹಿಸದಿದ್ದ ಪ್ರಶ್ನೆ! ಹೆದರಿದಳು! ಅವಳ ಹೃದಯದ ಬಡಿತ ತೀವ್ರವಾಯಿತು. ದೇಹ ಕಂಪಿಸುತ್ತಿತ್ತು. ಮನಸ್ಸು ಮೂಕವಾಯಿತು. ಆಲೋಚನೆಸ್ತಂಭಿಸಿ ಹೋಗಿ ನಿರ್ಜೀವ ಪ್ರತಿಮೆಯಂತೆ ರೆಪ್ಪೆ ಅಲುಗಿಸದೆ ತನ್ನ ಕಡೆಯೇ ನೋಡುತ್ತಿದ್ದ ಮಧುಮತಿಯ ಭುಜಗಳನ್ನು ಹಿಡಿದು ಅಲ್ಲಾಡಿಸುತ್ತಾ, "ನನಗೆ ಗೊತ್ತಮ್ಮಾ! ನೀನು ಒಪ್ಪೋದಿಲ್ಲ. ಅಮ್ಮ-ಅಪ್ಪ ಇಬ್ಬರೂ ಒಟ್ಟಿಗೆ ಇರೋದನ್ನ ನಾನು ನೋಡೋದಿಲ್ಲ. ನಾನು ದರಿದ್ರದವ! ನಿರ್ಭಾಗ್ಯ!" ಎನ್ನುತ್ತಾ ಮುಷ್ಟಿಯಿಂದ ತಲೆ ಚಚ್ಚಿಕೊಳ್ಳಲಾರಂಭಿಸಿದ ವಾಸು.

ಕಣ್ಣೀರು ಧಾರಾಕಾರವಾಗಿ ಸುರಿಯುತ್ತಿರಲು, ಅವನನ್ನು ಹತ್ತಿರಕ್ಕೆಳೆದುಕೊಂಡು ಸಂತೈಸುತ್ತಾ,

"ವಾಸೂ! ಅಪ್ಪ ಹೇಗಿದ್ದಾರೆ ಅನ್ನೋದು ಕೂಡ ಗೊತ್ತಿಲ್ದೆ ಇರೋ ನೀನು ಹೀಗೆ ಪ್ರಶ್ನಿಸಿದರೆ ಒಡನೆಯೇ ಏನು ಜವಾಬು ಹೇಳೂಂತಿ ನನ್ನನ್ನ?" ಎಂದಳು ಮಧುಮತಿ.

"ಒಂದು ವೇಳೆ.....ಹಾಗೆ ನಡೆದರೆ? ಅಪ್ಪ ನಿನ್ನನ್ನ ಕರೆದರೆ?"

ತಲೆ ಅಲ್ಲಾಡಿಸಿ, ಕಣ್ಣೊರಸಿಕೊಂಡು, ನಿಮ್ಮ ಅಪ್ಪ ಪೌರುಷವಿರೋ ಗಂಡಸು. ನಾನು ಅಹಂಭಾವಿಯಾದ ಹೆಂಗಸು. ಛಿದ್ರವಾಯ್ತು ನಮ್ಮ ಬದುಕುಗಳು" ಎಂದಳು ಮಧುಮತಿ.

"ಇಲ್ಲವಮ್ಮಾ!" ಸಹಿಸಲಾರದಂತೆ ಕೂಗಿದ ವಾಸು.

"ಏನಿಲ್ಲ! ನಿನಗೇನು ಗೊತ್ತು, ವಾಸೂ! ನಿಮ್ಮ ತಂದೇನ ನಾನು ಬಹಳ ನೋಯಿಸಿದ್ದೀನಿ. ನಾನೂಂದ್ರೆ ಅಸಹ್ಯ ನಿಮ್ಮ ತಂದೇಗೆ.....ನಿಜವಾಗಿಯೂ ಹಾಗೆ ನಡೆದರೆ ಅದಕ್ಕಿಂತ ಅದೃಷ್ಟ ಇನ್ನೇನಿದೆ? ಭಿಕ್ಷುಕ ಆಗಿರಲಿ, ಭಿಕಾರಿಯೇ ಆಗಿರಲಿ ಅವರ ಹಿಂದೆ ಹೋಗ್ತೀನಿ ಎಲ್ಲರೂ ಒಟ್ಟಿಗಿರೋಣ ಸರಿಯಾ?"

"ಅಮ್ಮಾ, ಅವರು ಭಿಕ್ಷುಕರೂ ಅಲ್ಲ, ಭಿಕಾರಿಯೂ ಅಲ್ಲ!" ಅವನ ಧ್ವನಿ ಸಂತೋಷದಿಂದ ರುದ್ಧವಾಯಿತು.

"ಹುಚ್ಚು ಹುಡುಗ! ಎಲ್ಲಿ ಅಪ್ಪ, ಏನು ಕಥೆ! ಈವತ್ತು ಅವರು ಎಷ್ಟು ಮಕ್ಕಳಿಗೆ ತಂದೇನೋ!"

"ಇಲ್ಲವಮ್ಮಾ!"

"ಏನಿಲ್ಲ ! ಇಪ್ಪತ್ತೈದು ವರ್ಷದ ಕೆಳಗೆ ನಿನ್ನನ್ನು ಬಿಟ್ಟು ಹೋದ ನಿಮ್ಮ ಅಪ್ಪ ಈಗ ಬಂದು ನನ್ನನ್ನು ಕರೀತಾರಾ ? ಛಿ !" ಎನ್ನುತ್ತಾ ಅವನ ತಲೆ ನೇವರಿಸಿ "ಮಲಕ್ಕೊ, ಹುಚ್ಚುಹುಚ್ಚು ಯೋಚನೆಗಳನ್ನು ಮಾಡಬೇಡ. ನಮಗಿಂತ ದುರದೃಷ್ಟವಂತರು ಈ ಪ್ರಪಂಚದಲ್ಲಿ ಬೇಕಾದಷ್ಟು ಜನ ಇದ್ದಾರೆ" ಎನ್ನುತ್ತಾ ನೀರು ತುಂಬಿದ್ದ ಕಣ್ಣುಗಳನ್ನೂ, ಬೆದರಿದ್ದ ಮುಖವನ್ನು ಸೆರಗಿನಲ್ಲಿ ಒರೆಸಿಕೊಂಡಳು.

"ನನಗೆ ಬಹಳ ಸಂತೋಷವಾಗಿದೆಯಮ್ಮ ! ನಿನ್ನನ್ನು ಹೇಗೆ ಅಭಿನಂದಿಸಬೇಕು. ನಿನಗೆ ಹೇಗೆ ನಮಸ್ಕರಿಸಬೇಕೋ!"

"ಅಯ್ಯೋ ಹುಡುಗ !" ವೇದಾಂತಿಯಂತೆ ನಕ್ಕು ಹೊರಟುಹೋದಳು ಮಧುಮತಿ.

ಅವಳನ್ನು ಕರೆದು, ಎಲ್ಲವನ್ನೂ ತಿಳಿಸಿಬಿಡಬೇಕೆಂದೂ ಆಗ್ರಹಪಡಿಸುತ್ತಿದ್ದ ಮನಸ್ಸನ್ನು ನಿಗ್ರಹಿಸಿಕೊಂಡು, ತೃಪ್ತಿಯಿಂದ ಹಾಯಾಗಿ ನಿದ್ರೆಹೋದ ವಾಸು. ಅವನ ತುಟಿಗಳ ಮೇಲೆ ಕಿರುನಗೆ ಲಾಸ್ಯವಾಡುತ್ತಿತ್ತು.

o o o o o

"ಏನ್ರೀ ಕಲೆಕ್ಟರ್ ಸಾಹೇಬರೇ ! ಗಂಟೆ ಎಂಟಾಯ್ತು. ಇನ್ನೂ ಕನಸು ಕಾಣ್ತಾ ನಗ್ತಾ ಇದ್ದೀರಿ. ಏನಪ್ಪಾ ಅಂಥ ಸುಂದರ ಕನಸುಗಳು !" ಎಂದು ರೇಗಿಸುತ್ತಾ ವಾಸು ಹೊದ್ದಿದ್ದ ದುಪ್ಪಟಿಯನ್ನು ಕಿತ್ತೆಸೆದಳು ಪದ್ಮಜ.

ಸೋಮಾರಿತನದಿಂದ ಮೈಮುರಿಯುತ್ತಾ, "ಈವತ್ತು ಹುಡುಗಿ ಕಡೆಯವರು ಬರ್ತಿದ್ದಾರಲ್ವಾ! ಬೆಳ್ಳು ಬೆಳಗೂ ಸುಂದರ ಕನಸುಗಳೇ ಮತ್ತೆ. ನನಗೆ ಹುಡುಗೀನ ತೋರಿಸೋದಕ್ಕೆ ಕರ್ಕೊಂಡು ಬರ್ತಾರೆ ಈವತ್ತು !" ಎಂದು ಹಾಸ್ಯ ಮಾಡುತ್ತಾ ಹೇಳಿದ ವಾಸು,

"ನೋಡಿದ್ದಾಯ್ತಲ್ಲಾ! ನೀವು ನನಗೆ ಹಿಡಿಸಿದ್ದೀರಿ. ನಿಮ್ಮ ಅಭಿಪ್ರಾಯವನ್ನು ಮಧ್ಯವರ್ತಿಯೊಂದಿಗೆ ಹೇಳಿ ಕಳುಹಿಸಿ !" ಎಂದಳು ಪದ್ಮಜ ಬ್ರಷ್ ಮೇಲೆ ಪೇಸ್ಟ್ ಹಾಕಿಕೊಟ್ಟು ತುಂಟನಗೆ ನಗುತ್ತಾ.

"ನನಗೆ ಹಿಡಿಸಲಿಲ್ಲ ಅಂತ ಹೇಗೆ ಹೇಳೋದು ಪದ್ಮಜ? ನಮ್ಮ ನಮ್ಮ ಮಾತು. ಅನುಭವ ಇರೋವ್ರು, ನನಗೆ ಹಿಡಿಸಲಿಲ್ಲ ಅಂತ ಹೇಗೆ ಹೇಳೋದು ?" ತುಂಟತನದಿಂದ ಅವಳ ಕಡೆ ನೋಡುತ್ತಾ ಕೇಳಿದ ವಾಸು.

"ನಾನಾದ್ರೆ ಆ ಹುಡುಗ ಹಿಡಿಸಲಿಲ್ಲ. ಆ ಸಂಬಂಧ ನಾನು ಮಾಡ್ಕೊಳ್ಳೋದಿಲ್ಲ ಅಂತ ಖಂಡಿತವಾಗಿ ಹೇಳ್ತೀನಿ. ಮತ್ತೆ ಕಲೆಕ್ಟರ್ ಇನ್ನು ಹೇಗೆ ಹೇಳ್ತಾರಪ್ಪ!'' ಕೆನ್ನೆಗೆ ಕೈಯಿಟ್ಟುಕೊಂಡು ವಯ್ಯಾರಿಯಂತೆ ನಿಂತು ಕಣ್ಣು ರೆಪ್ಪೆಗಳನ್ನು ಬಡಿಯುತ್ತಾ ಕೇಳಿದಳು ಪದ್ಮಜ.

"ಸ್ನೇಹಿತೆ ಎಸ್ಟೇಟ್ ನೋಡೋದಕ್ಕೆ ಓಡಿಹೋಗ್ತಾರೆ" ಎಂದ ವಾಸು ನಗುತ್ತಾ.

"ಅತ್ತೆ ಹೇಳಿದ್ರಾ!" ಬುದ್ಧ ಮೂರ್ತಿ ಮಾಡಿದಳು ಪದ್ಮಜ.

"ಊಹುಂ, ಅವತ್ತು ಬಂದಿದ್ದ ಹುಡುಗ ನನ್ನ ಸ್ನೇಹಿತಾನೇ!"

''ಎಲ್ಲಾ ಬರೀ ಸುಳ್ಳು!" ಪಕಪಕನೆ ನಕ್ಕು, "ಸುಮ್ನೆ ನನ್ನ ಪ್ರಾಣ ತೆಗೆದ್ರೆ ನಾನೇನ್ಮಾಡಬೇಕು?" ಎಂದಳು ಪದ್ಮಜ.

"ಈ ತರಹ ನೀನು ಅವರ ಪ್ರಾಣ ತೆಗೆದೇ, ನಿನ್ನ ಉದ್ದೇಶ ಏನು ಹೇಳಬಾರ್ದಾ?" ಎಂದ ವಾಸು ನಗುತ್ತಾ.

"ಹೇಗೆ ಹೇಳೋದು, ಏನೂಂತ ಹೇಳೋದು?" ಗೊಣಗಿದಂತೆ ಹೇಳಿದಳು ಪದ್ಮಜ.

ಹೆಣ್ಣನ್ನು ನೋಡಲು ಗಂಡಿನ ಕಡೆಯವರು ಬರುತ್ತಾರೆಂದರೆ ಒಂದೇ ಅಡಾವುಡಿ. ಮಧುಮತಿ, ಲಕ್ಷ್ಮಿ, ಪುರುಸೊತ್ತಿಲ್ಲದೆ ಓಡಾಡುತ್ತಿದ್ದರು.

"ನೀನಿನ್ನೂ ಹೀಗೇ ಇದ್ದೀಯಲ್ಲಾ, ಅವರು ಬಂದುಬಿಟ್ರು'' ಆಶ್ಚರ್ಯದಿಂದ ಪದ್ಮಜಳ ಕಡೆ ನೋಡುತ್ತಾ ಕೇಳಿದ ವಾಸು.

ಕೆದರಿದ ತಲೆ, ಮುದುರಾಗಿದ್ದ ಸೀರೆ, ಕಿಟಕಿಯ ಕಂಬಿಗಳ ಮೂಲಕ ಶೂನ್ಯವನ್ನು ನೋಡುತ್ತಾ ನಿಂತಿದ್ದ ಪದ್ಮಜ ತಿರುಗಿ ನೀರಸ ನಗೆ ನಗುತ್ತಾ, ''ಬರೋವ್ರು ಬರ್ಲಿ......ಅವರ ಎದುರಿಗೆ ನನ್ನನ್ನು ಕೂತ್ಕೋ ಅಂತಾರೆ. ಅವರಿಗಾಗಿ ಅಲಂಕಾರ ಮಾಡ್ಕೋ ಅಂತಾರೆ. ಹೆತ್ತು ಸಾಕಿದ್ದಕ್ಕೆ ಅವರ ಅಧಿಕಾರವನ್ನು ಹೀಗೆ ಚಲಾಯಿಸ್ತಾರೆ. ನಾನು ಹೇಳೋ ಮಾತು ಕೇಳೋದಿಲ್ಲ" ಎಂದಳು. ಅವಳ ಧ್ವನಿ ಗದ್ಗದಿತವಾಯಿತು.

"ಏನಂತ ಹೇಳ್ದೆ?"

"ಸಂಬಂಧಗಳನ್ನು ನೋಡಬೇಡಾಂತ."

''ಹಾಯಾಗಿ ಓದು."

"ಇನ್ನೇನೂ ಓದಬೇಕೂಂತ ಆಸೆ ಇಲ್ಲ."

''ಆದರೆ ಯಾವುದಾದರೂ ಕೆಲಸಕ್ಕೆ ಸೇರು."

ತಲೆ ಅಡ್ಡವಾಗಿ ಆಡಿಸಿದಳು ಪದ್ಮಜ.

"ಸರಿ, ಯಾವುದಾದರೂ ಹುಡುಗನ್ನ ಒಪ್ಪಿಕೊಂಡುಬಿಡು. ವಯಸ್ಸಿಗೆ ಬಂದ ಹುಡುಗಿ ಹೀಗೆ ಇಪ್ಪತ್ನಾಲ್ಕು ಗಂಟೆಯೂ ಕಣ್ಣೆದುರಿಗೆ ಓಡಾಡ್ತಾ ಇದ್ರೆ ಅವರು ಮದುವೆ ಪ್ರಯತ್ನ ಮಾಡದೆ ಇರೋದಿಲ್ಲ.''

''ನಾನು ಬೇಡ ಅನ್ನೋದು ಬಿಡೋದಿಲ್ಲ."

"ಚೆನ್ನಾಗಿದೆ......" ನಕ್ಕ ವಾಸು ಅವಳ ನೊಂಡು ಜವಾಬಿಗೆ.

ಅಷ್ಟರಲ್ಲಿ ಮಧುಮತಿ ಬರಲು ಪ್ರೀತಿಯಿಂದ ಗದರಿಸಿ ಜಡೆ ಹೆಣೆದು, ಸೀರೆ ಬದಲಾಯಿಸೆಂದು ಗದರಿಸಿದಳು.

ಎಲ್ಲರೊಂದಿಗೆ ತಾನೂ ಬಂದು ಹಾಲಿನಲ್ಲಿ ಕುಳಿತ ವಾಸು. "ಸೋದರಳಿಯ ಐ.ಎ.ಎಸ್. ಆಫೀಸರ್ ಆಗಿ ಸೆಲೆಕ್ಟ್ ಆಗಿದ್ದಾನೆ. ಡ್ಯೂಟಿಗೆ ರಿಪೋರ್ಟ್ ಮಾಡಿಕೊಳ್ಳಲು ನಾಳೆ ಹೊರಡ್ತಾನೆ" ಎನ್ನುತ್ತಾ ವಾಸುವಿನ ಪರಿಚಯ ಮಾಡಿಕೊಟ್ಟರು ಗೋಪಾಲರಾವ್ ಬಂದಿದ್ದವರಿಗೆ.

ಇವನಿಗೇ ಯಾಕೆ ಮಗಳನ್ನು ಕೊಡಬಾರ್ದು ಎಂದು ಮನಸ್ಸಿಗೆ ಬಂದ ಹಿರಿಯರೊಬ್ಬರು, ''ನಿಮ್ಮ ಅಣ್ಣನವರಿಗೂ ಮದುವೆಗೆ ಒಬ್ಬ ಮಗಳಿದ್ದಾಳಾ" ಎಂದು ಪ್ರಶ್ನಿಸಿದರು. ನಗುತ್ತಾ ಇದ್ದಾಳೆಂಬಂತೆ ತಲೆ ತೂಗಿದರು ಗೋಪಾಲ ರಾವ್.

ಯಾರನ್ನೂ ಕಣ್ಣೆತ್ತಿ ನೋಡದೇ ಇದ್ದ ಪದ್ಮಜಳ ಕಡೆ ಒಂದೆರಡು ಬಾರಿ ನೋಡಿದ ವಾಸು. ಅವರು ಹೊರಟುಹೋದೊಡನೆ ಯಾರೂ ಕೇಳ ದೆಯೇ ''ನನಗೆ ಹಿಡಿಸಲಿಲ್ಲ ಆ ಹುಡುಗ" ಎಂದು ತಾಯಿಯೊಂದಿಗೆ ಹೇಳಿ ತನ್ನ ಕೊಠಡಿಗೆ ಹೊರಟುಹೋಗುತ್ತಿದ್ದ ಪದ್ಮಜಳ ಹಿಂದೆಯೇ ಹೊರಟ ವಾಸು. "ನಾನೊಂದು ವಿಷಯ ಕೇಳ್ತೀನಿ, ನಿಜ ಹೇಳ್ತೀಯಾ, ಪದ್ಮಜ'' ಎಂದು ಕೇಳಿದ ಮೃದು ಸ್ವರದಲ್ಲಿ.

''ಏನದು?'' ಮಂದಹಾಸ ಬೀರುತ್ತಾ ಅವನ ಕಡೆ ನೋಡಿದಳು.

"ಇಷ್ಟಕ್ಕೆ ನೀನು ಆ ಹುಡುಗನ್ನ ನೋಡಿದೆಯಾ ?''

''ಇಲ್ಲಾ.''

''ಮತ್ತೆ ಯಾಕೆ ಹಿಡಿಸಲಿಲ್ಲ ಅಂತ ಹೇಳ್ದೆ.''

''ಅಷ್ಟೆ."

''ಅಂದ್ರೆ ?'' ಅರ್ಥವಾಗದಿದ್ದಂತೆ ಕೇಳಿದ ವಾಸು.

''ಅತ್ತೆಗೆ ನೀನೇನು ಜವಾಬು ಕೊಟ್ಟೆ?"

"ಯಾವುದಕ್ಕೆ? ಏನು ಕೇಳಿದ್ರು ಅತ್ತೆ ನನ್ನನ್ನ? ಅಂದ್ರೆ ನಮ್ಮಮ್ಮ?'' ಹೆದರಿಬಿಟ್ಟ ವಾಸು.

"ಏನೂ ಗೊತ್ತಿಲ್ಲದ ಹಾಗೆ ಮಾತಾಡ್ಬೇಡ. ನೀನು ಮಹಾ ಗಟ್ಟಿಗ......ನಿ."

"ಏನು ಪದ್ಮಜ ?" ಬೇಸರದಿಂದ ಕೇಳಿದ ವಾಸು.

"ನಿನ್ನ ಮದುವೆ ಯಾವಾಗ ?''

"ನನಗೇನು ಗೊತ್ತು ?''

"ಗೊತ್ತು......ಆದರೂ ಹೇಳೋದಿಲ್ಲ ಅತ್ತೆ ನೆನ್ನೆ ರಾತ್ರಿ ನಿನ್ನ ಕೊಠಡಿಗೆ ಬಂದಿದ್ರು. ದೊಡ್ಡಪ್ಪ ಬರೆದಿದ್ದ ಕಾಗದ ನಿನಗೆ ಕೊಟ್ರು. ಜಯನ ನೀನು ಪ್ರೀತಿಸ್ತಿದ್ದಿ ಅಲ್ವಾ?"

"ಪ್ರೀತಿಸೋದು ಅಂದ್ರೆ ? ನಮ್ಮ ಕುಟುಂಬದ ಎಲ್ಲ ಸದಸ್ಯರನ್ನೂ ಪ್ರೀತಿಸ್ತಿದ್ದೀನಿ.''

"ತಪ್ಪಿಸಿಕೊಳ್ಳೋದಕ್ಕೆ ನೋಡಬೇಡ. ಜಯ ಎಂದರೆ ನಿನಗೆ ಪ್ರತ್ಯೇಕವಾದ ಇಷ್ಟ. ಅವಳು ಚೆನ್ನಾಗಿ ಹಾಡ್ತಾಳೆ. ಅವಳ ಹಾಡನ್ನ ಬಹಳ ಸಲ ನನ್ನತ್ರ ಮೆಚ್ಚಿಕೊಂಡಿದ್ದಿ......ಆದರಿಂದ ಒಪ್ಕೊಂಡೇ ಇರ್ತಿ.''

''ಚೆನ್ನಾಗಿ ಹಾಡಿದ ಮಾತ್ರಕ್ಕೆ ಮನಸ್ಸು ಕೊಟ್ಬಿಡ್ತಾರಾ ? ಹಾಡನ್ನ ಮೆಚ್ಚಿಕೊಂಡ ಮಾತ್ರಕ್ಕೆ ಅವಳನ್ನ ಮದುವೆ ಮಾಡ್ಕೊಂಡುಬಿಡ್ತೀನಿ ಅಂದ್ಕೊಂಡ್ಯಾ ?'' ನಕ್ಕ ಹಸುಮಗುವಿನ ಮಾತುಗಳಿಗೆ ನಗುವಂತೆ.

''ಅವಳು ಚೆನ್ನಾಗಿದ್ದಾಳೆ ಅಂತೂ ಹೇಳ್ದೆ ?"

"ಚೆನ್ನಾಗಿದ್ದ ಮಾತ್ರಕ್ಕೆ ಮದುವೆ ಮಾಡ್ಕೊಂಡುಬಿಡ್ತಾರಾ ?"

ಆಶ್ಚರ್ಯದಿಂದ ಅವನ ಕಡೆ ನೋಡುತ್ತಾ, "ಸೌಂದರ್ಯ, ಹಾಡೂ ಇವೇನೂ ಅಗತ್ಯವಿಲ್ದೆ ಇನ್ನೇನು ಕಾಣಿಸುತ್ತೆ ? ಮನಸ್ಸಿನಲ್ಲಿನ ಭಾವನೆಗಳಾ ! ಅದನ್ನ ಓದ್ತಾರಾ ನೋಡೋ ಹತ್ತು ನಿಮಿಷಗಳಲ್ಲಿ ?"

''ಅಲ್ಲ ಪದ್ಮಜ, ಅಲ್ಲ. ಹೇಗೆ ಹೇಳಬೇಕೋ ನನಗೆ ಆ ಭಾಷೆ ಗೊತ್ತಾಗೋದಿಲ್ಲ. ಗಂಡ-ಹೆಂಡತಿ ಆಗಬೇಕಾದ್ರೆ ಸೌಂದರ್ಯ, ಓದು, ಸಂಪ್ರದಾಯ ಇವೆಲ್ಲ ನಮ್ಮ ಹಿರಿಯರೂ ನಾವೂ ಬಾಹ್ಯದಲ್ಲಿ ಅಂದ್ಕೊಳ್ಳೋದು.

ಆದರೆ ಪರಸ್ಪರ ಆಕರ್ಷಣೆ ಬೇಕು, ಇದುವರೆಗೂ ಯಾವ ಸ್ತ್ರೀಯೂ ನನ್ನನ್ನು ಆಕರ್ಷಿಸಿಲ್ಲ, ಜಯ ಹಾಡು ಮೆಚ್ಕೋತೀನಿ. ಸ್ವಲ್ಪ ದಿನಗಳ ಮೊದಲು ನಮ್ಮ ಫ್ರೆಂಡ್ ಜೊತೇಲಿ ಔತಣಕ್ಕೆ ಹೋಗಿದ್ದೆ. ಒಂದು ಸಲ ನೋಡಿದ್ರೆ ಹತ್ತು ಸಲ ನೋಡ್ಬೇಕು ಅನ್ನಿಸೋ ಹುಡುಗಿನ ನೋಡ್ದೆ. ಆದರೆ ನನ್ನ ಮನಸ್ಸೇನೂ ಚಲಿಸಲಿಲ್ಲ. ಇಷ್ಟಕ್ಕೆ ಮನಸ್ಸು ಚಲಿಸೋದು ಅಂದ್ರೆ ಏನೋ ನನಗೆ ಗೊತ್ತಿಲ್ಲ."

"ಆದ್ರೆ ನೀನು ಗಂಡಸಲ್ವೇನೋ" ನಾಲಿಗೆ ಕಚ್ಚಿ ನಕ್ಕಳು ಪದ್ಮಜ. ಅವಳ ಮಾತಿಗೆ ತಾನೂ ನಗುತ್ತಾ, "ನಿಜ ಪದ್ಮಜಾ. ನನ್ನ ತಲೆ ತುಂಬಾ ಭಾರ. ಮನಸ್ಸಿನ ತುಂಬಾ ಭಯ. ಇನ್ನೂ ಆ ಪ್ರೀತಿವರೆಗೂ ಹೋಗಿಲ್ಲ ನನ್ನ ಜೀವನ" ಎಂದ ವಾಸು.

"ಆದರೆ ನಿಮ್ಮ ತಾಯಿಗೆ ಏನಂತ ಹೇಳ್ದೆ ?''

''ಬೇರೆ ಸಂಬಂಧ ನೋಡಿ ಜಯಾಗೆ ಮದುವೆ ಮಾಡೂಂತ ಬರಿ ಅಂತ ಹೇಳ್ದೆ.''

ಹಿಡಿಸಲಾರದ ಸಂತೋಷದಿಂದ ಲೋಕವನ್ನೆಲ್ಲಾ ಗೆದ್ದ ವೀರನಂತೆ ಕಣ್ಣುಗಳು ಮೆರೆಯುತ್ತಿದ್ದರೆ ಅವನ ಕಡೆ ನೋಡುತ್ತಾ, ''ಬುದ್ಧಿವಂತ, ಸಿಕ್ಕಿ ಹಾಕ್ಕೊಂಡೆ. ವಿವಾಹ ಬಂಧನ ಒಪ್ಪಿಕೊಳ್ಳೋವಾಗ ಪರಸ್ಪರ ಆಕರ್ಷಣೆ ಇರೋ ದಾಂಪತ್ಯಸ್ವರ್ಗತುಲ್ಯ ಆಗುತ್ತೆ, ಒಪ್ಕೋತಿಯಾ?''ಎಂದಳು ಪದ್ಮಜ.

''ಎಸ್, ಹೌದು !''

"ನಾನು ಯಾವಾಗಲೋ ಯಾರಿಂದಲೋ ಯಾರ ಕಡೆಯೋ ಆಕರ್ಷಿತಳಾಗಿಬಿಟ್ಟಿದ್ದೀನಿ ಅಂತಿಟ್ಕೋ ! ಈಗ ಯಾರನ್ನಾದರೂ ತೋರಿಸಿ ಮದುವೆ ಮಾಡ್ಕೋ ಅಂದ್ರೆ ಹೇಗೆ ?"

''ಛೆ!ಛೆ! ಬುದ್ಧಿ ಹೀನ ಕೆಲಸ. ಹೀಗೆ ಅವರನ್ನ ಸತಾಯಿಸದೆ ಅವನು ಯಾರೂಂತ ಹೇಳಿಪ್ರಿ ಆಗೋದಿಲ್ವೆ?"

"ನನ್ನಿಂದ ಅವನು ಆಕರ್ಷಿಸಲ್ಪಡದೇ ಇದ್ದರೆ? ಅವನಿಗೆ ಆ ಉದ್ದೇಶವೇ ಇಲ್ದೇ ಇದ್ರೆ....."

"ಅಘೋರಿಸು''–ಬೇಸರದಿಂದ ಅಂದ ವಾಸು.

''ಅದೇ ಮಾಡ್ತಿದ್ದೀನಿ." ಗೊಣಗಿದಳು ಪದ್ಮಜ.

ಎರಡು ಕ್ಷಣಗಳ ನಂತರ ''ನಾಳೆ ನಾನು ಹೊರಟುಹೋಗ್ತೀನಿ ಪದ್ಮಜಾ! ಆಗಾಗ ನಮ್ಮ ಮನೆಗೆ ಬರ್ತಾ ಇರ್ತೀಯಾ ?" ಎಂದು ಕೇಳಿದ ಮಾತು ಬದಲಾಯಿಸುತ್ತಾ.

''ಚಿಕ್ಕ ಉಪಕಾರ ಮಾಡ್ಬಿಟ್ಟು ಹೋಗು....ನಾನು ... ನಾನು" ಒಡನೆಯೇ ಅವಳ ಧ್ವನಿ ದುಃಖದಿಂದ ಹೂತುಹೋಯಿತು.

''ಊಂ, ಏನ್ಮಾಡ್ಬೇಕು ಹೇಳು! ಅಷ್ಟು ತಮಾಷೆಯಾಗಿ, ಧೈರ್ಯದಿಂದ ಮಾತಾಡಿದವಳು ಪುನಃ ಸಾಧಾರಣ ಹೆಣ್ಣು ಹುಡುಗಿಯಂತೆ ಅಳುವೋರೆ ಮಾಡಿದೆಯಲ್ಲಾ......"

''ನನ್ನ ಮದುವೆ ಪ್ರಯತ್ನ ಬಿಟ್ಟುಬಿಡು ಅಂತ ನಮ್ಮ ತಂದೆಯವರಿಗೆ ತಿಳಿಸು ...''

''ನಾ ಬೇಡ ಅಂದ್ರೆ ಬಿಟ್ಬಿಡ್ತಾರಾ ?" ನಕ್ಕುಬಿಟ್ಟ ಅವಳ ಉದ್ದೇಶವೇನೋ ಗ್ರಹಿಸಲಾರದ ವಾಸು.

ಪುನಃ ಕೆಲವು ಕ್ಷಣಗಳ ನಿಶ್ಶಬ್ದದ ನಂತರ–"ಹೋಗ್ಲಿ ಎಷ್ಟು ದಿನ ಈ ಪ್ರಯತ್ನ ಮಾಡಬೇಡಾಂತ ಹೇಳಲಿ ?" ಎಂದು ಕೇಳಿದ ವಾಸು.

''ನಾನು ಪ್ರೀತಿಸ್ತಿರೋ ಜಡಪದಾರ್ಥಕ್ಕೆ ಚೈತನ್ಯ ಬರುವವರೆಗೂ" ತಲೆ ತಗ್ಗಿಸಿದಳು.

''ಅಂದರೆ'' ? ಕೊನೆಯಲ್ಲಿ ಆಶ್ಚರ್ಯ, ತಿಳಿದುಕೊಳ್ಳಬೇಕೆಂಬ ಕುತೂಹಲ. ಅವನ ಹುಬ್ಬುಗಳು ಗಂಟಿಕ್ಕಿದವು.

''ಅವನ ತಲೆಯ ಮೇಲಿನ ಭಾರ ಇಳಿದು, ಮನಸ್ಸನ್ನು ತುಂಬಿರುವ ಭಯ ಹೋಗಿ, ಮಾಮೂಲು ಮನುಷ್ಯನಾಗುವವರೆಗೂ."

ವಾಸು ದಿಗ್ಭ್ರಾಂತನಾದ ಕೆಲವು ಕ್ಷಣಗಳು. "ನೀನು ನನ್ನನ್ನು ಪ್ರೀತಿಸ್ತಿದ್ದೀಯಾ, ಪದ್ಮಜಾ? ನನ್ನಿಂದ ಆಕರ್ಷಿತಳಾಗಿದ್ದೀಯಾ? ಊಹುಂ..... ಹಾಗಾಗಬಾರದು. ನಾನೆಂದೂ ಹಾಗೆ ನೆನೆಸಲಿಲ್ಲ." ಕಳವಳದಿಂದ ತಡವರಿಸುತ್ತಿದ್ದ ಧ್ವನಿಯಲ್ಲಿ ಹೇಳಿದ ವಾಸು.

"ಹೋಗ್ಲಿ, ಆಗಬಾರದ್ದೇ ಆಗಿದೆ. ಆಗಿಹೋದದ್ದು ಇನ್ನಾವ ವಿಧದಲ್ಲೂ ಬದಲಾಯಿಸೋದಿಲ್ಲ....." ಅವಳ ಧ್ವನಿ ಒಂದು ವಿಧವಾದ ನಾಚಿಕೆಯಿಂದ ದುಃಖ ಕಟ್ಟಿಹೋಯಿತು.

ಅಲ್ಲಿಂದ ಇಲ್ಲಿಗೆ, ಇಲ್ಲಿಂದ ಅಲ್ಲಿಗೆ ಬೇಗ ಬೇಗ ಶತಪಥ ಹಾಕಿ, ಒಮ್ಮೆ ಅವಳ ಕಡೆ ನೋಡಿ ಪುನಃ ಕಿಟಕಿಯ ಕಂಬಗಳ ಮಧ್ಯದಿಂದ ಶೂನ್ಯವನ್ನು ನೋಡುತ್ತಾ, "ನನಗೇನೋ ಬಹಳ ಭಯವಾಗಿದೆ. ನಿನಗೆ ಜವಾಬು ಹೇಳೋ ಸ್ಥಿತೀಲಿಲ್ಲ......ನೀನು......ನೀನೂ ಸಹ ಆ ಉದ್ದೇಶದಿಂದ ನನ್ನ ಮೇಲೆ ಅಭಿಮಾನ ಬೆಳೆಸಿಕೊಂಡಿರಲಾರೆ. ಒಂದು ಸಲ ಒಂದು ಸಲ ಚೆನ್ನಾಗಿ ಯೋಚನೆ ಮಾಡಿ ತೀರ್ಮಾನ ಮಾಡ್ಕೋ, ನನ್ನನ್ನ ಯಾವ ರೀತಿ ಪ್ರೀತಿಸ್ತಿದ್ದೀಯೋ" ಎಂದ ವಾಸು.

"ಯಾವಾಗ್ಲೋ ತೀರ್ಮಾನ ಮಾಡಿಬಿಟ್ಟಿದ್ದೀನಿ.....ಇನ್ನು ಯೋಚನೆ, ಬೇರೆ ತೀರ್ಮಾನ ನನ್ನ ಜೀವನದಲ್ಲಿ ಸಾಧ್ಯವಿಲ್ಲ......ಹೋಗ್ಲಿ, ಜವಾಬು ಹೇಳು 'ನನಗೆ ಇಷ್ಟ ಇಲ್ಲ' ಅಂತ......ಅದಕ್ಕೋಸ್ಕರ ಭಯ–ಹೆದರಿಕೆ ಎಲ್ಲಾ ಯಾಕೆ?"

ತಲೆ ತಗ್ಗಿಸಿ ಹಾಗೆ ಮೌನವಾಗಿ ನಿಂತಿದ್ದ ವಾಸುವಿನ ಕಡೆ ನೋಡುತ್ತಾ "ಹೇಳೋದಕ್ಕೆ ನಿನ್ನಿಂದ ಸಾಧ್ಯವಿಲ್ಲ ಅಲ್ವಾ!.....ಹೆಣ್ಣು ಹುಡುಗಿ ನಾಚಿಕೆ ಬಿಟ್ಟು ನನ್ನನ್ನ ಮದುವೆ ಮಾಡ್ಕೋತೀಯೊ ಅಂತ ಕೇಳಿದ್ರೆ ಜವಾಬು ಹೇಳೋದು ಹೇಗೆ?" ಎನ್ನುತ್ತಾ ವಿಷಾದದಿಂದ ನಕ್ಕಳು.

ಒಮ್ಮೆ ಅವಳ ಕಡೆ ನೋಡಿ ಪುನಃ ತಲೆ ತಗ್ಗಿಸಿದ ವಾಸು. ಬಿರುಗಾಳಿಯಲ್ಲಿ ಸಿಕ್ಕಿಹಾಕಿಕೊಂಡ ಎಲೆಯಂತೆ ಅವನ ಮನಸ್ಸು ವಿಲವಿಲನೆ ಒದ್ದಾಡಿತ್ತು. "ಛೆ! ಇಷ್ಟಕ್ಕೆ ಇಲ್ಲಿಗೆ ಬರಲೇ ಬಾರದಾಗಿತ್ತು. ಹೋಗ್ಲಿ ; ಬಂದವನು ಇವಳೊಂದಿಗೆ ಅಧಿಕಪ್ರಸಂಗಕ್ಕೆ ಇಳಿಯದೇ ಹೋಗಿದ್ದಿದ್ದರೆ ಬೆಳಗಾಗೆದ್ದು ಹಾಯಾಗಿ ಊರಿಗೆ ಹೊರಟುಹೋಗ್ತಿದ್ದೆ" ನೆಲುಗಡೆ ಇಲ್ಲದೆ ಯೋಚನೆಗಳು. ಒಮ್ಮೆಗೇ ಸುಸ್ತಾದಂತೆ ಬತ್ತಿಹೋಯಿತು ವಾಸುವಿನ ಮುಖ.

ಟೇಬಲ್ ಕ್ಲಾತ್ ಸವರಿಸುತ್ತಾ, ವಾಸುವಿನ ಬರುವ ಜವಾಬಿಗಾಗಿ ತೀವ್ರವಾಗಿ ಹೃದಯ ಹೊಡೆದುಕೊಳ್ಳುತ್ತಿದ್ದರೆ ಕಾಯುತ್ತಾ ನಿಂತಿದ್ದಳು ಪದ್ಮಜ. ಸಂಜೆಗತ್ತಲು ಹರಡುತ್ತಿತ್ತು. ಆ ಕೊಠಡಿಯಲ್ಲಿ ಉಸಿರಾಡುತ್ತಿದ್ದ ಶಬ್ದದ ವಿನಾ ಬೇರಾವ ಶಬ್ದವೂ ಕೇಳಿಸುತ್ತಿರಲಿಲ್ಲ. ಆ ನಿಶ್ಶಬ್ದವನ್ನು ಭೇದಿಸುತ್ತಾ, "ವಾಸೂ, ನಿಮ್ಮ ಆಫೀಸಿನಲ್ಲಿ ಬಿ.ಎ. ಪಾಸಾದವರಿಗೆ ಗುಮಾಸ್ತೆ ಕೆಲಸ ಕೊಡಬಹುದಲ್ವಾ?" ಎಂದಳು ಪದ್ಮಜ. ಅವಳ ಧ್ವನಿಯಲ್ಲಿ ದುಗುಡವಿತ್ತು.

ತಲೆ ಎತ್ತಿ ಅವಳ ಕಡೆ ನೋಡಲಾಗದಿದ್ದ ವಾಸು, "ಸಾರಿ, ಪದ್ಮಜಾ! ನಿಮ್ಮ ಮನೇಲಿ ನಾನು ನಿನ್ನೊಂದಿಗೇನಾದರೂ ಅನುಚಿತವಾಗಿ ವರ್ತಿಸಿದ್ದರೆ ಕ್ಷಮಿಸು......ನಾನು......ನಾನು ನಿನಗೆ ಆ ರೀತಿ ಭಾವನೆ ಬರೋಹಾಗೆ ವರ್ತಿಸಲಿಲ್ಲವಲ್ಲಾ ! ಛೆ ! ನಿಮ್ಮ ಅಮ್ಮ, ನಿಮ್ಮ ಅಪ್ಪ ನಿನ್ನ ವಿಷಯದಲ್ಲಿ ಎಷ್ಟೋ ಆಸೆ ಇಟ್ಕೊಂಡಿದ್ದಾರೆ. ದೊಡ್ಡ ದೊಡ್ಡ ಸಂಬಂಧ ಹುಡುಕ್ತಿದ್ದಾರೆ. ನನ್ನಿಂದ ಅವರಿಗೆ ಆಶಾಭಂಗವಾಗೋದನ್ನ ನಾನು ಸಹಿಸಲಾರೆ. ಮನಸ್ಸು ಬದಲಾಯಿಸ್ಕೊ, ಇನ್ನು ಯಾರಿಗೂ ಹೇಳಬೇಡ'' ಎಂದು ಹೇಳಿ ಸರಸರ ಕೊಠಡಿಯಿಂದ ಹೊರಟುಹೋದ ವಾಸು.

ಕೈಯ್ಯಲ್ಲಿ ಮುಖ ಮುಚ್ಚಿಕೊಂಡಳು ಪದ್ಮಜ. ತಾನು ಕಟ್ಟಿಕೊಂಡಿದ್ದ ಚಿನ್ನದ ಮಾಳಿಗೆ ಕೂಲಿ ಹೋಯಿತು. "ಮನಸ್ಸು ಬದಲಾಯಿಸಿಕೋ, ಇನ್ನಾರಿಗೂ ಹೇಳಬೇಡ. ಚೆನ್ನಾಗಿ ಹೇಳಿದ.... ಛೆ ! ಛೆ ! ಪುನಃ ಅವನ ಮುಖ ನೋಡುವುದು ಹೇಗೆ ?'' ಅವಳ ಹೃದಯ ದಹಿಸಿ ಹೋಗುತ್ತಿತ್ತು, "ಹೆಣ್ಣು ಹುಡುಗಿಯ ಮನಸ್ಸಿನೊಂದಿಗೆ ಚೆಲ್ಲಾಟವಾಡಿದ. ಸ್ಕೂಟರ್ ಮೇಲೆ ಸುತ್ತಿಸಿದ. ಬಾಯಲ್ಲಿಟ್ಟರೆ ತಿಂಡಿ ತಿಂದ. ನನ್ನ ಎಂಜಲು ಹಾಲು ಕುಡಿದ. ನನ್ನನ್ನು ಬುದ್ಧಿ ಇಲ್ಲದವರ ಜೊತೆಗೆ ಸೇರಿಸಿದ'' ಕೋಪ, ದುಃಖ, ತೀವ್ರವಾದ ಸೋಲನ್ನು ಸಹಿಸಲಾದ ಪದ್ಮಜ ನಿಸ್ಸಹಾಯಳಾಗಿ ಕಣ್ಣುಗಳು ಊದುವಂತೆ ಅತ್ತಳು.

ಕೊಠಡಿಯಲ್ಲಿ ಸ್ವಿಚ್ ಹಾಕಿ, "ನಡಿ, ಊಟಕ್ಕೆ. ಇದು ಮಾಮೂಲೇ ತಾನೆ? ಬೇಡಾಂದ್ರೆ ಕುತ್ತಿಗೆಗೆ ಕಟ್ಟೋದಕ್ಕೆ ಸಾಧ್ಯವಿಲ್ಲವಲ್ಲಾ ?'' ಎಂದು ಗದರಿಸಿದಳು ಲಕ್ಷ್ಮಿ. ಮಗಳ ಬಾತಿದ್ದ ಮುಖ ನೋಡಿ ಕರಗಿಹೋದಳು. "ಛೆ ! ಛೆ ! ಯಾಕಮ್ಮ ಅಳ್ತಿದ್ದೀ ? ಅಪ್ಪ ಹಾಗಂತಾರೆ ಅಷ್ಟೆ. ನಿನಗಿಷ್ಟವಿಲ್ಲದಿದ್ರೆ ಗಂಟುಹಾಕ್ತಾರಾ ? ನಾ ಹೇಳ್ತೀನಿ.....ಬಾ, ಊಟ ಮಾಡು'' ಬೇಡುತ್ತಾ ಸಮಾಧಾನಪಡಿಸುವಂತೆ ತಲೆಸವರಿ ಆವಳ ಕಣ್ಣುಗಳನ್ನು ಸೀರೆಯ ಸೆರಗಿನಿಂದ ಒರೆಸಿದಳು ಲಕ್ಷ್ಮಿ.

"ನನಗೆ ಊಟ ಬೇಕಿಲ್ಲ'' ಎಂದು ಮೊಂಡುತನ ಮಾಡಿ ಕೊಠಡಿಯಲ್ಲಿ ಮಲಗಿದ್ದ ವಾಸುವಿಗೆ ಕೊಡಲೆಂದು ಹಾಲಿನ ಲೋಟವನ್ನು ತೆಗೆದುಕೊಂಡು ಹೋದಳು ಮಧುಮತಿ. ಅರ್ಧ ಹಾಲನ್ನು ಮತ್ತೊಂದು ಲೋಟಕ್ಕೆ ಬಗ್ಗಿಸಿ, ಇಷ್ಟು ಹಾಲು ನಾನು ಕುಡೀಲಾರೆ. ಪದ್ಮಜಾಗೆ ಕೊಟ್ಬಿಡು.''

ಎಂದ ವಾಸು. ಮಧುಮತಿ ಕೊಟ್ಟ ಹಾಲನ್ನು ತೃಪ್ತಿಯಿಂದ ಕುಡಿದಳು ಪದ್ಮಜ.

• • • •

ವಾಸುವಿನೊಂದಿಗೆ ಸ್ಟೇಷನ್‌ಗೆ ಶೀನು ಹೋದ. ತನ್ನೊಂದಿಗೆ ಬರುವಂತೆ ಶೀನುವನ್ನು ಕರೆದ ವಾಸು. ರಜೆಯಲ್ಲಿ ಖಂಡಿತವಾಗಿ ಬರುವುದಾಗಿ ಶೀನು ಹೇಳಿದ.

ತಾನು ಕೆಲಸಕ್ಕೆ ಸೇರಿದ ರಾತ್ರಿ ಮಧುಮತಿಗೆ ತಾನು ಕ್ಷೇಮವಾಗಿ ಊರು ಸೇರಿದಂತೆಯೂ, ಗೋಪಾಲರಾವ್‌ಗೆ ಪದ್ಮಜಾಗೆ ಸಂಬಂಧಗಳನ್ನು ನೋಡಿ ಮದುವೆ ಮಾಡಿಕೋ ಎಂದು ಒತ್ತಾಯಪಡಿಸಬೇಡವೆಂದೂ, ಪ್ರಸಾದ ರಾವ್‌ಗೆ, ತಾನು ಮಧುಮತಿಯೊಂದಿಗೆ ಮಾತನಾಡಿದ ಪ್ರತಿಯೊಂದು ಪದವನ್ನೂ ಬರೆಯುತ್ತಾ, "ಅಮ್ಮ ಸಮ್ಮತಿಸಿದ್ದಾರೆ. ಮತ್ತೆ ನೀವು ಯಾವಾಗ ಅಲ್ಲಿಗೆ ಹೋಗ್ತೀರಿ ಅನ್ನೋದನ್ನ ತಿಳಿಸಿದರೆ ನಾನು ಸಹ ಬರಲು ಪ್ರಯತ್ನಿಸುತ್ತೇನೆ'' ಎಂದೂ ಕಾಗದಗಳನ್ನು ಬರೆದ ವಾಸು.

ಪ್ರಸಾದರಾವ್‌ನಿಂದ ನಾಲ್ಕು ದಿನಗಳ ನಂತರ ಉತ್ತರ ಬಂತು. ನಿನ್ನ ಮದುವೆಗೆ ಹೇಗೂ ಎಲ್ಲರೂ ಸೇರ್ತಾರಲ್ಲ. ಆಗಲೇ ಒಮ್ಮೆ ಎಲ್ಲರೂ ನೋಡಿ, ನಿಮ್ಮ ಅಮ್ಮನಿಗೆ ನಮ್ಮ ಕಥೆ ಹೇಳಿ, ಆಗ ಅವಳು ನನ್ನನ್ನ ಹೇಗೆ ಅಪಾರ್ಥ ಮಾಡ್ಕೋತಾಳೋ ನೋಡೋಣ. ನಾನು ಎಲ್ಲರನ್ನೂ ಒಂದು ಸಲ ನೋಡಿ ನಮ್ಮೆಲ್ಲರೊಂದಿಗೆ ಬೆರೆತು ಹೋಗಬೇಕೆಂದರೆ ನೀನು ಒಂದು ತೀರ್ಮಾನಕ್ಕೆ ಬಾ. ಯಾರನ್ನಾದರೂ ಪ್ರೇಮಿಸಿದ್ದೀಯಾ?.....ಇಲ್ಲ ಗೋಪಿಗೆ ಕಾಗದ ಬರೀಲಾ ?'' ಎಂದಿತ್ತು ಕಾಗದದ ಸಾರಾಂಶ.

ಬಹಳ ಹೊತ್ತು ಆಲೋಚನೆ ಮಾಡಿ ಬೇಸರವಾದ ವಾಸು. ಇಷ್ಟ ಬಂದಾಗ ಮದುವೆ ಮಾಡ್ಕೊಳ್ಳೋದಕ್ಕೂ ಸಹ ನನಗೆ ಸ್ವಾತಂತ್ರ್ಯವಿಲ್ಲ. ಈಗಲೇ ತೀರ್ಮಾನ ಮಾಡಿಬಿಡಬೇಕಂತೆ ! ಎಂದುಕೊಂಡು ತನ್ನ ಮದುವೆಗಿಂತ ಅಮ್ಮ, ಅಪ್ಪ ಒಂದಾಗಬೇಕೆಂಬ ಆತುರವಿದ್ದ ವಾಸು "ಆದರೆ ಚಿಕ್ಕಮಾವನಿಗೆ ಕಾಗದ ಬರೀರಿ '' ಎಂದು ಜವಾಬು ಬರೆದ.

ಪ್ರಸಾದರಾವ್ ಕಾಗದ ಸರಸರನೆ ಓದಿದ ಗೋಪಾಲರಾವ್ ಹೆಂಡತಿಯನ್ನು ಕೂಗಿ, "ನೋಡಿದೆಯಾ ! ವಾಸು, ಪದ್ಮಜ ಯಾವಾಗೋ ಒಬ್ಬರ

ಗೊಬ್ಬರು ಮನಸ್ಸು ಕೊಟ್ಟಿದ್ದಾರೆ. ತಂದೆಗೆ ಬರೆದಿದ್ದಾನೆ'' ಎಂದರು. ಸಂತೋಷಾತಿಶಯದಿಂದ ಕಣ್ಣುಗಳು 'ಪ್ರಕಾಶಮಾನವಾಗಿರಲು, "ನನ್ನ ತಾಯಿ ಅದೃಷ್ಟವಂತೆ. ಎಷ್ಟು ಸಲ ಹೇಳಿದ್ರೂ ನನ್ನ ಮಾತು ಕೇಳಿದ್ರಾ ! ಅತ್ತಿಗೆಗೆ ಹೇಳ್ತೀರಾ ?'' ಎಂದಳು ಲಕ್ಷ್ಮಿ.

"ಅವಳ ಉದ್ದೇಶ ನನಗೆ ಮೊದಲೇ ಗೊತ್ತು. ಸಾಯಂಕಾಲ ಹೇಳೋಣ ಬಿಡು " ಎಂದರು ಗೋಪಾಲರಾವ್.

ಏಕಾಂತದಲ್ಲಿ ನಿಧಾನವಾಗಿ ಪದ್ಮಜಳನ್ನು ಕೇಳಿದಳು ಲಕ್ಷ್ಮಿ. "ವಾಸೂನ ಮಾಡ್ಕೋತೀಯಾ ?......ಅತ್ತೇನ ಕೇಳೋಣ" ಎಂದು.

ನಾಚಿಕೆಯಿಂದ ಎರಡು ಕ್ಷಣ ಮೌನವಹಿಸಿ, ನಂತರ–"ಅತ್ತೆ ಇಷ್ಟ ಪಟ್ಬಿಟ್ರೆ ಆಗ್ಹೋಯ್ತಾ?......ವಾಸು ?"......ಎನ್ನುತ್ತಾ ಲಕ್ಷ್ಮಿಯ ಕಡೆ ನೋಡಿ ದಳು ಪದ್ಮಜ.

"ಅವನ ಇಷ್ಟ ತಿಳಿದ ನಂತರವೇ ನಿನ್ನನ್ನ ಕೇಳ್ತಿರೋದು."

"ನಿಜವಾಗ಼್ೂ ?" ಒಡನೆಯೇ ಸರ್ವವನ್ನು ಮರೆತಂತೆ ಸಂತೋಷ ದಿಂದ ಕೇಳಿದಳು ಪದ್ಮಜ.

ತೃಪ್ತಿಯಿಂದ ನಗುತ್ತಾ, "ಹೌದಮ್ಮಾ !" ಎಂದಳು ಲಕ್ಷ್ಮಿ.

ರಾತ್ರಿ ಊಟವಾದ ನಂತರ ಮಧುಮತಿಯೊಂದಿಗೆ ಸಾವಧಾನವಾಗಿ ಅದೂ ಇದೂ ಮಾತನಾಡಿ, "ಅಲ್ಲಾ. ವಾಸೂಗೂ ಮದುವೆ ಮಾಡಿಬಿಟ್ರೆ ಚೆನ್ನಾಗಿರುತ್ತೇನೋ ?" ಎಂದರು ಗೋಪಾಲರಾವ್,

"ಅದೇ ನಾನೂ ಅಂದ್ಕೋತಾ ಇದ್ದೀನಿ" ಎಂದಳು ಮಧುಮತಿ.

ಅಣ್ಣನಿಗೇನು ಜವಾಬು ಬರೆದೆ? ವಾಸುವಿನ ಅಭಿಪ್ರಾಯ ಕೇಳಿದೆಯಾ?" ಆತುರವಿತ್ತು ಅವರ ಧ್ವನಿಯಲ್ಲಿ.

"ಜಯಾನ ಮಾಡ್ಕೊಳ್ಳಲಾರನೇನೋ ? ಬೇರೆ ಸಂಬಂಧ ನೋಡ್ಕೊಳ್ಳಿ ಅಂತ ಬರೀ ಅಂದ. "

"ಓ......ಏನೂ ತಿಳ್ಕೋಬೇಡ......ನಮ್ಮ ಪದ್ಮಜ......ನಿನ್ನ ಅಭಿಪ್ರಾಯ ವಾಸೂಗೆ ಪದ್ಮಜಾನ ಕೋಡೋಣಾಂತ ಅಂದ್ಕೋತಿದ್ದೀನಿ."

"ಇಷ್ಟು ದಿವಸ ಇಲ್ಲದೇ ಇದ್ದದ್ದು ಈಗ್ಯಾಕೆ ಆ ಉದ್ದೇಶ ಬಂತು ?" ನಿಷ್ಠುರವಾಗಿ ಅಂದು ನಗಲು ಪ್ರಯತ್ನಿಸಿದಳು ಮಧುಮತಿ.

"ನನಗೆ ಮೊದಲಿಂದ ಆ ಉದ್ದೇಶ ಇದೆ.... ಹೋಗ್ಲಿ ನೀನು ಯಾಕೆ ಕೇಳ ಬಾರದಾಗಿತ್ತು ವಾಸೂಗೆ ಕೊಡು ಅಂತ?.... ಎಂದಾದ್ರೂ ಆ ಮಾತು ನಿನ್ನ ಬಾಯಿಂದೆ ಬರುತ್ತೇನೋ ಅಂತ ಸಂಬಂಧಗಳನ್ನ ನೋಡ್ತಿದ್ದೆ.....ಆದರೆ...."

"ಅವಳು ನನ್ನ ಸೊಸೆ ಆಗ್ತಾಳೆ ಅಂದ್ರೆ ಅದಕ್ಕಿಂತ ಅದೃಷ್ಟ ಇನ್ನೇನಿದೆ ನನಗೆ ? ವಾಸೂಗೆ ಪತ್ರ ಬರಿ."

"ಅವನ ಅಭಿಪ್ರಾಯ ತಿಳ್ಕೊಂಡಿದ್ದೀನಿ ಅಕ್ಕಾ, ಅವನು ಒಪ್ಪಿದ್ದಾನೆ."

"ಆದರೆ ನಿನ್ನಿಷ್ಟ. ನನ್ನದೇನಿದೆ? ನಾನೇನು ಮಾಡಬಲ್ಲೆ !" ದುಃಖದಿಂದ ಗಂಟಲು ಹೂತುಹೋಯಿತು ಮಧುಮತಿಗೆ.

"ಛೆ ! ಛೆ ! ನೀನೇನ್ಮಾಡ್ಬೇಕು ? ಕಣ್ಣೀರು ಹಾಕ್ಬೇಡ. ನಾವೆಲ್ಲಾ ಇರೋವಾಗ ನಿನಗೇನು ಕಡಿಮೆ ಮಾಡ್ತೀವಿ !" ಎಂದರು ಗೋಪಾಲರಾವ್.

ಕ್ಯಾಂಪ್ ಹೋಗಿದ್ದ ವಾಸು ಟ್ರಾವೆಲರ್ಸ್ ಬಂಗಲೆಯಲ್ಲಿ ಕೂತು ಪೆಟ್ರೋ ಮ್ಯಾಕ್ಸ್ ಬೆಳಕಿನಲ್ಲಿ ಬಹಳ ಹೊತ್ತು ಕಾಗದ ಪತ್ರಗಳನ್ನು ಪರಿಶೀಲಿಸಿ, ಸೋಮಾರಿತನದಿಂದ ಮೈ ಮುರಿದು ವಾಚ್ ನೋಡಿಕೊಂಡ. ರಾತ್ರಿ ಹನ್ನೊಂದಾಗಿತ್ತು. ಗಂಟಲು ಒಣಗಿದಂತಾಗಿ ಹೂಜಿಯಲ್ಲಿದ್ದ ನೀರನ್ನು ಬಗ್ಗಿಸಿಕೊಳ್ಳುತ್ತಿದ್ದರೆ, ಪದ್ಮಜ, ಹಾಲಿನ ಗ್ಲಾಸು ನೆನಪಿಗೆ ಬಂತು. ಹಾಸಿಗೆಯ ಮೇಲೆ ಉರುಳಿದ ನಂತರ ಸಹ ಹಿಂದಿನ ಅನೇಕ ನೆನಪುಗಳು ನೆನಪಿಗೆ ಬಂದವು. ಅವನ ಊಹೆಯ ಸುತ್ತಾ, ಅವನ ಮನಸ್ಸಿನ ತುಂಬಾ, ಪದ್ಮಜಳ ರೂಪವೇ ಕಾಣುತ್ತಿತ್ತು. "ಛೆ! ಪಾಪ, ನಾನು ಹಾಗೆ ಹೇಳಿದೊಡನೆ ಎಷ್ಟು ಸಂಕಟ ಪಟ್ಟಳೋ ! ಯಾರೋ ಮುಖ ನೋಡಿರದ ಹೊಸ ಹುಡುಗಿಯನ್ನು ಮಾಡಿಕೊಳ್ಳುವ ಬದಲು ತನ್ನನ್ನು ಪ್ರೀತಿಸಿರುವ ಪದ್ಮಜಳನ್ನೇ ಮಾಡಿಕೊಂಡರೆ ಏಕಾಗಬಾರದು?" ಎಂದು ಕೊಂಡ ವಾಸು. ಅವಳ ಅಂದ, ಅಣಕ, ಅಭಿಮಾನ ಎಲ್ಲಾ ನೆನೆಸಿಕೊಂಡ. ಬಹಳ ಹೊತ್ತು ನಿದ್ರೆ ಬರದ ವಾಸು-ನಾಳೆ ತಂದೆಯವರಿಗೆ ಕಾಗದ ಬರೆದುಬಿಡ್ತೇನೆ. ಎಲ್ಲರನ್ನೂ ತೃಪ್ತಿಪಡಿಸೋದರಲ್ಲಿ ನಿಜವಾದ ತೃಪ್ತಿ ಇದೆಯೋನೊ ನನಗೆ" ಎಂದುಕೊಂಡ.

o o o o o

ರಿಜಿಸ್ಟರ್ಡ್ ಪಾರ್ಸಲ್ ಬಿಚ್ಚಿ ನೋಡಿದ ವಾಸು ಬಿಳಿಚಿಹೋದ—ತನ್ನ ಮದುವೆಯ ಕರೆಯೋಲೆ, ಒಂದನ್ನು ತೆಗೆದು ಓದಿದ, ನಗು, ಕೋಪ

ಎರಡೂ ಬಂದವು. ಅದರೊಂದಿಗೆ ಬಂದಿದ್ದ ಕವರನ್ನು ಬಿಚ್ಚಿ ಓದಿದ. ''ನಿನ್ನ ಅಭಿಪ್ರಾಯವನ್ನ ನಿನ್ನ ಅಪ್ಪ ಬರೆದಿದ್ದಾರೆ. ತಂದೆಯವರ ಕೈಲಿ ಕಾಗದ ಬರೆಸದೆ ನಿನ್ನ ಅಭಿಪ್ರಾಯವನ್ನು ನೇರವಾಗಿ ನನ್ನೊಂದಿಗೆ ಹೇಳಬಾರದಿತ್ತಾ? ನಾನೇನು ಬೇರೆಯವನಾ? ಸರಿ ಬಿಡು. ಈ ಮುಹೂರ್ತ ಬಿಟ್ಟರೆ ಎರಡು ತಿಂಗಳ ಕಾಲ ಲಗ್ನಗಳಿಲ್ಲವಂತೆ. ಎಲ್ಲಾ ಏರ್ಪಾಡುಗಳನ್ನೂ ನಾನು ನಿನ್ನ ದರ್ಜೆಗೆ ತಕ್ಕಂತೆಯೇ ಮಾಡುತ್ತೇನೆ. ಮುಂಚೆಯೇ ಬರುವಂತೆ ನಿಮ್ಮ ತಂದೆಯವರಿಗೆ ಬರೆಯುತ್ತೇನೆ. ನೀನೂ ಸಹ ಅವರಿಗೆ ಕಾಗದ ಬರಿ.'' ಇನ್ನೇನೂ ಬರಿಯಲು ಪುರುಸೊತ್ತಿಲ್ಲವೆಂಬಂತೆ ಬರೆದಿದ್ದರು ಗೋಪಾಲರಾವ್.

''ಅಪ್ಪನಿಗೇನಂತ ಬರೆದಿದ್ದೆ ? ಯಾವುದಾದರೂ ಸಂಬಂಧ ನೋಡಿ ಅಂತ ಚಿಕ್ಕ ಮಾವನಿಗೆ ಬರೆಯಿರಿ ಅಂತ ಸ್ಪಷ್ಟವಾಗಿ ಬರೆಯದೆ'' ಆದರೆ ಚಿಕ್ಕ ಮಾವನಿಗೆ ಬರೆಯಿರಿ. ಎಂದು ಬರದದ್ದನ್ನು ನೋಡಿ ಅಪ್ಪ ಇನ್ನೇನೋ ಊಹಿಸಿಕೊಂಡು ಸಂಭ್ರಮದಿಂದ ಬರೆದುಬಿಟ್ಟಿದ್ದಾರೆ! ಪದ್ಮಜಳಿಗೆ ಹಿಡಿಸಲಾರದಷ್ಟು ಸಂತೋಷವಾಗಿರುತ್ತೆ! ಇನ್ನೇನೂ ಪ್ರಯೋಜನವಿಲ್ಲ. ಇನ್ನು ತಪ್ಪಿಸಿಕೊಳ್ಳೋದಕ್ಕೆ ಸಾಧ್ಯವಿಲ್ಲ. ಪದ್ಮಜಾ, ನಿನ್ನ ಗುಂಡನೆಯ ಅಂದವಾದ ಹೊರೆಯುವ ಕಣ್ಣುಗಳಲ್ಲಿ ಎಷ್ಟು ಅದೃಷ್ಟವಿದೆ! ನೀನು ಕೋರಿದ ಗಂಡನನ್ನು ನಿನ್ನ ಕಾಲುಗಳ ಮುಂದೆ ಕಟ್ಟಿಹಾಕ್ತಿದ್ದಾನೆ ದೇವರು!'' ಎಂದುಕೊಂಡ ವಾಸುವಿನ ತುಟಿಗಳಲ್ಲಿ ಮಂದಹಾಸ ಮೂಡಿತು.

o • o • •

ಮದುವೆಗೆ ಭಾರಿ ಏರ್ಪಾಡುಗಳನ್ನು ಮಾಡುತ್ತಿದ್ದರು ಗೋಪಾಲರಾವ್. ಜಾನಕಮ್ಮ, ರಾಜಶೇಖರ್, ಅವರ ಹೆಂಡತಿ ಮಕ್ಕಳು ನಾಲ್ಕು ದಿನ ಮುಂಚೆಯೇ ಬಂದಿದ್ದರು. ಅಷ್ಟು ಗಲಾಟೆಯಲ್ಲಿ ನಿರಾಶಳಾಗಿಯೂ, ಉದಾಸೀನಳಾಗಿಯೂ ಇದ್ದಳು ಮಧುಮತಿ ಎಲ್ಲರೂ ಉಪೇಕ್ಷೆ ಮಾಡಿದ್ದ ಪ್ರಸಾದರಾವನ್ನು ಅವಳು ಉಪೇಕ್ಷಿಸಲಾರದೆ ಹೋದಳು.

ಸರಸರನೆ ಹೊರಗೆ ಹೋಗುತ್ತಿದ್ದ ಗೋಪಾಲರಾವ್ "ಗೋಪಿ" ಎಂದು ಮಧುಮತಿಯ ಧ್ವನಿ ಕೇಳಿ ಹಿಂತಿರುಗಿ "ಕರೆದೆಯಾ, ಅಕ್ಕಾ?" ಎಂದರು.

"ಒಂದು ಸಲ ಮಹಡಿ ಮೇಲೆ ಬಾ, ನಿನ್ನೊಂದಿಗೆ ಮಾತಾಡ್ಬೇಕು'' ಎಂದು ಹೇಳುತ್ತಾ ಮಹಡಿ ಹತ್ತಿದಳು. ಅನುಸರಿಸಿದರು ಗೋಪಾಲರಾವ್.

"ಬಾ, ಕೂತ್ಕೋ.....ವಾಸು ಏನಾದ್ರೂ ಕಾಗದ ಬರೆದಿದ್ದಾನಾ ?'' ಎಂದಳು ತಾನೊಂದು ಕುರ್ಚಿಯಲ್ಲಿ ಕೂತು ತಮ್ಮನ ಮುಂದಕ್ಕೆ ಒಂದು ಕುರ್ಚಿ ತಳ್ಳುತ್ತಾ.

"ಬುಧವಾರ ರಾತ್ರಿ ಬರ್ತ್ತೀನಿ ಅಂತ ಬರೆದಿದ್ದಾನೆ. ಅಂದ್ರೆ ನಾಳೆ ಮದುವೆ ಅಂದ್ರೆ ಈವತ್ತು ಬರ್ತಾನೆ. ಇದೋ" ಎನ್ನುತ್ತ ಒಂದು ಕವರನ್ನು ಮಧುಮತಿಗೆ ಕೊಡಲು ಹೋದರು ಗೋಪಾಲ್‌ರಾವ್.

''ಇರ್ಲಿ ಬಿಡು" ಎನ್ನುತ್ತಾ ಏನೋ ಯೋಚಿಸುತ್ತಾ ಮೌನವಹಿಸಿದ ಮಧುಮತಿಯ ಕಡೆ ನೋಡುತ್ತಾ ಎರಡು ಕ್ಷಣಗಳ ನಂತರ ಅಷ್ಟೇನಾ, ಅದಕ್ಕೆ ನಾ ಕರೆದೆ? ಎಂದರು ನಗುತ್ತಾ.

"ಅಲ್ಲ ಗೋಪಿ, ಅವನು ಐ.ಎ.ಎಸ್. ಆಫೀಸರ್. ಅವನ ಮದುವೆ ಅಂದ್ರೆ ದೊಡ್ಡ ದೊಡ್ಡವರೇ ಬರ್ತಾರೆ. ಎಲ್ಲರಿಗೂ ಅಪ್ಪ ಬಿಟ್ಟ ಅಮ್ಮನನ್ನು ಹೇಗೆ ತೋರಿಸ್ತಾನೆ? ಯಾವ ಮುಖ ಇಟ್ಕೊಂಡು ನಾಲ್ಕು ಜನರಲ್ಲಿ ಓಡಾಡ ಬೇಕು ನಾನು?" ಎನ್ನುತ್ತಾ ಬರುತ್ತಿದ್ದ ದುಃಖವನ್ನು, ಸುರಿಯುತ್ತಿದ್ದ ಕಣ್ಣೀ ರನ್ನು ಒರೆಸಿಕೊಳ್ಳುತ್ತಾ, "ನಿಮ್ಮ ಭಾವ ಎಲ್ಲಿದ್ದಾರೋ! ಒಂದು ಸಲ, ಆ ಒಂದು ದಿನ ಬಂದು ಮದುವೆಯ ಮಂಟಪದ ಬಳಿ ನಿಂತ್ಕೋ ಅಂತ ಹೇಳು. ಸೊಸೇನ ಮಗನನ್ನ ಆಶೀರ್ವದಿಸು ಅಂತ ಹೇಳು. ನನ್ನ ಮುಖ ನೋಡ ಕೂಡದು ಅಂತಿದ್ರೆ ನಾನೆಲ್ಲಾದ್ರೂ ಅವರ ಕಣ್ಣಿಗೆ ಬೀಳದಂತೆ ಇರ್ತೀನಿ" ಎಂದಳು. ಅವಳ ಧ್ವನಿ ನಡುಗುತ್ತಿತ್ತು. ಆ ಹೆಂಡತಿ ಮಕ್ಕಳನ್ನು ಒಂದು ದಿನ ಬಿಟ್ಟು, ಒಂದು ಸಲ, ಕೆಲವು ಕ್ಷಣಗಳು ನನ್ನ ಮಗನನ್ನ ತೃಪ್ತಿಪಡಿಸು ಅಂತ ಹೇಳು" ಎನ್ನುತ್ತಾ ತಲೆಯೆತ್ತಿ ಗೋಪಾಲರಾವ್ ಕಡೆ ನೋಡಿದ ಮಧು ಮತಿ, "ನಗ್ತಿದ್ದೀಯಾ?" ಎಂದಳು ಬಿಳಿಚಿಹೋಗಿ ಏನೂ ಅರ್ಥವಾಗದೆ.

"ಇನ್ನು ನಗದೆ ಏನ್ಮಾಡ್ಲೀ......? ಪಾಪ! ಅವರಿಗೆ ಬೇರೆ ಹೆಂಡತಿ ಮಕ್ಳೂ ಯಾರೂ ಇಲ್ಲ. ಅವರ ಅಡ್ರೆಸ್ ನನ್ನ ಹತ್ರ ಇದೆ. ಬಾ ಅಂತ ಬರೀತೀನಿ ಬಿಡು ಅಷ್ಟೇ ತಾನೆ" ಎನ್ನುತ್ತಾ ಎದ್ದು ನಿಂತುಕೊಂಡರು ಗೋಪಾಲರಾವ್.

"ಒಮ್ಮೆ ನೀನೇ ಹೋಗಿ ಕರ್ಕೊಂಡು ಬಾ ಗೋಪಿ, ಕಾಗದ ಬರೆದರೆ ಬರಲಾರರೇನೋ?" ತಾನೂ ಎದ್ದು ನಿಂತಳು ಮಧುಮತಿ.

"ಅವರು ಮದುವೆಗೆ ಬರೋದು ತಾನೇ ನಿನಗೆ ಬೇಕಾದದ್ದು?" ಎಂದು ನಕ್ಕು ಹೊರಟುಹೋದರು ಗೋಪಾಲರಾವ್.

"ಅವರ ಸಂತೋಷ ಅವರಿಗೆ. ನಾನು ಮನಸ್ಸು ನೊಂದು ಇಷ್ಟು ಸಂಕಟಪಡ್ತಿದ್ರೆ ನನ್ನ ಸಂಕಟವನ್ನೇ ಅರ್ಥ ಮಾಡಿಕೊಳ್ಳೋದಿಲ್ಲ!" ಗೊಣಗಿ ಕೊಂಡಳು ಮಧುಮತಿ.

° • • ° •

ಬೀದಿಯ ಗೇಟಿನ ಬಳಿ ಟ್ಯಾಕ್ಸಿ ನಿಂತಿತು. ಗೋಪಾಲರಾವ್ ಮತ್ತೊಬ್ಬ ಅಪರಿಚಿತ ಕಾರಿನಿಂದಿಳಿದು ಎಲ್ಲರ ಮುಂದೆ ಮಹಡಿ ಹತ್ತಿದರು. "ಯಾರೋ ಸ್ನೇಹಿತರಿರಬೇಕು" ಎಂದುಕೊಂಡರು ಅವರನ್ನು ನೋಡಿದ ಮಕ್ಕಳು.

ನಾಲ್ಕು ಕ್ಷಣ ಕಳೆದ ನಂತರ, "ಪದ್ಮಜಾ! ಕಾಫಿ, ತಿಂಡಿ ತಗೊಂಡ್ಬಾ" ಎಂದರು ಗೋಪಾಲರಾವ್, ಮಹಡಿ ಮೆಟ್ಟಲಿನ ಬಳಿ ನಿಂತು ಕೆಳಗೆ ನೋಡುತ್ತಾ. "ಒಂದು ಹೋಲ್ಡಾಲೂ, ಎರಡು ಪೆಟ್ಟಿಗೆಗಳು, ಅಬ್ಬಾ! ಮದುವೆಗೇ ಬಂದಂತಿದೆ. ರಿಕಾಣೆ ಜೋರಾಗಿ ಹಾಕೋ ಹಾಗಿದೆಯಲ್ಲಾ'' ಎಂದು ಕೀಟಲೆ ಮಾಡುತ್ತಾ ಪದ್ಮಜಳ ಬೆನ್ನು ಸವರುತ್ತಿದ್ದ ಜಯು, ಗೋಪಾಲರಾವ್ ಧ್ವನಿ ಕೇಳಿ ತಲೆ ಎತ್ತಿ ಮೇಲೆ ನೋಡಿ ನಾಲಿಗೆ ಕಚ್ಚಿಕೊಂಡಳು.

ಮುಖ, ಕೈ ಕಾಲುಗಳನ್ನು ತೊಳೆದುಕೊಂಡು ಬಂದ ಪ್ರಸಾದರಾವ್ ಕೈಗೆ ಟವಲ್ ಕೊಡುತ್ತಾ, ಆಗತಾನೆ ಕೊಠಡಿಗೆ ಪ್ರವೇಶಿಸಿದ ಪದ್ಮಜಳನ್ನು ನೋಡಿ "ಅಲ್ಲಿ ಟೇಬಲ್ ಮೇಲಿಡು. ಇದೋ ನನ್ನ ಮಗಳು .. ಬಿ.ಎ. ಮದುವೆ ಹೆಣ್ಣು" ಎಂದು ಹೇಳಿ, ''ಅವನ ಕಾಲಿಗೆ ನಮಸ್ಕಾರ ಮಾಡಮ್ಮಾ" ಎಂದರು ಗೋಪಾಲರಾವ್.

ಬಗ್ಗಿ ವಿನಯದಿಂದ ಅವರ ಪಾದ ಸ್ಪರ್ಶಿಸಿದ ಪದ್ಮಜಳನ್ನು ತಡೆಯುತ್ತಾ "ಬೇಡ ಬಿಡಮ್ಮಾ!" ಎಂದರು ಪ್ರಸಾದರಾವ್.

ಕಾಫಿ ಮಾತ್ರವೇತೆಗೆದುಕೊಂಡು ತಿಂಡಿ ಬೇಡವೆಂದರು ಪ್ರಸಾದರಾವ್. ತಿಂಡಿ ತಟ್ಟೆಯನ್ನು ತೆಗೆದುಕೊಂಡು ಹೊರಗೆ ಹೋಗುತ್ತಿದ್ದ ಪದ್ಮಜಳ ಕಿವಿಯಲ್ಲಿ ಮೆಲ್ಲಗೆ ಏನನ್ನೋ ಹೇಳಿದರು ಪ್ರಸಾದರಾವ್. ಅವಳು ಸರಿ ಎಂಬಂತೆ ತಲೆ ತೂಗಿದಳು.

"ವಾಸು ರಾತ್ರಿ ಬರ್ತಾನಾ?" ಕೇಳಿದರು ಪ್ರಸಾದರಾವ್.

"ಊಂ-ಸಂಜೆ ರೈಲಿಗೆ ಬರ್ತಾನಂತೆ.....ನಾನು, ವಾಸು ಅಕ್ಕನ ಎದುರಿಗೆ ದೋಷಿಗಳಾಗಿ ನಿಲ್ಲುವಂತಾಗಿದೆ..... ಏನು ಹೇಳ್ತೀರೋ......ಹೇಗೆ ಹೇಳ್ತೀರೋ ಮತ್ತೆ ! ಅಕ್ಕ ಬರ್ತಿದ್ದಾಳೆ!" ಎನ್ನುತ್ತಾ ಎದ್ದುನಿಂತರು ಗೋಪಾಲರಾವ್.

ಒಂದು ಸಲ ಪ್ರಸಾದರಾವ್ ಹೃದಯ ತೀವ್ರವಾಗಿ ಬಡಿದುಕೊಂಡಿತು. ಇಪ್ಪತ್ತು ವರ್ಷಗಳ ಕೆಳಗೆ ಬಸ್ಸಿನಲ್ಲಿ ನೋಡಿದ್ದ ಹೆಂಡತಿಯನ್ನು ಪುನಃ ಈಗ ನೋಡಬೇಕಾದ ಸಂದರ್ಭ, ಹೊರಟುಹೋಗುತ್ತಿದ್ದ ಗೋಪಾಲರಾವ್ ಕಡೆ ನೋಡುತ್ತಾ ಮೌನವಾಗಿದ್ದುಬಿಟ್ಟರು.

ಕೊಠಡಿಯ ಹೊಸಿಲು ದಾಟಿ ವರಾಂಡಾಗೆ ಬಂದ ಗೋಪಾಲರಾವ್‌ಗೆ ಎದುರಾದ ಮಧುಮತಿ " ಯಾಕೆ ಕರೆದೆಯಂತೆ ?" ಎಂದು ಕೇಳಿದಳು.

ಕೆದರಿದ ಕೂದಲು, ಸುಸ್ತಾಗಿ ಬೆವರು ಸುರಿಯುತ್ತಿದ್ದ ಮುಖ. ಒಂದು ಸಲ ಅವಳ ಕಡೆ ಕರುಣೆಯಿಂದ ನೋಡಿ ಸಮಾಧಾನದ ನಿಟ್ಟುಸಿರು ಬಿಟ್ಟು, "ಅದೋ, ಭಾವ ಬಂದಿದ್ದಾರೆ. ಕೊಠಡೀಲಿದ್ದಾರೆ. ಒಂದು ಸಲ ಹೋಗಿ ನೋಡು ಇಲ್ಲಿಗೆ ಯಾರೂ ಬರೋದಿಲ್ಲ." ಎನ್ನುತ್ತಾ ಸರಸರನೆ ಹೊರಟು ಹೋದರು ಗೋಪಾಲರಾವ್.

ದೀರ್ಘವಿಯೋಗದ ನಂತರ ಕಲೆಯುವಿಕೆ. ದಡದಡ ಹೊಡೆದುಕೊಳ್ಳುವ ಹೃದಯ, ನಡುಗುತ್ತಿರುವ ದೇಹ, ಕಳಕಳಗೊಂಡ ಮನಸ್ಸು, ಮುಂದೆಯೂ ಹೋಗಲಾಗದೆ, ಹಿಂದೆಯೂ ಹೋಗಲಾಗದೆ ನಡುಗುತ್ತಿರುವ ಕಾಲುಗಳು. ಕೆಲವು ಕ್ಷಣಗಳಲ್ಲಿ ತನ್ನನ್ನು ತಾನು ನಿಗ್ರಹಿಸಿಕೊಂಡ ಮಧುಮತಿ, "ಹೋಗಲಿ, ಹೇಗಿದ್ದಾರೋ ಒಮ್ಮೆ ನೋಡುತ್ತೇನೆ. ಮಾತನಾಡಲಿ, ಬಿಡಲಿ, ನನ್ನ ಕಡೆ ನೋಡಲಿ, ಮುಖ ತಿರುಗಿಸಿಕೊಳ್ಳಲಿ, ತಾಳಿ ಕಟ್ಟಿಸಿಕೊಂಡುದಕ್ಕೆ, ಸತ್ಪುತ್ರನನ್ನು ಪಡೆದುದಕ್ಕೆ, ಅವರ ಪತ್ನಿ ಹೀಗೆ ಜೀವಿಸುತ್ತಿರುವುದಕ್ಕೆ, ಅವರನ್ನು ಒಮ್ಮೆ ನೋಡುವ ಹಕ್ಕು ನನಗಿದೆ" ಎಂದುಕೊಂಡಳು. ಭಾರವಾದ ಹೆಜ್ಜೆಗಳನ್ನು ತಡವರಿಸಿ ಇಡುತ್ತಾ ಅವಳ ಕಾಲುಗಳು ಕೊಠಡಿಯ ಕಡೆ ನಡೆದವು.

ಬಾಗಿಲ ಬಳಿ ನಿಂತು ನಿಧಾನವಾಗಿ ತಲೆ ಎತ್ತಿ ನೋಡಿದಳು. ತಾನು ಊಹಿಸುತ್ತಿದ್ದ ತನ್ನ ಗಂಡ ಧೂಳಿ ಧೂಸರಿತವಾಗಿ, ಸಣ್ಣಗೆ. ಕೆದರಿದ ತಲೆ, ಗುಳಿಬಿದ್ದು ಕೆಂಪಾದ ಕಣ್ಣುಗಳು, ಬತ್ತಿಹೋದ ಕೆನ್ನೆಗಳು ಉಳ್ಳ ಐವತ್ತೈದು ವರ್ಷದ ವ್ಯಕ್ತಿಯ ಸ್ಥಾನದಲ್ಲಿ ಬೆಲೆ ಬಾಳುವ ಸೂಟಿನಲ್ಲಿ, ದೃಢವಾದ ದೇಹ

ಸೌಷ್ಟವದಿಂದ, ಒಳ್ಳೆಯ ರಿಟೈರ್ಡ್ ಆಫೀಸರಂತೆ, ಅನುಭವದಿಂದ ಪಡೆದ ಪೂರ್ಣ ವ್ಯಕ್ತಿತ್ವದೊಂದಿಗೆ, ಕಾಂತಿಯುತವಾದ ಕಣ್ಣುಗಳಿಂದ ತನ್ನ ಕಡೆ ನೋಡುತ್ತಿರುವ ತನ್ನ ಗಂಡ, ಒಡನೆಯೇ ಅವಳ ಕಣ್ಣು ರೆಪ್ಪೆಗಳು ಕೆಂಪಾದವು ಕೆಳಗಾದವು.

ಎಷ್ಟೋ ದಿನಗಳ ಕೆಳಗೆ ಮರೆತುಹೋಗಿದ್ದ ಮಮತೆಯಲ್ಲಿನ ನಾಚಿಕೆ, ಮನಸ್ಸಿನಲ್ಲಿ ಯಾವುದೋ ಮಧುರವಾದ ಭಾವನೆ,ಎಲ್ಲವನ್ನೂ ತುಳಿದು ಉಕ್ಕುತ್ತಿರುವ ದುಃಖ, ಮೌನವಾಗಿ ಸ್ಥಾಣುವಿನಂತೆ ನಿಂತಿದ್ದ ಅವಳ ಕಡೆ ಪಶ್ಚಾತ್ತಾಪ ಹೃದಯದಿಂದ, ಕರುಣೆಯಿಂದ ನೋಡುತ್ತಾ, ಇವಳನ್ನೇನಾ ನಾನು ಅಹಂಭಾವಿಯೆಂದೂ, ಗರ್ವಿಷ್ಠೆಯೆಂದೂ ವಿವೇಕಶೂನ್ಯವಾಗಿ ಊಹಿಸುತ್ತಾ ಬಂದದ್ದು ! ಎಂದುಕೊಳ್ಳುತ್ತಾ ಅವಳನ್ನು ನೋಡುತ್ತಿದ್ದ ಅವರ ಹೃದಯ ಕರಗಿ ನೀರಾಯಿತು. ಮಮತೆಯನ್ನು ಮುಚ್ಚಿದ್ದ ಮೇಲಿನ ಮಂಜು ಕರಗಿ ಹೋಯಿತು. ಮನಸ್ಸಿನಲ್ಲಿದ್ದ ಅನುಮಾನಗಳಿಗಾಗಿ ತನ್ನನ್ನು ತಾನೇ ಅಸಹ್ಯಪಟ್ಟುಕೊಂಡು, ಕರುಣೆಯಿಂದ, ಸಂಕಟದಿಂದ ಅವಳ ಕಡೆ ನೋಡುತ್ತಾ, ಇಪ್ಪತ್ತೈದು ವರ್ಷಗಳ ನಂತರ ಉಕ್ಕುತ್ತಿರುವ ಹೃದಯದಿಂದ, ಪ್ರವಹಿಸುತ್ತಿರುವ ಮಮತೆಯಿಂದ "ಮಧೂ !" ಎಂದು ಕರೆದರು ಪ್ರಸಾದರಾವ್.

ನೀರು ತುಂಬಿದ ಕಣ್ಣುಗಳಿಂದ ಅವರ ಕಣ್ಣುಗಳನ್ನು ದಿಟ್ಟಿಸಿದಳು ಮಧುಮತಿ.

ಅವರ ಕಾಲುಗಳು ಅವಳೆಡೆಗೆ ನಡೆಯಿತು. "ಮಧೂ" ಆ ಧ್ವನಿ ಮೃದುವಾಯಿತು. ಅಪ್ರಯತ್ನವಾಗಿ ಕೈಗಳನ್ನು ಚಾಚಿದರು ಪ್ರಸಾದರಾವ್.

ಅಪೂರ್ವವಾದ ಅಭಯವನ್ನು ಹೊಂದುತ್ತಿರುವಂತೆ ಅವರ ಕೈಗಳಲ್ಲಿ ವಾಲಿ ಹೋದಳು ಮಧುಮತಿ. ಆ ಸ್ಪರ್ಶಕ್ಕಾಗಿ ತಪಿಸುತ್ತಿದ್ದ ಅವಳು ಅವರ ಕೈಗಳಲ್ಲಿ ಸೇರಿ ಹೃದಯದಲ್ಲಿ ತಲೆ ಮರೆಸಿಕೊಂಡಳು.

ಅವಳನ್ನು ಸುತ್ತುವರೆದಿದ್ದ ಅವರ ಕೈಗಳು ಮೃದುವಾಗಿ, ಪ್ರೀತಿಯಿಂದ ಸಮಾಧಾನಪಡಿಸುವ ಸಲುವಾಗಿ ಅವಳ ತಲೆ ನೇವರಿಸಿದವು. ಅವಳ ಹೃದಯದಲ್ಲಿ ಜ್ವಾಲಾಮುಖಿಯಂತೆ ಮುಚ್ಚಿದ್ದ ವೇದನೆ ಅಶ್ರುರೂಪದಲ್ಲಿ ಪ್ರವಹಿಸಲು ಪ್ರಾರಂಭವಾಯಿತು.

ಇಬ್ಬರ ಮಧ್ಯೆ ಭರಿಸಲಾರದ ಮೌನ ತಾಂಡವವಾಡಿತು. ಕೆಲವು ಕ್ಷಣಗಳು, "ನನ್ನನ್ನು ಕ್ಷಮಿಸಿ......ಪುನಃ ನನ್ನನ್ನು ಬಿಟ್ಟು ಹೊರಟು ಹೋಗಿ

ಬಿಡಬೇಡಿ. ದಿನ ಕಳೆಹುಹೋಗಿದೆ. ಇನ್ನು ಬಹಳ ದಿನ ನಾನು ಜೀವಿಸಿರುವುದಿಲ್ಲ. ನನ್ನ ದೇಹಸ್ಥಿತಿ ಸರಿಯಾಗಿಲ್ಲ. ವಾಸುವಿನ ಯೋಚನೆ ನನಗಿಲ್ಲ, ಕೊನೆಗಾಲದಲ್ಲಾದರೂ ನಿಮ್ಮೊಂದಿಗೇ ಜೀವಿಸುವ ಭಾಗ್ಯ ಪ್ರಸಾದಿಸಿ....."

"ಮಧೂ ! ಏನೀ ಹುಚ್ಚು ? ಎಲ್ಲಿ ನನ್ನ ಕಡೆ ನೋಡು, ಪುನಃ ಅಳಬೇಡ." ಅವಳ ಕಣ್ಣುಗಳನ್ನು ಕರವಸ್ತ್ರದಿಂದ ಒರೆಸಿ ಅವಳ ಮುಖವನ್ನು ಮೇಲೆತ್ತಿ ನೋಡುತ್ತಾ ಹೇಳಿದರು ಪ್ರಸಾದರಾವ್, ಕೆನ್ನೆಗಳ ಮೇಲೆ ಮುತ್ತುಗಳಂತೆ, ಕಣ್ಣೀರು ಜಾರುತ್ತಿರಲು.

"ನನ್ನನ್ನ ಕ್ಷಮಿಸಬಲ್ಲಿರಾ?" ಎಂದ ಮಧುಮತಿ ಮಾತಿಗೆ ಅಡ್ಡ ಬಂದು,

"ನೀನು ನನ್ನನ್ನು ಕ್ಷಮಿಸಬೇಕು ಮಧೂ" ಎಂದರು ಪ್ರಸಾದರಾವ್.

"ನಾನು ಕ್ಷಮಿಸೋದಾ ?" ಎನ್ನುತ್ತಾ ವಿಷಾದದಿಂದ ನಕ್ಕು, ಸತ್ತು ಹೋಗಿರೊ ಹಾವನ್ನ ಪುನಃ ಹೊಡೀಬೇಡಿ" ಎಂದಳು ಮಧುಮತಿ.

"ನಿನಗೆ ಗೊತ್ತಿಲ್ಲದ ಒಂದು ರಹಸ್ಯ ಇದೆ. ಮಧೂ ! ಬಾ ಇಲ್ಲಿ ಕೂತ್ಕೋ. ಸ್ಥಿಮಿತವಾಗಿ ಕೇಳು. ಕಳವಳಪಡಬೇಡ ...... ನಾ ಹೇಳೋದನ್ನೆಲ್ಲಾ ನಿಧಾನವಾಗಿ ಕೇಳು."

"ರಹಸ್ಯವಾ ? ಏನದು ?" ಆತುರದಿಂದ ಕೇಳಿದಳು.

"ಹೌದು, ಎಂದಾದರೂ ನಾನು, ನೀನೂ ಕಲೆತರೆ. ಒಬ್ಬರನ್ನೊಬ್ಬರು ನೋಡಬೇಕೆಂಬ ಆತುರದಿಂದ, ಒಂದು ಸಲ ಕಲೆತು ಮಾತನಾಡಬೇಕೆಂಬ ಆಸೆಯಿಂದ, ಪಶ್ಚಾತ್ತಾಪ ಹೃದಯಗಳಿಂದ ಸಹಜವಾಗಿ ನಮ್ಮ ಮಧ್ಯೆ ಇರುವ ಮಮತೆ ಪುನಃ ಚಿಗುರಿಸಿ, ಒಬ್ಬರಿಗೊಬ್ಬರು ಬೇಕೆಂದುಕೊಂಡು, ನಿರ್ಮಲವಾದ ಮನಸ್ಸಿನಿಂದ, ಕೊನೆಯ ಗಳಿಗೆಯಲ್ಲಾದರೂ ಹಾಗೆ ಕಲೆತರೆ, ಅದು ಜೀವನದಲ್ಲಿ ಸಾಕು. ಮಧು ! ಇಂತಹ ಕ್ಷಣಕ್ಕಾಗಿಯೇ ನಿರೀಕ್ಷಿಸುತ್ತಿರುವ ನಿನ್ನ ನನ್ನ ಮಧ್ಯೆ ಅಡ್ಡ ಗೋಡೆಯನ್ನಬ್ಬಿಸಿದೆ, ಎಂದು ಹೇಳಿ, ಒಂದು ಸಲ ಅವಳ ಕಡೆ ನೋಡಿ ವಾಸು ತನ್ನ ಹತ್ತಿರಕ್ಕೆ ಬಂದಂದಿನಿಂದ ಇಂದಿನವರೆಗೂ ನಡೆದದ್ದೆಲ್ಲವನ್ನೂ. ಒಮ್ಮೆ ಅವಳ ಕಡೆ, ಒಮ್ಮೆ ಶೂನ್ಯವನ್ನು ನೋಡುತ್ತಾ ಪಾಠ ಒಪ್ಪಿಸಿದಂತೆ ಹೇಳಿ, "ನಿನಗೆ ಹೇಳದೆ ಇದ್ದುದಕ್ಕೆ ಅಪಾರ್ಥಮಾಡಿಕೊಳ್ಳಬೇಡ, ನಾನು ಕಾಣುವ ಕೋನದಿಂದ ಎಂದಾದರೂ ನೀನು ಹೀಗೆಯೇ ವರ್ತಿಸುತ್ತೀ. ಆದರೆ, ನನ್ನ ಮನಸ್ಸು ಇನ್ನೊಂದು ಕ್ಷಣದಲ್ಲಿ ಊಹಿಸಬಹುದು ನಾನು ಧನವಂತನಾದೆನೆಂದೂ, ಮಗನಿಗೆ ಓದು ಹೇಳಿಸಿದೆನೆಂದೂ ನೀನೂ

ನನ್ನ ಸನ್ನಿಹಕ್ಕೆ ಬಂದೆ ಎಂದು ತಿಳಿಯಬಹುದಲ್ಲಾ, ಹಾಗಾದಾಗ ನನ್ನ ಕೈಗಳು ನಿನ್ನನ್ನು ಪ್ರೀತಿಯಿಂದ ಸೇರಲಾರವು. ಸ್ವಚ್ಛವಾದ ಹೃದಯದಿಂದ ನಿನ್ನೊಡನೆ ಕಲೆತು ಬದುಕಲಾಗೆ ಆದರಿಂದ ಗೋಪಾಲನಿಗೂ ವಾಸೂವಿಗೂ ಹೇಳ ಕೂಡದೆಂದು ಕಠಿಣವಾಗಿ ಆಜ್ಞಾಪಿಸಿದೆ, ಪಾಪ! ಅವನು ಎಷ್ಟು ಸೇ ಅತ್ತ! ನನಗೆ ಎದುರುಬಿದ್ದ! ಒಂದು ವಿಧದಲ್ಲಿ ನಿನ್ನ ಪರವಾಗಿ ಯುದ್ಧವನ್ನೇ ಮಾಡಿದ." ಎಂದರು ನಗುತ್ತಾ ಹಿಂದೆ ನಡೆದದ್ದು ನೆನಪಿಗೆ ಬಂದ ಪ್ರಸಾದರಾವ್.

ಉದಾಸೀನಳಾಗಿದ್ದು ಬಿಟ್ಟಿದ್ದ ಮಧುಮತಿಯ ವದನದಲ್ಲಿ ಗರ್ವರೇಖೆ ಉದಯಿಸಿತು, ತುಟಿಗಳು ಮುಗುಳ್ನಗೆ ಬೀರಿದವು. "ಸೋಸೇನ ನೋಡಿದಿರಾ ಬನ್ನಿ ನಿಮ್ಮ ಜ್ಞಾಪಕ ಬಂದಾಗಲೆಲ್ಲಾ ಅಮ್ಮ ನನ್ನನ್ನ ಬಯ್ತಾ ಇರ್ತಾರೆ.... ತಾಯಿಯನ್ನು ತಮ್ಮಂದಿರನ್ನೂ, ಅವಳ ಮಕ್ಕಳನ್ನೂ, ನಿಮ್ಮ ನಾದಿನಿಯರನ್ನೂ ಎಲ್ಲರನ್ನೂ ನೋಡುವಿರಂತೆ. ಕಾಫಿ ತಿಂಡಿ ತಗೊಂಡಿದ್ದೀರಿ ತಾನೇ? ಎದ್ದು ನಿಂತಳು ಮಧುಮತಿ.

ವಿಚಿತ್ರ ಪ್ರಾಣಿಯನ್ನು ನೋಡುವಂತೆ ನೋಡಿದರು ಪ್ರಸಾದರಾವನ ಹುಡುಗರು...... "ಮಗೂ ಪ್ರಸಾದ್, ಹೀಗೆ ಹತ್ತಿರ ಬಾಪ್ಪ!" ತೇವವಾದ ಕಣ್ಣುಗಳನ್ನು ಒರೆಸಿಕೊಂಡು, ಕನ್ನಡಕ ಸರಿಪಡಿಸಿಕೊಳ್ಳುತ್ತಾ ಕರೆದರು ಜಾನಕಮ್ಮ. ವಿನಯದಿಂದ ನಮಸ್ಕರಿಸಿ, ಕುಶಲ ಪ್ರಶ್ನೆಗಳನ್ನು ಹಾಕಿದರು ಪ್ರಸಾದರಾವ್. ಎಲ್ಲರನ್ನೂ, ಇಂತಿಂತಹವರೆಂದು ಪರಿಚಯ ಮಾಡಿ ಕೊಟ್ಟರು ಗೋಪಾಲರಾವ್. ಕೆಲವು ನಿಮಿಷಗಳ ಕೆಳಗೆ ಅವರ ಮೂಲ ಪ್ರಸಾದರಾವ್ ಕಥೆ ಎಲ್ಲಾ ಕೇಳಿದ್ದರಿಂದ "ನಮಸ್ತೆ'' ಎಂದುಬಿಟ್ಟರು "ಯಾರು" ಎಂದೂ ಪ್ರಶ್ನಿಸದೆ.

ಯಾವ ಕೊರಗೂ ಕಾಣದ ಆ ವಿವಾಹ ಮಹೋತ್ಸವದಲ್ಲಿ, ಮಾತು ಕಥೆ, ಚರ್ಚೆ, ಹಾಸ್ಯ, ನಗು ಒಂದೇ ಗಲಾಟೆ. ಔತಣದ ಊಟ ಮಾಡುತ್ತ ಭಾವಮೈದುನರ ಪಂಕ್ತಿಯಲ್ಲಿ ಕೂತಿದ್ದರು ಪ್ರಸಾದರಾವ್. ಏನಯ್ಯ ಕಲೆಕ್ಟರ್ ಸಾಹೇಬ ಎನ್ನುತ್ತಾ ಏನೇನೋ ಹಾಸ್ಯ ಮಾಡಲು ಪ್ರಾರಂಭಿಸಿದ ರಾ ಶೇಖರ್....."

"ಕಂಡಕ್ಟರ್ ಮಗಾನೂ ಒಬ್ಬ ಕಲೆಕ್ಟರೇನಾ ಮಾವ?" ಎಂದ ವಾ ನಿನ ಮಾತಿಗೆ ಛಟೀರನೆ ಕೆನ್ನೆಗೆ ಹೊಡೆದಂತಾಗಿ, ತಕ್ಷಣ ಮಾತನ್ನು ನಿ